ಅಂತರ ಭಾರತೀಯ ಪುಸ್ತಕ ಮಾಲೆ

# ಮೂರು ಪಂಜಾಬಿ ನಾಟಕಗಳು

## ಕಮ್ಮಾರ, ಹಳೆಯ ಬಾಟಲಿಗಳು, ದಮಯಂತಿ

ಅನುವಾದ:
ಪಂಚಾಕ್ಷರಿ ಹಿರೇಮಠ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-3646-0
ಮೊದಲ ಮುದ್ರಣ : 2001 (ಶಕ 1923)

Original Title: Teen Punjabi Natak (*Punjabi*)
Kannada Translation: Mooru Panjabi Natakagalu
ರೂ. 65.00
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸದೆಹಲಿ-110016-ಇವರಿಂದ ಪ್ರಕಟಿತ.

# ಅನುಕ್ರಮಣಿಕೆ

# ಪ್ರಸ್ತಾವನೆ

ಪಂಜಾಬಿ ನಾಟಕದ ಇತಿಹಾಸ ಅಂಥ ದೀರ್ಘವಾದುದಲ್ಲವಾದರೂ ತುಂಬ ರೋಮಾಂಚನಕಾರಿಯಾಗಿದೆಂಬುದು ಸತ್ಯ. ಪಂಜಾಬಿ ಭಾಷೆಯಲ್ಲಿ ಮೊಟ್ಟ ಮೊದಲು ನಾಟಕವನ್ನು ರಚಿಸಿದವರು ಭಾಯೀ ವೀರಸಿಂಗ್. ನಾಟಕದ ಹೆಸರು 'ರಾಜಾ ಲಖ ದಾತಾಸಿಂಗ್'. ಆಗ ವೀರಸಿಂಗರಿಗೆ ನಾಟಕದಲ್ಲಿ ಅಭಿರುಚಿ ಇರಲಿಲ್ಲ. ಅದರೊಂದಿಗೆ ಆ ಕಾಲದ ಸಾಮಾಜಿಕ ವಾತಾವರಣವೂ ಇಂಥ ಅಭಿರುಚಿಗೆ ಅನುಕೂಲಕರವಾಗಿರಲಿಲ್ಲ. ಈ ಕಾರಣದಿಂದಾಗಿಯೇ ಈ ನಾಟಕದಲ್ಲಿ ಶುದ್ಧ ನಾಟಕೀಯತೆ ಇಲ್ಲದೆ ಹೋಯಿತಲ್ಲದೆ ಅಭಿನಯಕ್ಕೆ ಅಯೋಗ್ಯವೂ ಆಯಿತು. ಭಾಯೀ ವೀರಸಿಂಗ್, ಕೇವಲ ನಾಟಕೀಯ ಯುಕ್ತಿಗಳ ಸಂಯೋಜನೆಯಿರುವಂಥ, ಒಂದು ಸಾಹಿತ್ಯಿಕ ಕೃತಿಯೊಂದರ ಮೊದಲ ನಮೂನೆಯನ್ನು ಮಾತ್ರ ನೀಡಿದರೆಂದು ಹೇಳಬಹುದಾಗಿದೆ. ಸಾಹಿತ್ಯಕ್ಕೆ ದೂರಾದ ಅಭಿನಯ ಪರಂಪರೆಯೊಂದು ಪಂಜಾಬಿನಲ್ಲಿ ಆ ಕಾಲದಲ್ಲೂ ಇತ್ತು. ರಾಸ ಮತ್ತು ಲೀಲೆಗಳನ್ನು ಪಂಜಾಬಿನ ಜನತೆ ಅರಿತಿದ್ದರು. ಭಾಂಡ ಮತ್ತು ನಕಲ್ಚಿಗಳು ತಮ್ಮ ಸಣ್ಣ ಪುಟ್ಟ ಆಟ-ನಟನೆಗಳಿಂದ ಜನತೆಯನ್ನು ರಂಜಿಸುತ್ತಿದ್ದರು. ಆ ನಂತರ ಪಾರಸೀ ಕಂಪನಿಗಳ ನಾಟಕಗಳನ್ನು ನೋಡುತ್ತ ನೋಡುತ್ತ ಪಂಜಾಬಿಗಳ ಪ್ರತಿಭೆ ನಾಟಕ ರಚನೆಯತ್ತ ಉನ್ಮುಖವಾಯಿತು. ಈ ಕ್ಷೇತ್ರದಲ್ಲಿ ಲಾಹೋರ ನಿವಾಸಿ ಆಗಾಹಶ್ರ ಕಶ್ಮೀರಿ ಅವರು ತುಂಬ ಪ್ರಸಿದ್ಧಿ ಪಡೆದವರು, ಆದರೆ ಅವರು ನಾಟಕ ರಚನೆಗೆ ಉರ್ದು ಭಾಷೆಯನ್ನು ತಮ್ಮ ಮಾಧ್ಯಮ ಮಾಡಿಕೊಂಡರು. ಪಂಜಾಬಿಯಲ್ಲಿ ಇದೇ ಪರಂಪರೆಯ ಆಧಾರವಿಡಿದು ಕೆಲ ನಾಟಕಗಳು ರಚನೆಗೊಂಡವು. ಅವುಗಳಲ್ಲಿ ಕಿರ್ಪಾಸಾಗರ (ಸಂ: 1879) ಅವರು ಬರೆದ 'ರಾಜಾ ರಣಜೀತಸಿಂಹ-ಎರಡು ಭಾಗ' (1923, 1928) ಮತ್ತು ವೃಜಲಾಲಶಾಸ್ತ್ರಿ (ಸಂ: 1894) ಅವರು ಬರೆದ 'ಪೂರಣ ನಾಟಕ' ಬಹು ಪ್ರಮುಖವಾಗಿವೆ.

ಪಂಜಾಬಿಯಲ್ಲಿ ನಾಟಕ ಹಾಗೂ ರಂಗಮಂಚದ ಬುನಾದಿ ಹಾಕಿದವರು ಆಯ್. ಸಿ. ನಂದಾ ಅವರು. ಅವರಿಗೆ ಪಂಜಾಬಿಯಲ್ಲಿ ನಾಟಕ ರಚಿಸಲು ಓರ್ವ ಆಂಗ್ಲ ಮಹಿಳೆ ನೋರಾ ರಿಚರ್ಡ್ಸ ಅವರಿಂದ ಸಾಕಷ್ಟು ಪ್ರೇರಣೆ ದೊರೆಯಿತು. ಕಾಲೇಜುಗಳಲ್ಲಿನ ವಿದ್ಯಾರ್ಥಿಗಳು ನಾಟಕಗಳ ಬಗ್ಗೆ ತಮಗಿರುವ ಅಭಿರುಚಿ, ಆಸ್ಥೆಯನ್ನು ಇಂಗ್ಲೀಷ್ ನಾಟಕಗಳನ್ನು ಆಡಿ ವ್ಯಕ್ತಗೊಳಿಸುತ್ತಿದ್ದರು. ಇಂಗ್ಲಿಷ್ ನಾಟಕಗಳ ಶಿಥಿಲ ಪ್ರಸ್ತುತೀಕರಣ ಹಾಗೂ ಕೊರತೆಗಳನ್ನು, ತಪ್ಪುಗಳನ್ನು ನೋರಾ ರಿಚರ್ಡ್ಸ ಅರಿತಿದ್ದರು. ಇದರಿಂದ ಮೂಲ ರಚನೆಗೆ ನ್ಯಾಯ ದೊರಕುವುದಿಲ್ಲ ಹಾಗೂ ನಾಟಕ ನೋಡುವವರ ಪ್ರತಿಭೆ ವಿಕಾಸಗೊಳ್ಳುವುದಿಲ್ಲವೆಂದೂ ಅವರು

ತಿಳಿದಿದ್ದರು. ಅಂತೆಯೇ ಅವರು ನಾಟಕವಾಡುವವರಿಗೆ 'ನಿಮ್ಮದೇ ಭಾಷೆಯಲ್ಲಿ ಹಾಗೂ ನಿಮ್ಮ ಜೀವನದ ಸಮಸ್ಯೆಗಳನ್ನೆತ್ತಿಕೊಂಡು ನಾಟಕ ರಚಿಸಿ ಆಡಬೇಕು' ಎಂದು ಸಲಹೆ ಮಾಡಿದರು. ಆಗ ಆಯ್. ಸಿ. ನಂದಾ ಈ ಪ್ರೇರಣೆ ಪಡೆದೇ 'ಸುಭದ್ರಾ' ಮತ್ತು 'ವರಘರ' ಎಂಬ ಎರಡು ಉತ್ತಮ ನಾಟಕಗಳನ್ನು ರಚಿಸಿದರಲ್ಲದೆ ಅವುಗಳನ್ನು ಆಡಿಸಿದರೂ ಕೂಡ. ಆಯ್. ಸಿ. ನಂದಾ ಇಂಗ್ಲಿಷ್ ನಾಟಕಗಳ ವಿದ್ಯಾರ್ಥಿಯಾಗಿದ್ದರು. ಪಂಜಾಬಿ ಭಾಷೆಯ ಮೇಲೆ ಒಳ್ಳೇ ಪ್ರಭುತ್ವವಿತ್ತು, ಅಭಿನಯದಲ್ಲೂ ಪ್ರತಿಭಾನ್ವಿತರಾಗಿದ್ದರು. ಸಣ್ಣ-ಪುಟ್ಟ ಸ್ಟೇಜ ಸಜ್ಜುಗೊಳಿಸಿಕೊಂಡು ತಮ್ಮ ಸಮವಯಸ್ಕ ಮಿತ್ರರನ್ನು ಕೂಡಿಸಿಕೊಂಡು ಅದೆಷ್ಟೋ ಊರುಗಳಲ್ಲಿ ತಮ್ಮ ನಾಟಕಗಳನ್ನು ಆಡಿದರು. ಇದರಿಂದಾಗಿ ಪಂಜಾಬಿ ನಾಟಕ ಮತ್ತು ರಂಗಮಂಚ ತನ್ನದೇ ಆದ ನೆಲದಲ್ಲಿ ಕಾಲೂರಿ ನಿಲ್ಲುವಂತಾಯಿತು. ಈ ನಾಟಕ ರಾಸ ಲೀಲೆಗಿಂತ ಬೇರೆ ಪ್ರಕಾರದ್ದಾಗಿತ್ತು. ಇದರ ಸಮಸ್ಯೆಗಳು ಸಮಕಾಲಿಕ ಹಾಗೂ ಧರ್ಮ ನಿರಪೇಕ್ಷವಾಗಿದ್ದವು. ಇದರ ರಚನಾ-ಸಂಯೋಜನೆಯಲ್ಲಿ ಕವಿತೆಯ ಸಮ್ಮಿಶ್ರಣವಿರಲಿಲ್ಲ. ಇದರ ಪ್ರಸ್ತುತೀಕರಣದಲ್ಲಿ ರಾಸ-ಲೀಲಾ ಮತ್ತು ಪಾರಸೀ ನಾಟಕಗಳಲ್ಲಿಯ ಕೃತ್ರಿಮತೆ ಇರಲಿಲ್ಲ ಹಾಗಿದ್ದರೂ ಇದು ನಮ್ಮ ನಾಟಕದ ಆದಿ-ಬಿಂದು ಮಾತ್ರವಾಗಿತ್ತು, ರೇಖೆಯಾಗಲು ಇನ್ನೂ ದೀರ್ಘಯಾತ್ರೆ ಬಾಕಿ ಉಳಿದಿತ್ತು.

ಇದರ ನಂತರ ಪಂಜಾಬಿ ನಾಟಕ ರಚನೆ ವಿಸ್ತಾರಗೊಳ್ಳಲು ಅದಕ್ಕೆ ಎರಡು ಕಡೆಯಿಂದ ಪ್ರೋತ್ಸಾಹನ ದೊರೆಯಿತು. ವಿಶ್ವವಿದ್ಯಾಲಯ, ನಾಟಕಗಳನ್ನು ಪಠ್ಯಪುಸ್ತಕಗಳನ್ನಾಗಿ ಮಾಡಲು ಆರಂಭ ಮಾಡಿತು, ಹಾಗೂ ರೇಡಿಯೋ, ನಾಟಕಗಳನ್ನು ಪ್ರಸಾರ ಮಾಡತೊಡಗಿತು. ಹರಚರಣಸಿಂಗ್ ಮತ್ತು ಸಂತಸಿಂಗ್ ಸೇಖೋ ಅವರ ನಾಟಕಗಳು ನಿರಂತರವಾಗಿ ಅದೆಷ್ಟೋ ವರ್ಷಗಳ ಕಾಲ ಪಠ್ಯಪುಸ್ತಕಗಳೆಂದು ಸ್ವೀಕೃತವಾಗುತ್ತಲಿದ್ದವು. ಈ ಪ್ರೇರಣೆಯೇ ಪಂಜಾಬಿ ನಾಟಕ ಪರಂಪರೆಯ ಅನವರತ ವಿಕಾಸಕ್ಕೆ ವರದಾನವಾಗಿ ಪರಿಣಮಿಸಿತು. ಶಾಲೆ ಕಾಲೇಜುಗಳಲ್ಲಿಯ ಹವ್ಯಾಸಿ ನಟರಿಂದ ನಾಟಕ ಪರಂಪರೆ ಸಶಕ್ತವಾಗಿ ಬೆಳೆಯುತೊಡಗಿತು ಮತ್ತು 'ಇಪ್ಟಾ'ದ ಪ್ರಯತ್ನಗಳಿಂದಾಗಿ ನಾಟಕ ಸಾರ್ವಜನಿಕರಲ್ಲಿ ಉತ್ಸಾಹ, ಉತ್ಸುಕತೆ ಬೆಳೆಸಲು ತಕ್ಕುದಾಯಿತು. ಗಾರ್ಗಿ, ದುಗ್ಗಲ್, ಸೇಖೋ ಅವರ ನಾಟಕಗಳಿಗೆ ಈ ವಾತಾವರಣದಲ್ಲಿ ವಿಕಾಸಗೊಳ್ಳಲು ಅವಕಾಶ ಸಿಕ್ಕಿತು.

ಈಗಂತೂ ಪಂಜಾಬಿ ನಾಟಕ ತನ್ನ ಓದುಗರೊಂದಿಗೆ ಮತ್ತು ಪ್ರೇಕ್ಷಕರೊಂದಿಗೆ ಜೀವಂತ ಸಂಬಂಧವನ್ನು ಸ್ಥಾಪಿಸಿದೆ. ನಾಟಕ ಹಾಗೂ ಪ್ರೇಕ್ಷಕರ ಮಧ್ಯ ಜೀವಂತ ಸಂಬಂಧ ಬೆಸೆಯುವಲ್ಲಿ ಮಹತ್ವಪೂರ್ಣ ಪಾತ್ರವಹಿಸಿದವರು ಗುರ ಚರಣಸಿಂಗ್ (ಅಮೃತಸರ) ಮತ್ತು ಪ್ರೇಮ ಜಲಂಧರೀ (ದಿಲ್ಲಿ). ಪಂಜಾಬಿನ ಎರಡು ವಿಶ್ವವಿದ್ಯಾಲಯಗಳಲ್ಲಿ ನಾಟಕದ ಬಗ್ಗೆ ವ್ಯವಸ್ಥಿತ ರೂಪದಲ್ಲಿ ಶಿಕ್ಷಣ ನೀಡಲಾಗುತ್ತಲಿದೆ. ಈ ಶಿಕ್ಷಣದ ಪ್ರತಿಯೊಂದು ಆಯಾಮದ ಜ್ಞಾನವನ್ನು ವಿದ್ಯಾರ್ಥಿಗಳವರೆಗೂ ತಲುಪಿಸಲಾಗುತ್ತದೆ. ವಿದ್ಯೆ ಹಾಗೂ ಮನೋರಂಜನ ಈ ಎರಡೂ ದೃಷ್ಟಿಗಳಿಂದ ಪಂಜಾಬಿ ನಾಟಕ ವಿಕಾಸದ ಪಥದಲ್ಲಿ ಮುಂದೆ

ಸಾಗಿದೆಯೆಂದು ಅನ್ನಿಸುತ್ತದೆ. ಈ ಕಾಲದಲ್ಲಿ ಪ್ರೇಮ ಜಲಂಧರೀ ಅಲ್ಲದೆ ಕಪೂರಸಿಂಹ, ಘುಮ್ಮಣ, ಗುರುಚರಣಸಿಂಗ್, ಜಸೂಜಾ ಮುಂತಾದವರು ಶ್ರೇಷ್ಠ ನಾಟಕಗಳ ರಚನೆ ಮಾಡಿದ್ದಾರೆ.

ಈ ಸಂಗ್ರಹದಲ್ಲಿ ಮೂವರು ಪ್ರಮುಖ ನಾಟಕಕಾರರ ನಾಟಕಗಳನ್ನು ಸಂಗ್ರಹಿಸಲಾಗಿದೆ. ಈ ನಾಟಕಗಳ ಓದಿನಿಂದ ಪಂಜಾಬಿ-ನಾಟಕಗಳ ಗತಿ ಮತ್ತು ಗುಣದ ಬಗ್ಗೆ ಕೆಲಮಟ್ಟಿಗಾದರೂ ತಿಳಿವಳಿಕೆ ಮೂಡೀತೆಂದು ಆಶಿಸಲಾಗಿದೆ.

**ಕಮ್ಮಾರ** (ಲೋಹಕುಟ್, 1944): ಇದು ಪಂಜಾಬಿ ಭಾಷೆಯ ಮೊದಲ ಪ್ರೌಢ ನಾಟಕವಾಗಿದೆ. ಪ್ರೌಢತೆಯ ಮೂಲ ಪರಿಚಯವೇನೆಂದರೆ ಅದು ಜೀವನದ ವಿರೋಧ ಪಕ್ಷದ ನ್ಯಾಯವನ್ನು ಅರಿಯಲು ಪ್ರಯತ್ನಿಸುವುದು ಹಾಗೂ ಯಥಾರ್ಥದಿಂದಾಚೆಯ ಪ್ರತೀಕ-ಸಂಸಾರದಲ್ಲಿ ಪ್ರವೇಶ ಮಾಡಲು ಯೋಗ್ಯವಾಗುವುದು. ಪರಿವಾರ ಹಾಗೂ ಪ್ರೇಮದ ಪರಸ್ಪರ ಒಂಟಿತನ ಈ ನಾಟಕದ ಕೇಂದ್ರಬಿಂದುವಾಗಿದೆ. ಈ ನಾಟಕ 1944ರಲ್ಲಿ ಬರೆಯಲ್ಪಟ್ಟಿತು. ಆ ಕಾಲದ ಕಮ್ಮಾರರು ಈ ನಾಟಕದ ವಿರುದ್ಧ ರೋಷ ವ್ಯಕ್ತಮಾಡಿದರು. ಕಮ್ಮಾರರ ಜೀವನವನ್ನು ಇದರಲ್ಲಿ ಅಪಹಾಸ್ಯಕ್ಕೆ ಈಡುಮಾಡಲಾಗಿದೆ ಎಂದು ಅವರು ಭಾವಿಸಿದರು. ಆದರೆ ಈ ನಾಟಕದ ನಾಟಕಕಾರ ಬಲವಂತ ಗಾರ್ಗಿ ಕಮ್ಮಾರನ ಮುಖಾಂತರ ಪರಿವಾರ ಮತ್ತು ಧಂದೆಯ ನಿರ್ದಯಿ ದೈನಂದಿನ (ರೂಟೀನ) ಬದುಕಿನ ಸತ್ಯದ ಅನಾವರಣಗೊಳಿಸುವ ಪ್ರಯತ್ನ ನಡೆಸಿದ್ದರು. ಇಡೀ ನಾಟಕದಲ್ಲಿ ಕಮ್ಮಾರನ ಕುಲುಮೆ ಬೆಂಕಿ ಕಾರುತ್ತಲೇ ಇರುತ್ತದೆ. ಒಂದೆಡೆ ಪ್ರೇಮಿ, ಈ ಉರಿಯುತ್ತಿರುವ ಕುಲುಮೆಯ ಸುತ್ತ ಬೆಂಕಿ ತೆಗೆದುಕೊಳ್ಳುವ ನೆಪದಲ್ಲಿ ಸುತ್ತುತ್ತಿರುತ್ತಾನೆ, ಇನ್ನೊಂದೆಡೆ ಗಂಡ ಈ ಕುಲುಮೆಯ ಸುತ್ತ ತನ್ನ ಧಂಧೆಯಲ್ಲಿ ಮಗ್ನನಾಗಿರುತ್ತಾನೆ. ಈ ಕುಲುಮೆ ಪ್ರೇಮದ ಬೆಂಕಿಯನ್ನು ಆರದಂತೆ ಇರಿಸುವುದರ ಪ್ರತೀಕವೂ ಆಗಿದೆ ಮತ್ತು ಪರಿವಾರದ ಒಂದು ವ್ಯವಸ್ಥೆಯ ಪ್ರತೀಕವೂ ಆಗಿದೆ. ಮೇಲ್ನೋಟಕ್ಕೆ ಈ ನಾಟಕ ಕಮ್ಮಾರನ ಯಥಾರ್ಥ ಜೀವನವನ್ನು ಪ್ರಸ್ತುತಗೊಳಿಸುತ್ತದೆ ಎನ್ನಿಸಿದರೂ, ಕೊಂಚ ಚಿಂತನಶೀಲರಾಗಿ ನೋಡಿದರೆ ಇದು ಕೌಟುಂಬಿಕ ಜೀವನದ ಪ್ರತೀಕಾತ್ಮಕ ಚಿತ್ರವಾಗಿ ನಮ್ಮ ಕಣ್ಣ ಮುಂದೆ ನಿಲ್ಲುತ್ತದೆ. ಯಥಾರ್ಥದಿಂದ ಪ್ರತೀಕದೆಡೆಗೆ ಅಚೇತ ಅಥವಾ ಸಚೇತ ಯಾತ್ರೆಯೇ ಬಲವಂತ ಗಾರ್ಗಿಯ ಪ್ರಮುಖ ಕೊಡುಗೆಯಾಗಿದೆ.

'ಕಮ್ಮಾರ' ನಾಟಕದ ಮೊದಲ ಅಂಕದ ಮೊದಲ ವಾಕ್ಯ: "ಹಿಂಡೋತಂಬಗಿಯೊಂದಿಗೆ ಎಲ್ಲಿಗೆ ಹೊರಟಿರುವಿ ?". ನಾಟಕ 'ಎಲ್ಲಿಗೆ ಹೊರಟಿರುವಿ ?' ಎಂಬುದಕ್ಕೆ ಉತ್ತರವಾಗಿದೆ. ಮೊದಲ ದೃಶ್ಯದಿಂದಲೇ ಇದೊಂದು ಚೆನ್ನಾಗಿ ಬದುಕಲು ಹವಣಿಸುವ ಸಂಸಾರವೆಂಬುದು ಗೊತ್ತಾಗಿ ಬಿಡುತ್ತದೆ. ಇಬ್ಬರು ಮಕ್ಕಳಿದ್ದಾರೆ, ತಾಯಿಯಿದ್ದಾಳೆ, ಒಳ್ಳೆಯ ಕೆಲಸ, ಒಳ್ಳೆಯ ಕಮ್ಮಾರನಿದ್ದಾನೆ. ಕಮ್ಮಾರನ ಹೆಂಡತಿ ತನ್ನ ಹರುಜವ್ವನದ ಕಾಲದಲ್ಲಿ ಓರ್ವ ಪ್ರೇಮಿಯೊಂದಿಗೆ ಪ್ರೇಮಿಸಿದ್ದುಂಟು. ಆದರೆ ಈಗ ತನ್ನ ಗಂಡ, ಮಕ್ಕಳೊಂದಿಗೆ ಹಿಂದಿನ ಎಲ್ಲದನ್ನೂ

ಮರೆತು ಜೀವಿಸುವ ಯತ್ನ ಮಾಡುತ್ತಿದ್ದಾಳೆ, ಕೆಲಮಟ್ಟಿಗೆ ಯಶಸ್ವಿ ಕೂಡ ಆಗಿದ್ದಾಳೆ. ಅವಳ ಪ್ರೇಮಿ (ಗಜ್ಜಣ): "ನನಗಂತೂ ಒಂದೇ ಕಿಡಿ ಬೇಕು" ಎಂದು ಕೇಳುತ್ತಾನೆ. ಆದರೆ ಅವಳ (ಸಂತೀ) ಉತ್ತರ ಬಹು ಚುಟುಕು: "ಹೊತ್ತಿರುವ ಬೆಂಕಿಯನ್ನು ತಡವದಿರು". ಸಂತೀಯ ಮಗಳು ಬೈಣೋ ಕೂಡ ಬೆಂಕಿ, ಆದರೆ ಒಂದೆಡೆ ಇನ್ನೂ ಸ್ಥಿತಗೊಂಡ ಬೆಂಕಿ ಅಲ್ಲ. ಮನೆಯವರು ಅವಳ ನಿಶ್ಚಯ ಕಾರಣ ಮಾಡಿದ್ದಾರೆ. ಈ "ಉರಿಯುತ್ತಿರುವ ಬೆಂಕಿ"ಯನ್ನು ಒಂದೆಡೆ ಸ್ಥಿತಗೊಂಡ ಬೆಂಕಿಯನ್ನಾಗಿ ಮಾಡುವ ವ್ಯವಸ್ಥೆ ಮಾಡಲಾಗುತ್ತಿದೆ. ಬೈಣೋ, ಸುಬೇದಾರನ ಮಗ ಸರಬನ್‌ನೊಂದಿಗೆ ಪ್ರೇಮವಿರಿಸಿಕೊಂಡಿದ್ದಾಳೆ, ಇಡೀ ನಾಟಕದಲ್ಲಿ ಬೈಣೋ ಮತ್ತು ಸರಬನ್ ಅಥವಾ ಸಂತೀ ಮತ್ತು ಗಜ್ಜಣ ಇವರ ಪ್ರೇಮದ ಸಮ್ಮುಖದಲ್ಲಿ ಜಾತಿ-ಸಂಬಂಧ ಅಥವಾ ಉಚ್ಚ-ನೀಚಗಳ ಉಲ್ಲೇಖವಿಲ್ಲ. ಮೂಲ ಸಮಸ್ಯೆಯೇನೆಂದರೆ ನಾರಿಯ ಮೂಲಭೂತ ವಿಧೇಯತೆ, ಪ್ರಾಮಾಣಿಕತನ, ಪರಿವಾರದೊಂದಿಗಿದೆಯೋ ಅಥವಾ ಪ್ರೇಮದೊಂದಿಗಿದೆಯೋ ಎಂಬುದು. ನಾಟಕದ ಆರಂಭದಲ್ಲಿಯೇ ಪರಿವಾರ ಮತ್ತು ಪ್ರೇಮದಲ್ಲಿ ಭಿನ್ನತೆ ಇದೆಯೆಂಬುದು ಗೊತ್ತಾಗುತ್ತದೆ. "ಕತ್ಲಾದ ಮ್ಯಾಲ ಹೋಗಬೇಕಂದ್ರ ನೀನು ಕೆಟ್ಟ ವೇಳ್ಯಾದಾಗ ಯಾಕ ಓಡಾಡ್ತಿ ಅಂತಾ ಸಿಟ್ಟಿಗಿ ಬರ್ತಿ. ಜನ ಏನಾರ ಆಡಿಕೊಳ್ತಾರ ಅಂತೀದಿ". ಮನೆಯ ಮುಖ್ಯಸ್ಥನಿಗೆ ಇರುವ ಸಂಶಯ ಕೇವಲ ಮಗಳ ಮೇಲಲ್ಲ, ತಾಯಿಯ ಮೇಲೂ ಇದೆ. ದಾಂಪತ್ಯದ ಬಂಧನ ಸ್ವೀಕಾರ ಮಾಡುವ ಪೂರ್ವದಲ್ಲಿ ಹಾಗೂ ಸ್ವೀಕಾರ ಮಾಡಿದ ಮೇಲೂ ಮನುಷ್ಯನಲ್ಲಿ ಅವನ ವಿಶಿಷ್ಟವಾದ ನಿಜತ್ವ ಒಂದು ಜಾಗೃತವಾಗಿರುತ್ತದೆ, ಅದು ಪರಿವಾರದ ಒಂದು ಅಂಗವಾಗಲು ಸಾಧ್ಯವೇ ಆಗುವುದಿಲ್ಲ. ಈ ನಿಜತ್ವವನ್ನು ಪರಿವಾರದೊಂದಿಗೆ ಸಮಾವೇಶಗೊಳಿಸುವುದಕ್ಕಾಗಿ ಆಣೆ ಮಾಡಬೇಕಾಗುತ್ತದೆ, ಮಗಳು ಆಕಳ ಬಾಲ ಹಿಡಿದು ಆಣೆ ಮಾಡುತ್ತಾಳೆ, ಹಾಗೂ ತಾನು ಶೀಲಭ್ರಷ್ಟಳಾಗಿಲ್ಲವೆಂಬುದನ್ನು ಸಿದ್ಧಮಾಡುತ್ತಾಳೆ. ತಾಯಿಗೂ ಕೂಡ ಪರಿವಾರದ ಬಗ್ಗೆ ತಾನು ಮಾಡಿದ ಕೆಲಸಗಳ ಬಗ್ಗೆ ಲೆಕ್ಕ ಒಪ್ಪಿಸಿ ತನ್ನ ಪ್ರಾಮಾಣಿಕತೆಯ ಪ್ರಮಾಣ ನೀಡಬೇಕಾಗುತ್ತದೆ; "ಚಳಿಗಾಲದ ಸುದೀರ್ಘ ರಾತ್ರಿಗಳಲ್ಲಿ ಕುಲುಮೆಯ ಹತ್ತಿರ ಕುಳಿತು ನಿನಗಾಗಿ ಅಂಗಿ ಹೊಲಿಯುತ್ತಿರಲಿಲ್ಲವೇ ? ನಿನ್ನ ಹರಿದ ಅಂಗಿಗಳನ್ನು ಕತ್ತರಿಸಿ ಮಗ ದೀಪಾಗೆ ಅಂಗಿ ಹೊಲಿಯುತ್ತಿದ್ದುದನ್ನು ನೀನು ಮರೆತೆ ಏನು ? ಸ್ವತಃ ಹತ್ತಿ ಅರದು ಅಳ್ಳಿಮಾಡಿ ನಿನಗೆ ಹೊದಿಯಲು ಹಚ್ಚಡ ಮಾಡಿಕೊಡಲಿಲ್ಲವೇ ? ನಾನೆಂದೂ ಕೆಲಸದ ಬಗ್ಗೆ ಬೇಸರಮಾಡಿಕೊಂಡಿಲ್ಲ. ಕೆಲಸವೇ ನನ್ನ ಕಂಗೆಟ್ಟ ಮುಖವನ್ನು ಸರಿಗೊಳಿಸಿದೆ. ನಾನು, ನಿನ್ನನ್ನು ಸಂತಸದಿಂದ ಇಡಲು ಹಾಗೂ ಮನೆತನದ ಗೌರವ ಕಾಪಾಡಲು ಸಾಕಷ್ಟು ದುಡಿದಿದ್ದೇನೆ. ನಿನಗಾಗಿ ಮಗನನ್ನು ಹೆತ್ತೆ, ಮಗಳಿಗೆ ಜನ್ಮ ನೀಡಿದೆ. ಆದರೆ ನೀನು ಮಾತ್ರ ಯಾವಾಗಲೂ ನಿನ್ನ ಮನದಲ್ಲಿ ಸಂಶಯವನ್ನೇ ಇರಿಸಿಕೊಂಡಿ, ಅದನ್ನೇ ಬೆಳಿಸಿಕೊಂಡಿ; ಒಂದು ದಿನವೂ ನನಗೆ ಹೊರಗೆ ಕಾಲಿಡಗೊಡಲಿಲ್ಲ. ಕುಲುಮೆಯೊಂದಿಗೆ ನನ್ನನ್ನು ಬಿಗಿದಿಟ್ಟೆ. ಒಮ್ಮೆ ನನ್ನ ತವರು ಮನೆ ಬಿಟ್ಟವಳು, ಮತ್ತೊಮ್ಮೆ ಅತ್ತ ಹೋಗಲೂ ಬಿಡಲಿಲ್ಲ ನೀನು."

ಮೊದಲ ಅಂಕದಲ್ಲಿಯೇ ಕುಲುಮೆ ನಾಟಕದ ಕೇಂದ್ರೀಯ ಪ್ರತೀಕದ ಹಾಗೆ

ಸ್ಥಾಪಿತವಾಗುತ್ತದೆ. ಯಾರೋ ಆ ಕುಲುಮೆಯಲ್ಲಿ ಹೊತ್ತಿ ಉರಿಯುತ್ತಿರುವ ಕಿಡಿಗಾಗಿ ಅಲೆಯುತ್ತಾರೆ, ಹುಡುಕಾಟ ನಡೆಸುತ್ತಾರೆ; ಅಲ್ಲಿ ಚೆನ್ನಾಗಿ ಉರಿಯುತ್ತಿರುವ ಬೆಂಕಿಯನ್ನು ಅಸ್ತವ್ಯಸ್ತಗೊಳಿಸದಂತೆ ಇನ್ನಾರೋ ಎಚ್ಚರಿಕೆ ವಹಿಸುತ್ತಾರೆ. ಕುಲುಮೆಯ ಬೂದಿಯಲ್ಲಿ ಆಗೊಮ್ಮೆ ಈಗೊಮ್ಮೆ ಕಾಣಿಸಿಕೊಳ್ಳುವ ಬೆಂಕಿ-ಕಿಡಿ, ಇದ್ದಿಲಿಯ ಬಗ್ಗೆ ಮಾತನಾಡಿಕೊಳ್ಳುತ್ತಾರೆ. ಕೊನೆಗೆ ಕುಲುಮೆ ಇಡೀ ಪರಿವಾರದ ಸಂಕೇತವಾಗಿ ಪರಿಣಮಿಸುತ್ತದೆ. ಸಂತೀ ಹೇಳುತ್ತಾಳೆ: "ನನ್ನ ತಂದೆ ನನ್ನನ್ನು ನಿನ್ನೊಂದಿಗೆ ಮದುವೆ ಮಾಡಿ ತನ್ನ ಜವಾಬ್ದಾರಿ ಪೂರ್ಣಗೊಳಿಸಿದ, ಅದೇ ರೀತಿ ಕಮ್ಮಾರನ ಉರಿಯುತ್ತಿರುವ ದ್ವೇಷವನ್ನೂ ಪೋಷಿಸಿದ. ಕುಲುಮೆಯ ಶ್ರಾಪ. ನಾನು ಒಂದು ಕುಲುಮೆಯಿಂದ ಇನ್ನೊಂದು ಕುಲುಮೆಯ ಬೂದಿ ಹುಡುಕಾಡಲು ಇಲ್ಲಿಗೆ ಬಂದೆ".

ಎರಡನೆಯ ಅಂಕದಲ್ಲಿ ನಾಟಕಕಾರ ಗಾರ್ಗಿ, ಬೆಂಕಿ ಹಾಗೂ ವೇಗವನ್ನು ಸಮಾನಾರ್ಥ ನೀಡುವ ಶಬ್ದಗಳ ಹಾಗೆ ಬಳಸುತ್ತಾರೆ. "ಇಲ್ಲಿಯ ಪ್ರತಿಯೊಂದು ಹೆಣ್ಣಿನ ಎದೆಯಲ್ಲಿ ಒಂದು ವೇಗ ಹೊತ್ತಿ ಉರಿಯುತ್ತದೆ ಮತ್ತು ಅದರ ಬೆಂಕಿಯಲ್ಲಿ ಸುಟ್ಟು ಅವಳು ಬೂದಿಯಾಗಿದ್ದಾಳೆ." ಮೂಲ ಸಮಸ್ಯೆ: ಈ ವೇಗ ಪವಿತ್ರವಾಗಿರಲಿ ಅಪವಿತ್ರವಾಗಿರಲಿ ಇದನ್ನು ನಿಲ್ಲಿಸಲಾಗುವುದಿಲ್ಲ, ಇದು ಒಡೆದು ಹೊರಗೂ ಬರಬಹುದು. ವೇಗವನ್ನು ಸಂಯಮದಲ್ಲಿ ಇಡುವ ವರ್ಣನೆಯನ್ನು ಇಲ್ಲಿ 'ಹಗ್ಗ'ದ ಸಂಕೇತದಲ್ಲಿ ಕೊಡಲಾಗಿದೆ:

**ಸಂತೀ:** ಇದೇನು ತಗೊಂಡು ತಿರಗ್ತಾ ಇದ್ದಿ?
**ಬೈಣೋ:** ನಿನ್ನೆ ಆಕಳು ಕಣ್ಣೆ ಹರಕೊಂಡಿತ್ತು, ಅದನ್ನ ಸರಿ ಮಾಡ್ತಿದೀನಿ.
**ಸಂತೀ:** ಎಲಿ ನೋಡೋಣ.
**ಬೈಣೋ:** ತಗೋ ಹಿಡ್ಕೋ, ತಿಕ್ಕಿ ತಿಕ್ಕಿ ಎಲ್ಲ ಸವದು ಹೋಗೇದ, ನಾನೇನೋ ಹುರಿ ಹಾಕೀನಿ, ಆದರ ಇದು ಎರಡ ದಿನಾರ ಬರ್ತದೋ ಇಲ್ಲೋ.

ಕೊನೆಯಲ್ಲಿ ಭುಗಿಲ್ಲೆಂದ ಈ ವೇಗ ಅಪವಿತ್ರ ಸಿದ್ಧವಾಗುತ್ತದೆ. ಆಕಳನ್ನು ಹಿಡಿತದಲ್ಲಿಟ್ಟುಕೊಳ್ಳುವ ಹಗ್ಗ ಕೊನೆಗೂ ಹರಿದು ಹೋಗುತ್ತದೆ, ಬೈಣೋ ತನ್ನ ಪ್ರೇಮಿಯೊಂದಿಗೆ ಓಡಿ ಹೋಗುತ್ತಾಳೆ. ನಾಟಕದ ಆರಂಭದ ಸಾಲು: "ಹಿಂಡೋ ತಂಬಿಗಿಯೊಂದಿಗೆ ಎಲ್ಲಿಗೆ ಹೊರಟಿರುವಿ?" ಎಂಬುದರ ಅರ್ಥ ಇಲ್ಲಿ ಸ್ಪಷ್ಟವಾಗುತ್ತದೆ. 'ಹಿಂಡೋ ತಂಬಿಗಿ ತಗೊಂಡು ಬೈಣೋ ಆಕಳ ಹಿಂಡುವುದಕ್ಕೇ ಹೋಗುವುದು' ಎಂಬುದು ಸ್ಪಷ್ಟವಾಗಿಯೇ ಇದೆ. ಆದರೂ ತನ್ನ ವೇಗವನ್ನು ಪವಿತ್ರವಾಗಿಟ್ಟುಕೊಳ್ಳಬೇಕೆನ್ನುವ ತಾಯಿಗೆ ಗೊತ್ತಿದೆ, ಈ ವೇಗ ಅಪವಿತ್ರವೂ ಆಗಬಹುದು-ಎಂದು. ಹಿಂಡೋ ತಂಬಿಗಿ ತಗೊಂಡು ಬೈಣೋ, ಆಕಳ ಬಿಟ್ಟು ಬೇರೆ ಇನ್ನೆಲ್ಲೋ ಹೋಗಲೂ ಬಹುದಾಗಿದೆ. ತಂಬಿಗೆ ಆಕಳ ಕಾಲಲ್ಲಿ ಉಳ್ಳಾಡುತ್ತದೆ. ಕರು ಎಲ್ಲ ಹಾಲನ್ನೂ ಕುಡಿದಿದೆ. 'ಅವಳು ಹೊರಟು ಹೋದಳು'. ಪ್ರೇಮ ತನ್ನ ಸಮಸ್ಯೆಯನ್ನು ನಿವಾರಣೆ ಮಾಡಿಕೊಂಡಿತು, ಆದರೆ ಪರಿವಾರಕ್ಕೆ ಹೊಸ ಸಮಸ್ಯೆಯೊಂದು ಎದುರಾಯಿತು. "ಕಾಕೂನ ಮಗಳು ಓಡಿ ಹೋದಳು,

ಸುಬೇದಾರನ ಮಗ ಸರಬನ್‌ನೊಂದಿಗೆ. ಹಿಡಿದು ತರ್‍ರೋ ಆ ಲಜ್ಜೆಗೆಟ್ಟವಳನ್ನು. ತಾಯಿ ತಂದೆಯ ತಲೆಯ ಮೇಲೆ ಬೂದಿ ಹಾಕಿ ಹೋದ್ಲು. ಆ ನೀಚ ಹೆಂಗಸ್ನ ತುಂಡು ತುಂಡು ಮಾಡ್ರಿ. ಅವಳ ಕಾಲು ಮುರ್ದು ಹಾಕ್ರಿ.''

ನಾಟಕ ಇಲ್ಲೀಗೇ ಮುಗಿಯಬಹುದಾಗಿದೆ, ಆದರೆ ಇಲ್ಲೀಗೇ ಮುಗಿದು ಇದು ಯಥಾರ್ಥವಾದೀ ಆಗಬಹುದು. ತಾಯಿ-ತಂದೆ ಮತ್ತು ಮಕ್ಕಳ ಮಧ್ಯದಲ್ಲಿ ಸಂಯಮ ಮತ್ತು ಬಂಧನಹೀನತೆಯ ಒಂಟಿತನ ಈ ನಾಟಕದ ಕೇಂದ್ರ-ಬಿಂದುವಲ್ಲ. ಈ ನಾಟಕ ಇದಕ್ಕಿಂತ ಭಿನ್ನವಾದ ಮೂಲ ತತ್ವದೊಂದಿಗೆ ಹೊಂದಿಕೊಳ್ಳಲು ತವಕಪಡುತ್ತದೆ. ಬೈಣೋ ಮದುವೆಗೆ ಮುಂಚೆಯೇ ತಾನು ಪ್ರೇಮಿಸಿದವನೊಂದಿಗೆ ಹೊರಟು ಹೋಗುತ್ತಾಳೆ. ಅವಳು ತನ್ನ ಪರಿವಾರದವರು ಹೇಳಿದ್ದನ್ನು ಕೇಳಲಿಲ್ಲ. ಆದರೆ ತನ್ನ ಮನೆಯವರು ಹೇಳಿದ್ದನ್ನು ಕೇಳಿ ತನ್ನ ಇಚ್ಛೆಯ ವಿರುದ್ಧ ಮದುವೆ ಮಾಡಿಕೊಂಡು ಮಕ್ಕಳು-ಮರಿಯನ್ನು ಹೆತ್ತು, ಮನೆತನದ ಎಲ್ಲ ಕರ್ತವ್ಯಗಳನ್ನು ನಿಭಾಯಿಸುತ್ತ ತನ್ನ ಉರಿದೆದ್ದ ಬೆಂಕಿಯನ್ನು ಶಾಂತಗೊಳಿಸಿ, ಸ್ಥಿರಗೊಳಿಸಿಕೊಂಡ ಹೆಣ್ಣಿನ ಸಮಸ್ಯೆಯನ್ನು ಸಂಪೂರ್ಣ ವೇಗದೊಂದಿಗೆ ಚಿತ್ರಿಸುವುದು ಇಲ್ಲಿ ಇನ್ನೂ ಬಾಕಿ ಇದೆ.

ನಾಟಕಕಾರ ಗಾರ್ಗಿ ತಮ್ಮ ನಾಟಕದ ವಿಷಯದಲ್ಲಿ ಹೀಗೆ ಹೇಳುತ್ತಾರೆ: ''ಹೊಸ ಜನಾಂಗದಲ್ಲಿ ವಿದ್ರೋಹವಿದೆ, ಹಳೆಯ ತಲೆಮಾರಿನವರ ವಿರುದ್ಧ ಹೊಸ ಚೇತನ ಹಳೆಯ ಚೇತನದ ಕಂಚುಕಿ ಕಳಚಿ ಮುಂದೆ ಸಾಗುತ್ತದೆ. ಆದರೆ ನಾನು ಈ ನಾಟಕದಲ್ಲಿ ಮಾನಸಿಕ ವಿದ್ರೋಹದ ಕಿಡಿಯನ್ನು ತಾಯಿಯಿಂದ ಮಗಳೆಡೆಗೆ ಹಾರಿಸಿಲ್ಲ, ಆದರೆ ಮಗಳಿಂದ ತಾಯಿಯ ಕಡೆಗೆ ಹಾರಿಸಿರುವೆ. ನನ್ನ ರಚನೆಯ ವಿಷಯದಲ್ಲಿ ವಿಮರ್ಶಾತ್ಮಕ ನಿರ್ಣಯ ಕೊಡುವುದು ಸಮಂಜಸವಾದುದಲ್ಲ.'' ತಮ್ಮ ನಾಟಕದ ವಿಷಯದಲ್ಲಿ ನಾಟಕಕಾರರಾಗಿ ಅವರು ನೀಡಿರುವ ಈ ವಿಮರ್ಶಾತ್ಮಕ ಹೇಳಿಕೆ ನಿಜವೆಂದು ಅನ್ನಿಸುವುದಿಲ್ಲ. ಈ ನಾಟಕ ಹೊಸ-ಹಳೆಯ ಚೇತನವನ್ನು ಅಥವಾ ಹೊಸ-ಹಳೆಯ ಜನಾಂಗವನ್ನು ಪ್ರಸ್ತುತಗೊಳಿಸುವುದೇ ಇಲ್ಲ. ಬೈಣೋ ಓಡಿಹೋಗುವುದು ಹೊಸ ಜನಾಂಗದ ಹಳೆಯ ಜನಾಂಗದೊಂದಿಗಿನ ವಿದ್ರೋಹವಾದರೆ, ಸಂತೀ ಓಡಿಹೋಗುವುದು ಯಾವ ಜನಾಂಗದ ಯಾವ ಜನಾಂಗದೊಂದಿಗಿನ ವಿದ್ರೋಹ ? ಹಳೆಯದರೊಂದಿಗೆ ಹೊಸದರ ವಿದ್ರೋಹವಂತೂ ಅಲ್ಲವೇ ಅಲ್ಲ. ಇದೇನು ಹಳೆಯ ಜನಾಂಗದ ಹೊಸದರ ವಿರುದ್ಧ ವಿದ್ರೋಹವಾಗಿದೆಯೇ ? ನಾಟಕದ ರಚನೆ ಇತ್ತ ಯಾವ ಸಂಕೇತವನ್ನೂ ನೀಡುವುದಿಲ್ಲ. ಬೈಣೋ ಓಡಿ ಹೋಗುವುದು ಕೇವಲ ಹೊಸ ಚೇತನದ ಪರಿಣಾಮವಲ್ಲ, ಬೈಣೋ ಸರಬನ್‌ನೊಂದಿಗಿನ ಪ್ರೇಮ. ಸಂತೀಯ ಗಜ್ಜಣನೊಂದಿಗಿನ ಪ್ರೇಮದ ಪುನರಾವೃತ್ತಿಯಾಗಿದೆ. ಓಡಿ ಹೋಗುವ ನಿರ್ಣಯವನ್ನು ಸಂತೀ ಕೂಡ ಮಾಡಿದ್ದಳು, ಆದರೆ ಅವಳು ಅಂಜಿದಳು. ಈ ನಿರ್ಣಯವನ್ನು ಅದರ ಚರಮಸೀಮೆಯವರೆಗೂ ತಲುಪಿಸಲು ತಡವಾಯಿತು. ಹೊಸ ಪೀಳಿಗೆಯ ವಿದ್ರೋಹ ಹಳೆಯ ಪೀಳಿಗೆಯ ವಿರುದ್ಧವಲ್ಲ, ಪರಿವಾರದ

ವಿರುದ್ಧ ಪ್ರೇಮದ ವಿದ್ರೋಹವಾಗಿದೆ. ಬೈಣೋ ತವರುಮನೆ ಬಿಟ್ಟಳು, ಸಂತೀ ತನ್ನದೇ ಪರಿವಾರವನ್ನು ಬಿಟ್ಟುಹೋದಳು, ತನ್ನ ಗಂಡನನ್ನು ಮಾತ್ರವಲ್ಲ, ತನ್ನ ಮಗನನ್ನು ಕೂಡ. ಅಷ್ಟೇ ಅಲ್ಲ ಹೊಲಿದ ಅಂಗಿ, ತಾನೇ ಅರಳಿ ತೆಗೆದು ಮಾಡಿದ ಮೇಲು ಹೊದಿಕೆ, ಚಾದರ, ಎಲ್ಲವನ್ನೂ ಬಿಟ್ಟು ಹೋದಳು. ನಿಜವಾದ ವಿದ್ರೋಹ ಇಲ್ಲಿದೆ. ಏರುಜವ್ವನದಲ್ಲಿ ತರುಣಿಯರು ತರುಣರೊಂದಿಗೆ ಓಡಿ ಹೋದ ಕಥೆಗಳು ಜನಾಂಗದ ಪಳೆಯುಳಿಕೆಗಳ ಮೇಲೆ ಬೇಕಾದಷ್ಟು ಕೆತ್ತಲ್ಪಟ್ಟಿವೆ. ಆದರೆ ಮಧ್ಯ ವಯಸ್ಸಿನಲ್ಲಿ, ನೆಲೆ ನಿಂತ ಪರಿವಾರ ಬಿಟ್ಟು ಮಧ್ಯ ವಯಸ್ಸಿನ ಪ್ರೇಮಿಯೊಂದಿಗೆ ಓಡಿ ಹೋಗುವ ಕಥೆಗೆ ಆಳವಾದ ಆಧಾರದ ಅವಶ್ಯಕತೆ ಇದೆ. "ನಾನು ಈ ನಾಟಕದಲ್ಲಿ ಮಾನಸಿಕ ವಿದ್ರೋಹದ ಕಿಡಿಯನ್ನು ತಾಯಿಯಿಂದ ಮಗಳೆಡೆಗೆ ಹಾರಿಸಿಲ್ಲ, ಮಗಳಿಂದ ತಾಯಿಯೆಡೆಗೆ ಹಾರಿಸಿದ್ದೇನೆ," ಎಂಬ ಮಾತು ಕೂಡ ಉಚಿತವಾಗಿ ತೋರುವುದಿಲ್ಲ. ಮಗಳ ಈ ತರಹದ ವಿದ್ರೋಹಕ್ಕೆ ತಾಯಿ ಕಾರಣಳಾಗಬಲ್ಲಳೇ ? ಅಥವಾ ಮಗಳು ತಾಯಿಗೆ ಈ ವಿದ್ರೋಹದ ಪ್ರೇರಣೆ ನೀಡಿ ಹೋದಳೆ ? ಮಗಳು ಓಡಿ ಹೋಗುವ ಮುನ್ನ ತಾಯಿಯ ಹೃದಯದಲ್ಲಿ ಇಂಥ ಯಾವ ವೇಗವೂ ಇರಲಿಲ್ಲವೇ ? ಸಿಡಿದೆದ್ದ ಉರಿ, ಸ್ಥಿತಗೊಂಡ ಉರಿ, ಬೂದಿಯಲ್ಲಿ ಆರುತ್ತಿರುವ ಇದ್ದಿ ಇತ್ಯಾದಿಗಳ ಮಾತು ಇದಕ್ಕೂ ಬಹಳ ಮೊದಲೇ ಆರಂಭವಾಗಿದ್ದವು. ಬೈಣೋ ಓಡಿ ಹೋದದ್ದರಿಂದ ಈ ಬೆಂಕಿ ಪ್ರಚಂಡವಾಯ್ತು, ಅಷ್ಟೇ.

ಈ ನಾಟಕದ ನಾಯಿಕೆ ಸಂತೀ, ಬೈಣೋ ಅಲ್ಲ. ಸಂತೀಯ ಪ್ರೇಮಿ ಗಜ್ಜಣನೇ ಈ ನಾಟಕದ ಸುತ್ತ-ಮುತ್ತ ಇದ್ದಾನೆ, ಸರಬನ್‌ನ ಉಲ್ಲೇಖ ಮಾತ್ರವಿದೆ, ಅದಕ್ಕಿಂತ ಹೆಚ್ಚಿನ ಮಹತ್ವವಿಲ್ಲ, ಅವನ ಪಾತ್ರಕ್ಕೆ. ನಾಟಕದಲ್ಲಿರುವ ಕವಿತೆಗಳೆಲ್ಲ ಸಂತೀಗೆ ಸಂಬಂಧಪಟ್ಟವು, ಅವಳ ಪ್ರೇಮವನ್ನೇ ಇಲ್ಲಿ ಗಂಭೀರತೆಯೊಂದಿಗೆ ಚಿತ್ರಿತಗೊಳಿಸಲಾಗಿದೆ. ಅವಳ ಒಳಗೇ: "ಅಕಸ್ಮಾತ್ತಾಗಿ ಇಂದು ಬಿಸಿಲಿನ ಸುಗಂಧ ಮತ್ತು ನೀರಿನ ಮಿಡಿತ ಜಾಗೃತಗೊಂಡಿವೆ." "ರಾತ್ರಿಯಲ್ಲಿ ನನ್ನ (ಸಂತೀ) ಒಳಗೆ ಅರಳಿ ಮರದ ಟೊಂಗೆಗಳು ಮುರಿಯುತ್ತಿರುವುದರ ಸಪ್ಪಳ ಕೇಳಿ ಬರುತ್ತಿತ್ತು ಮತ್ತು ನನ್ನೆದೆಯ ಮೇಲೆ ಸೂರ್ಯ ಸುಡಲಾರಂಭಿಸುತ್ತಾನೆ. ಅದೆಷ್ಟೋ ಸಲ ಕುಲುಮೆಯ ಬೂದಿಯನ್ನು ತೆಗೆಯುತ್ತ ನಾನು ನನ್ನ ಕೈಗಳನ್ನು ನೋಡಿಕೊಳ್ಳುತ್ತೇನೆ ಮತ್ತೆ ನಿನ್ನ (ಗಜ್ಜಣ್ಣನ) ನೆನಪು ಬರುತ್ತದೆ ಮತ್ತು ನನ್ನ ಕೈಗಳು ನೀರಿನಿಂದ ತೊಳೆಯಲ್ಪಡುತ್ತವೆ ಹಾಗೂ ನನ್ನ ಒಳಗೆ ಬೆಳಕು ಮೂಡಲಾರಂಭಿಸುತ್ತದೆ." ಈ ನಾಟಕದ ಕೊನೆಯ ಅಂಕ ಕಾವ್ಯಮಯವಾಗಲೇ ಬೇಕಿತ್ತು. ಈ ನಾಟಕ ಸಾಮಾಜಿಕ ಸಮಸ್ಯೆಯಿಂದಾಗಿ ಅಲ್ಲ, ಮಾನವೀಯ ಚರಿತ್ರೆಯೊಂದಿಗೆ ಸಂಬಂಧವಿದೆ, ಮೂಲಭೂತ ಪ್ರಕೃತಿಯಿಂದ ಸಂಬಂಧ ಪಡೆದಿರುವುದರ ಕಾರಣದಿಂದ ಇದರ ರಚನೆ ಕಾವ್ಯಮಯ ಪ್ರತೀಕ-ಶೈಲಿಯಲ್ಲಿಯೇ ಆಗಬೇಕಾದುದು ಅವಶ್ಯ. ಕಾಕೂ ಹಾಗೂ ಸಂತೀ ಕೂಡ ಯಾವಾಗಲೂ ಕಮ್ಮಾರ-ಕಮ್ಮಾರನ ಹೆಂಡತಿಯ ಹಾಗೆಯೇ ಮಾತನಾಡುವುದಿಲ್ಲ, ಅವರು ಮೂಲ ಮಾನವತೆಯ ಪ್ರತೀಕವಾಗುತ್ತಾರೆ ಹಾಗೂ ಅವರ ಮಾತುಕತೆ ವಾಸ್ತವಿಕತೆಯ ಪರಿಧಿಯನ್ನು ದಾಟಿ ನಿಲ್ಲುತ್ತವೆ.

ಪ್ರೇಮಕ್ಕೆ ತನಗೆ ಬೇಕಾದ ಸುಂದರತೆ ಸಿಕ್ಕಿರಬಹುದು. ಪರಿವಾರ ಭಿನ್ನವಾಯಿತು, ಹಾಳಾಗಲಿಲ್ಲ. ಪರಿವಾರದ ಯಜಮಾನ ತನ್ನ ಕುಲುಮೆಯ ಹತ್ತಿರ ತನ್ನ ಜಾಗೆಯಲ್ಲಿ ಕುಳಿತಿದ್ದಾನೆ. ಅವನ ವಂಶದ ಪ್ರತೀಕವಾಗಿ ದೀಪಾ ಅವನ ಹತ್ತಿರವಿದ್ದಾನೆ. ಅವನು ತನ್ನ ವಂಶಪರಂಪರೆಯ ಕೆಲಸವನ್ನು ಒಪ್ಪಿಕೊಂಡಿದ್ದಾನೆ. "ನಾನು ದೊಡ್ಡವನಾದಾಗ ದೊಡ್ಡ ದೊಡ್ಡ ಕಡಾಯಿ ಮಾಡುವೆ" ಎನ್ನುತ್ತಾನೆ. ನಾಟಕದ ಕೊನೆಯಲ್ಲಿ ದೀಪಾ ತಿದಿ ಜಗ್ಗುತ್ತಾನೆ ಕಾಕೂ ಕಾದ ಕಬ್ಬಿಣ ಹಣೆಯುತ್ತಾನೆ. ಪ್ರೇಮ ಸ್ವತಂತ್ರವಾದ ದಾರಿಯಲ್ಲಿ ಹೊರಟು ಹೋಯಿತು, ಆದರೆ ಪರಿವಾರ ತನ್ನ ಸ್ಥಾನದಲ್ಲಿ ಸ್ಥಿರವಾಗಿದೆ. ಸಂತೀ ಮತ್ತು ಬೈಣೋಗೆ ಇದರ ಅವಶ್ಯಕತೆ ಇರಲಿಲ್ಲ, ದೀಪಾಗೆ ಇದೆ, "ದೀಪಾ ನನ್ನ ಜೊತೆ ಕೂಡು"-ಇದು ಈ ನಾಟಕದ ಕೊನೆಯ ವಾಕ್ಯ. ಈಗ ಕಾಕೂ ದೀಪಾನ ತಂದೆಯೂ ಹೌದು ತಾಯಿಯೂ ಹೌದು. ಪ್ರೇಮ ಮತ್ತು ಪರಿವಾರ ಎರಡೂ ತನ್ನ ಅಹಂ ಅನ್ನು ಜಾಗೃತಗೊಳಿಸಿವೆ.

**ಹಳೆಯ ಬಾಟಲಿಗಳು** (ಪುರಾನಿ ಬೋತಲೇ, 1954): ಪ್ರೇಮ ಮತ್ತು ಪರಿವಾರದ ಶತಶತಮಾನಗಳ ಹಳೆಯದಾದ ಸಮಸ್ಯೆಯ ಸುತ್ತಲೂ ರಚನೆಗೊಂಡಿದೆ-ಈ ನಾಟಕ. ಹೆಣ್ಣು-ಗಂಡು ಮತ್ತೆ-ಮತ್ತೆ ಪರಿವಾರದ ಹಳೆಯ ಬಾಟಲಿಯಲ್ಲಿ ಪ್ರೇಮದ ಹೊಸ ಮದಿರೆಯನ್ನು ಹಾಕುತ್ತಾರೆ ಮತ್ತು ಅದನ್ನು ಮತ್ತೆ ಚೆಲ್ಲಿ ತಮ್ಮಂಥದೇ ವಸ್ತುವಿನಿಂದ ತುಂಬಿಕೊಳ್ಳುತ್ತಾರೆ. ಪರಿವಾರ ಕೇವಲ ಬಾಟಲಿ ಅಲ್ಲ, ತಮ್ಮ ಮನಸ್ಸಿಗೆ ಬಂದಂಥ ಮದಿರೆ ತುಂಬಲು, ಪರಿವಾರ ಕೇವಲ ರೂಪವಲ್ಲ, ಅದಕ್ಕೆ ಅದರದೇ ಆದ ಅಸ್ತಿತ್ವವಿದೆ, ಹೊಸ ಆಕಾರ ಈ ರೂಪದಲ್ಲಿ ಸಮಾವೇಶಗೊಳ್ಳುವುದಿಲ್ಲ, ಯಾವ ಯಾವಾಗ ಇದರಲ್ಲಿ ಹೊಸ ಆಕಾರವನ್ನು ತುಂಬುವ ಯತ್ನ ನಡೆದಿದೆಯೋ ಆಗಾಗಲೆಲ್ಲ ಸ್ವತಃ ರೂಪ ತನ್ನನ್ನು ಕಳೆದುಕೊಳ್ಳಲಾರಂಭಿಸುತ್ತದೆ.

ಶೇಖರ ಮತ್ತು ದಮಯಂತಿಯರದು ಒಂದು ಭದ್ರ ಸಂಸಾರ, ಮಗುವಿದೆ, ಸುಖ-ಸೌಲಭ್ಯಕ್ಕೆ ಬೇಕಾದ ಎಲ್ಲ ಸಾಧನಗಳಿವೆ. ಆದರೆ ಪತಿ-ಪತ್ನಿ ಇಬ್ಬರೂ ಪರಿವಾರದಿಂದ ಹೊರಗೆ ಬೇರೆ ಇನ್ನಾವುದೋ ವ್ಯಕ್ತಿಯೊಂದಿಗೆ ಆಕರ್ಷಿತರಾಗಿದ್ದಾರೆ; ದಮಯಂತಿ ಪ್ರೇಮನ ಕಡೆಗೆ, ಶೇಖರ ಹುಸ್ನಾಳ ಕಡೆಗೆ. ಮನೆತನದ ಗೌರವವೆಲ್ಲ ಮಣ್ಣುಪಾಲು. ಅವರ ಆಳುಗಳು ಕೂಡ ಸಂಸಾರದ ಬಂಧನ ಮುರಿದು ಬೇರೆಡೆ ವಾಲುತ್ತಾರೆ. ಪ್ರತಿಯೊಂದೆಡೆ ರೂಪ ವಿದ್ರೂಪವಾಗಿದೆ, ಮುಗ್ಧ ಮಗು ಕೂಡ ಈ ಅಶಾಂತಿಯ ಪರಿಧಿಯಲ್ಲಿ ಸಿಕ್ಕಿದೆ. ಅದು ದೊಡ್ಡವರ ಪ್ರೇಮ ಪ್ರಕರಣದ ಮೇಲೆ ಹಾಸ್ಯ, ವ್ಯಂಗ್ಯ ಮಾಡಲು ಯೋಗ್ಯವಾಗಿದೆ. ಮೂಲ ಪ್ರಶ್ನೆ ಹಳೆಯ ರೂಪ ಮತ್ತು ಹೊಸ ವಸ್ತುವಿನ ಪರಸ್ಪರ ಸಂಬಂಧಕ್ಕೆ ಸಂಬಂಧಿಸಿದ್ದಾಗಿದೆ. ಪಾರಿವಾರಿಕ ರೂಪದ ಪರಿವಾರದ ಹೊರಗಿನ ವಸ್ತುವಿನೊಂದಿಗೆ ಪ್ರೇಮವಿರುವುದರಿಂದ ಎಲ್ಲವೂ ತಿರುವು-ಮುರುವು ಕಾಣಿಸುತ್ತದೆ.

ಗಾರ್ಗಿ, ಪ್ರೇಮ ಮತ್ತು ಪರಿವಾರದ ಯಾವ ಸಮಸ್ಯೆಯನ್ನು ಸ್ಪರ್ಶ ಮಾಡಿದ್ದರೋ, ದುಗ್ಗಲ್ ಅದರ ವಿಸ್ತರಣೆಯನ್ನು ಇಲ್ಲಿ ಮಾಡಿದ್ದಾರೆ; ಗಾರ್ಗಿ ಮಗಳ ವಿದ್ರೋಹವನ್ನು ಕೇವಲ ತಂದೆಯ ವಿರುದ್ಧ ಮಾತ್ರ ತೋರಿಸಿರಲಿಲ್ಲ, ಮಗಳು

ಮತ್ತು ಹೆಂಡತಿಯು, ತಂದೆ ಮತ್ತು ಗಂಡನ ವಿರುದ್ಧವೂ ತೋರಿಸಲಾಗಿತ್ತು. ಆದರೆ ಇದರಲ್ಲಿಯೂ ಒಂದು ಪರಂಪರೆಯ ಅಂಶವಿತ್ತು. ತಾಯಿ ಮತ್ತು ಮಗಳ ಇಬ್ಬರು ಪ್ರೇಮಿಗಳೂ ಮದುವೆಯ ಮುಂಚಿನವರೇ ಆಗಿದ್ದರು. ದುಗ್ಗಲ್, ಪ್ರೇಮದ ಈ ಪರಂಪರೆಯ ಆಚೆಯೂ ಕೂಡ ನೋಡುತ್ತಾರೆ. ಪ್ರೇಮಿಯ ನಿರ್ಣಯ ವಿವಾಹದ ನಂತರವೂ ಸಾಧ್ಯವಿರುತ್ತದೆ, ವಿವಾಹದ ಪೂರ್ವದಲ್ಲಿಯೂ. ಪ್ರೇಮಿ-ಪ್ರೇಯಸಿಯರಲ್ಲಿ ಒಬ್ಬರು ವಿವಾಹಿತ ಇನ್ನೊಬ್ಬರು ಅವಿವಾಹಿತರಾಗಿದ್ದಾರೆ, ಇನ್ನೊಂದೆಡೆ ಪ್ರೇಮ, ವಿವಾಹಿತ ಮತ್ತು ವಿಧವೆಯ ಮಧ್ಯ, ವಿವಾಹ ಪೂರ್ವದ ಪ್ರೇಮ ಸಂಬಂಧ ಪರಂಪರೆಯನ್ನು ಮುರಿದು, ದುಗ್ಗಲ್ ಪರಂಪರೆಯ ವಿರೋಧಿಯಾದ, ಸ್ವತಂತ್ರ ಮತ್ತು ವಿಕರಾಳ ರೂಪವನ್ನು ಚಿತ್ರಿಸಿದ್ದಾರೆ, ಪ್ರೇಮ ಯಾವ ಸ್ಥಿತಿಯಲ್ಲಾದರೂ ಸಂಭವನೀಯ ಎಂಬುದನ್ನು ತೋರಿದ್ದಾರೆ.

ದುಗ್ಗಲ ಈ ನಾಟಕದ ಗದ್ಯ ಸಂವಾದದ ರೂಪವನ್ನು ಬದಲಿಸಿದ್ದಾರೆ, ಅದನ್ನು ಅವರು ಕವಿತೆಯ ಹಾಗೆ ಬರೆದಿದ್ದಾರೆ. ಗದ್ಯವನ್ನು ಕವಿತೆಯ ತೆರದಿ ಓದುವುದರಿಂದ ಅದು ಕವಿತೆಯಾಗುವುದಿಲ್ಲ. ಆದರೆ ಜೀವನದ ಗದ್ಯದಲ್ಲಿ ನಿಹಿತವಾದ ಕಾವ್ಯಮಯ ಅರ್ಥದ ಸಂಕೇತ ಮಾತ್ರ ಅವಶ್ಯ ಆಗುತ್ತದೆ. ಈ ನಾಟಕದ ಲೇಖನ-ಶೈಲಿಯೇ ಇದರ ಕೇಂದ್ರೀಯ ಪ್ರತೀಕವಾಗಿದೆ. ದುಗ್ಗಲ್, ಸಂಸಾರದ ಅಶಾಂತಿಯನ್ನು ಯಥಾರ್ಥದ ತಳಹದಿಯ ಮೇಲೆ ಅಲ್ಲ, ಕಾವ್ಯದ ತಳಹದಿಯ ಮೇಲೆ ಪ್ರಸ್ತುತಗೊಳಿಸಿದ್ದಾರೆ. ಈ ನಾಟಕದ ಆರಂಭದಲ್ಲಿ ಪರಿವಾರದ ಕವಿತೆ ಮಗು ಚೇತನ. ಪರಿವಾರದ ಪ್ರಮುಖ ಜೀವಿಗಳಾದ ತಾಯಿ-ತಂದೆ ಮಗುವಿನ ಬಗೆಗೆ ತೋರುವ ವ್ಯವಹಾರ ರಸಹೀನ ಗದ್ಯದ ಹಾಗಿದೆ. ಅವರು ತಾಯಿ-ತಂದೆಯಾಗಿರುವುದಲ್ಲದೆ ಮತ್ತೆ ಯಾರದೋ ಪ್ರೇಮಿ, ಪ್ರೇಯಸಿಯರಾಗಿದ್ದಾರೆ. ಚೇತನನ ಮುಗ್ಧತೆ ತನ್ನ ತಾಯಿ-ತಂದೆಯನ್ನು ಉಪಹಾಸಗೈಯುತ್ತದೆ. ಆಳು ಹಾಗೂ ದಾಸಿಯ ಪ್ರೇಮ ವಾರ್ತಾಲಾಪ ಕೂಡ ಮಕ್ಕಳ ಕಾರಣದಿಂದಾಗಿ ಯಾವುದೋ ವಿದೂಷಕನ ಮಾತುಕತೆಯಾಗಿ ತೋರುತ್ತವೆ. ಪ್ರೇಮದಲ್ಲಿ ಕುರುಡರಾದ ಗಂಡ-ಹೆಂಡತಿ ತಮ್ಮ ತಮ್ಮ ಪ್ರೇಮಿಗಳನ್ನು ಕೂಡಲು ಒಬ್ಬನೇ ಗೆಳೆಯನ ಮನೆ ತಲುಪುತ್ತಾರೆ, ತಲುಪುವ ಮೊದಲೇ ಇದು ಹಾಸ್ಯದ ವಿಷಯವಾಗುತ್ತದೆ. ಪರಿವಾರದ ಎಲ್ಲ ನಿಯಮ ಉಲ್ಲಂಘನಗೊಂಡಿವೆ, ಅದರ ರೂಪ ವಿದ್ರೂಪವಾಗಿದೆ. ರೂಪ ಒಂದು ರೀತಿ, ವಸ್ತು ಒಂದು ರೀತಿಯಾದ ಕಾರಣ ಪರಿವಾರದಲ್ಲಿ ಅಲ್ಲೋಲ-ಕಲ್ಲೋಲ ಉಂಟಾಗುತ್ತದೆ. ನಿಜವಾದ ಪ್ರೇಮ ಕೂಡ ಹಾಸ್ಯಾಸ್ಪದವಾಗಿ ಪರಿಣಮಿಸಿದೆ. ಸುಂದರ ಮಕ್ಕಳ ತಾಯಿ-ತಂದೆ ಅಪರೂಪ ವಿವಾದದಲ್ಲಿ ಸಿಲುಕಿಕೊಳ್ಳುತ್ತಾರೆ. ಚೀನೀ ಪಾತ್ರೆ ಒಡೆದು ತಮ್ಮ ಒಡೆದ ವ್ಯಕ್ತಿತ್ವದ ಸಾಕ್ಷಿ ನೀಡುತ್ತಾರೆ. ಮನೆಯ ಹೊರಗೆ ಪ್ರೇಮದಲ್ಲಿ ಸಿಲುಕಿಕೊಂಡಿರುವ ತಾಯಿ-ತಂದೆ ಅದೇ ಅಲ್ಲೋಲ-ಕಲ್ಲೋಲದಲ್ಲಿ ಚಹಾ ಕುಡಿಯಲು ಉಪಯೋಗಿಸುವ ಕಪ್-ಸಾಸರಗಳನ್ನು ವಿವಾದ ಮಾಡಲು ಉಪಯೋಗಿಸುತ್ತಾರೆ. ಮೊದಲ ಅಂಕಿನ ಥೀಮ್ ಅಲ್ಲೋಲ-ಕಲ್ಲೋಲ, ಅಲ್ಲಿರುವ ಭಾವ ಉಪಹಾಸ, ಇದರ ಕ್ರೇಂದ್ರೀಯ ಪ್ರತೀಕವಾಗಿರುವುದು ಇಲ್ಲಿ ಒಡೆಯುವ ಚೀನೀ ಪಾತ್ರೆಗಳು.

ಎರಡನೆಯ ಅಂಕಿನಲ್ಲಿ ಕವಿತೆ ತನ್ನದೇ ಆದ ರೀತಿಯಲ್ಲಿ ಪ್ರೊಟೆಸ್ಟ್ ಮಾಡುತ್ತದೆ, ಗದ್ಯ ತನ್ನದೇ ರೀತಿಯಲ್ಲಿ ಒಡಂಬಡಿಕೆಯ ಮಾರ್ಗವನ್ನು ಅನುಸರಿಸುತ್ತದೆ. ಮಗು ಅನಾರೋಗ್ಯಕ್ಕೆ ಈಡಾಗುತ್ತದೆ, ತಾಯಿ-ತಂದೆ ಪ್ರೇಮವನ್ನೇನೋ ಸ್ಥಿರವಾಗಿರಿಸಿರುತ್ತಾರೆ, ಆದರೆ ಮಗುವಿನ ಯೋಗಕ್ಷೇಮಕ್ಕಾಗಿ, ಶುಶ್ರೂಷೆಗಾಗಿ ಸಮಯ ಹಂಚಿಕೊಳ್ಳುತ್ತಾರೆ. ಈಗಲೂ ಕೂಡ ಅವರ ಆಚರಣೆ ವಿಶೃಂಖಲವಾಗಿದೆ. ಅವರು ತಮ್ಮ ಮಗು ಹಾಗೂ ತಮ್ಮ ಪ್ರೇಮಿ ಅಥವಾ ಪ್ರೇಮಕ್ಕೆ ಪಾತ್ರರಾದವರನ್ನು ಎರಡನ್ನೂ ಜೊತೆಯಲ್ಲಿರಿಸಿಕೊಳ್ಳಬೇಕೆನ್ನುತ್ತಾರೆ. ಅವರು ಒಂದೇ ಬಾಟಲಿಯಲ್ಲಿ ಹೊಸ ಹಾಗೂ ಹಳೆಯ ಎರಡೂ ರೀತಿಯ ಮದಿರೆಯನ್ನು ಹಾಕಿಡುವ ಪ್ರಯತ್ನ ಮಾಡುತ್ತಾರೆ. ಮಗುವಿನ ಪ್ರೊಟೆಸ್ಟ್ ಮಾನವೀಯವಾದದ್ದು. ತಾಯಿ-ತಂದೆಯ ಒಡಂಬಡಿಕೆ ಯಾಂತ್ರಿಕವಾದದ್ದು. ಮಗು ಜ್ವರದ ತಾಪದಿಂದಾಗಿ ಬಡಬಡಿಸುತ್ತದೆ. "ನನ್ನ ಅಮ್ಮ ಎಲ್ಲಿದ್ದಾಳೆ?" ಆದರೆ ದಮಯಂತೀ ಇನ್ನೂ ಪೂರ್ಣ ತಾಯಿ ಆಗಿಲ್ಲ, ಅವಳು ತಾಯಿ ಹಾಗೂ ಪ್ರೇಯಸಿಯ ಮಧ್ಯದಲ್ಲಿ ಒಡೆದ ಯಾವುದೋ ಒಂದು ವಸ್ತುವಾಗಿದ್ದಾಳೆ. ಮನೆಯಲ್ಲಿ ಶಾಂತಿ ಇದೆ, ಪರಿವಾರದಲ್ಲಿ ಐಕ್ಯತೆ ಇಲ್ಲ. ಮಗುವಿಗೆ ತಾಯಿ-ತಂದೆಯನ್ನು ಒಂದುಗೂಡಿಸಲು ಆಗಲಿಲ್ಲ, ಇಬ್ಬರಲ್ಲಿ ಕೇವಲ ಒಡಂಬಡಿಕೆ ಮಾಡಿಸಲು ಅವನಿಗೆ ಸಾಧ್ಯವಾಗಿದೆ. ಕವಿತೆಯ ಉತ್ತರ ಯಾಂತ್ರಿಕ ಪ್ರಬಂಧದೊಂದಿಗೆ ಕೊಡಲಾಗುತ್ತಿದೆ:

**ದಮಯಂತಿ:** ಈ ಒಡಂಬಡಿಕೆಯಿಂದ ಆಗಿರುವ ಲಾಭವೇನೆಂದರೆ ಈ ಮನೆಯಲ್ಲಿ ಈಗ ಪಾತ್ರೆಗಳು ಒಡೆಯುವುದು ನಿಂತಿದೆ, ಕೆಂಗಣ್ಣಿನಿಂದ ಯಾರು ಯಾರನ್ನೂ ಈಗ ಇಲ್ಲಿ ನೋಡಲಾಗುವುದಿಲ್ಲ. ಕೆದರಿ ಕೆದರಿ ಯಾರೂ ಯಾರ ಹೃದಯದಲ್ಲೂ ಹೋಗಲು ಪ್ರಯತ್ನ ಮಾಡುವುದಿಲ್ಲ, ಇಲ್ಲಿ ಈಗ ಯಾರೂ ಕೂಗಿ ಕೂಗಿ ಮಾತನಾಡುವುದನ್ನು ಕೇಳಿಲ್ಲ.

**ಪ್ರೇಮ:** ಈ ಮೌನ ಸುಡುಗಾಡಿನ ಮೌನವಾಗಿದೆ.

ಕವಿತೆ, ಈ 'ಸುಡುಗಾಡಿನ ಮೌನ'ವನ್ನು ಬದಲಿಸಲು ಇನ್ನೂ ಹೆಚ್ಚು ಪ್ರಯತ್ನಿಸುತ್ತದೆ. ಮಗುವಿನ ಜ್ವರ ಇನ್ನೂ ಹೆಚ್ಚಾಗುತ್ತದೆ. ತಾಯಿ-ತಂದೆ ಜ್ವರದ ಧ್ವನಿಯನ್ನು ಕೇಳಲು ವಿವಶರಾಗುತ್ತಾರೆ. ಮೊದಲ ಸಲ ಶೇಖರ ತಂದೆಯ ತೆರದಿ ಚಿಂತಿತನಾಗುತ್ತಾನೆ, ದಮಯಂತಿ ತಾಯಿಯ ತೆರದಿ ಚೂರು-ಚೂರು ಆದ ಹಾಗೆ ಕಾಣಿಸುತ್ತಾಳೆ. ಮಗುವಿನ ತಲೆಯ ಹತ್ತಿರ ಕುಳಿತು ಕರ್ತವ್ಯ ನಿಭಾಯಿಸುತ್ತಿರುವ ಶೇಖರ ಒಬ್ಬರಾದ ಮೇಲೆ ಇನ್ನೊಬ್ಬ ಡಾಕ್ಟರರನ್ನು ಕರೆಯಿಸಿಕೊಳ್ಳುತ್ತಾನೆ ಮತ್ತು ತಾಯಿ ಮಗುವಿನಿಂದ ದೂರ ಹೋಟಲಿನಲ್ಲಿ ಕುಳಿತು ದುಃಖಿತಳಾಗುತ್ತಾಳೆ.

**ದಮಯಂತಿ:** ನಾನು ಹೋಟೆಲಿನಲ್ಲಿ ಕುಳಿತು ಚಹಾ ಕುಡಿಯುತ್ತಲಿದ್ದೆ; ಒಮ್ಮೆಲೇ ನನ್ನ ಹೃದಯ ತಲ್ಲಣಿಸಿತು, ಚಹಾವನ್ನು ಇದ್ದಕ್ಕಿದ್ದಂತೆ ಬಿಟ್ಟು ಎದ್ದುಬಿಟ್ಟೆ.

**ರಾಮು:** ತಾಯಿಯ ಹೃದಯ ಅದು ಅವ್ವಾ ಅವರೆ.

ಇಬ್ಬರೂ ಈಗ ಮಗುವಿನ ಹತ್ತಿರ ಒಂದೇ ಉದ್ದೇಶದಿಂದ ಕೂಡಿ ಕುಳಿತಿದ್ದಾರೆ. ಈ ಕ್ಷಣದಲ್ಲಿ ಅವರು ಇಬ್ಬರೂ ತಮ್ಮ ಪ್ರೇಮಿ-ಪ್ರೇಯಸಿಯರನ್ನು ಮರೆತಿದ್ದಾರೆ. ಇಬ್ಬರೂ ಮಗುವಿನ ಸುಖದ ಆಕಾಂಕ್ಷೆ ಹೊತ್ತು ಪ್ರಾರ್ಥಿಸುತ್ತಿದ್ದಾರೆ. 'ಒಡಂಬಡಿಕೆ'ಗಿಂತ ಸ್ವಲ್ಪ ಭಿನ್ನವಾದ, ಅದಕ್ಕಿಂತ ಮುಂದುವರಿದ ಒಂದು ಸ್ಥಿತಿ ಎಂದೆನಿಸುತ್ತದೆ. ತನ್ನ ಮಗನ ದುಃಖದಲ್ಲಿ ದುಃಖಿಯಾಗಿರುವ ದಮಯಂತಿ ತನ್ನ ಪ್ರೇಮಿಯಿಂದ ಟೆಲಿಫೋನ್ ಬರಲು ಅದನ್ನು ಆಲಿಸುವುದಿಲ್ಲ, ಆದರೆ ಆ ಪ್ರೇಮದ ವಿಷಯದಲ್ಲಿ ಯಾವ ಹೊಸ ನಿರ್ಣಯವನ್ನೇನೂ ಮಾಡುವುದಿಲ್ಲ. ಎರಡನೆಯ ಅಂಕಿನ ಥೀಮ ಎಂದರೆ ಯಾಂತ್ರಿಕ ಒಡಂಬಡಿಕೆ, ಇಲ್ಲಿ ಭಾವವೆಂದರೆ ಕರುಣೆ, ಇದರ ಕೇಂದ್ರೀಯ ಪ್ರತೀಕವೆಂದರೆ ಮಗುವಿನ ಜ್ವರ ಮತ್ತು ಆಲಿಸಲಾರದ ಪ್ರೇಮಿಯ ಟೆಲಿಫೋನ್ ಕರೆ.

ಒಂದು ವೇಳೆ ಈ ನಾಟಕ ಇಲ್ಲಿಯೇ ಮುಕ್ತಾಯವಾಗಿದ್ದರೆ ಮೆಲೋಡ್ರಾಮಾ ಆಗುತ್ತಿತ್ತು. ಮಗುವಿನ ಜ್ವರ ಪ್ರೇಮವನ್ನು ಹರಿದು ಚಿಂದಿ ಚಿಂದಿಮಾಡಿ ಹಾಕಿದೆ. ಈ ಸರಳವಾದ ಪರಿಹಾರ ದುಗ್ಗಲ್‌ರಿಗೆ ಒಗ್ಗುವುದಿಲ್ಲ. ಹರಿದ-ಮುರಿದ, ಚಿಲ್ಲಾ-ಪಿಲ್ಲಿ ಅಲ್ಲೋಲ-ಕಲ್ಲೋಲ-ನಾವು ಈ ಎಲ್ಲವನ್ನೂ ನೋಡಿದೆವು ಹಾಗೂ ಮುರಿದ-ಕೂಡಿಸಿದ ಒಡಂಬಡಿಕೆಯನ್ನು ಕೂಡ. ಆದರೆ ಪಾರಿವಾರಿಕ ಕವಿತೆ ಸಂಪೂರ್ಣ, ಸಜೀವ ಸತ್ಯವಾಗಿ ಮೂರನೆ ಅಂಕಿನಲ್ಲಿ ಚಿತ್ರಿಸಲ್ಪಟ್ಟಿದೆ. ಹಿಂದಿನ ಅಂಕಿನಲ್ಲಿ ಕವಿತೆ ಜ್ವರದ ರೂಪದಲ್ಲಿ ಬಂದಿತ್ತು, ಈ ಸಲ ಮಳೆಯಾಗಿ ಬರುತ್ತದೆ. ಮಳೆ, ಶೇಖರ ಮತ್ತು ದಮಯಂತಿಯನ್ನು ಮನೆಯಿಂದ ದೂರವಿಟ್ಟಿದೆ ಹಾಗೂ ಅವಳ ಪ್ರೇಮಿ (ಪ್ರೇಮ) ಮತ್ತು ಪ್ರೇಯಸಿ (ಹುಸ್ನಾ)ಯರು ಒಬ್ಬರಿಗೊಬ್ಬರು ಕೂಡುವ ಅವಕಾಶ ನೀಡಿದೆ-ಈ ಮಳೆ. ಶೇಖರ ಮತ್ತು ದಮಯಂತಿಯರ ಅನುಪಸ್ಥಿತಿಯಲ್ಲಿ ಅವರ ವಿರುದ್ಧ ಯಾವ ಮಾತುಗಳೂ ನಡೆದಿಲ್ಲ, ಯಾರೂ ಒಬ್ಬರಿಗೊಬ್ಬರು ಬೇಸರಪಟ್ಟುಕೊಂಡಿಲ್ಲ. ಒಬ್ಬರಿಗೊಬ್ಬರು ದೂರ ಉಳಿಯುವಂಥ ಯಾವ ಅಹಿತ ಘಟನೆಗಳೂ ನಡೆದಿಲ್ಲ. ಆದದ್ದು ಕೇವಲ ಇಷ್ಟು-ಮಳೆ ಆಯ್ತು. ಶೇಖರ ಹಾಗೂ ಹುಸ್ನಾಳನ್ನು ದಮಯಂತಿ ಮತ್ತು ಪ್ರೇಮನನ್ನು ದೂರವಿರಿಸಿತು ಮತ್ತು ಹುಸ್ನಾ ಹಾಗೂ ಪ್ರೇಮ ಇವರಿಬ್ಬರನ್ನು ಸಮೀಪ ತಂದಿತು. ಹುಸ್ನಾ ಹಾಗೂ ಪ್ರೇಮ ಅವರ ನಡುವೆ ಅಂಥ ಭಾವುಕ ಮಾತುಕತೆ ಏನೂ ನಡೆಯುವುದಿಲ್ಲ. ಕಳೆದು ಹೋದುದರ ಬಗ್ಗೆ ಅನುತಾಪವಿಲ್ಲ, ಕೇವಲ ಯತ್ನದೊಂದಿಗೆ ಒಂದಾದುದರ ತ್ಯಾಗವಿದೆ, ಸಹಜ ಒಂದಾದುದರ ಸ್ವೀಕೃತಿ ಇದೆ.

**ಹುಸ್ನಾ:** ನಿನ್ನ ಸಿಗರೇಟ್ ಉರಿಸಲು ಪ್ರೇಮ ನನ್ನ ಹಿಂಗಾಲು ಎತ್ತರಿಸಬೇಕಾಗಿಲ್ಲ ಮೊಣಕಾಲೂರಿ ಬಾಗಬೇಕಾಗಿಲ್ಲ.

ಸರಿ, ಇದುವೇ ಜೀವನದ ಸಹಜ ರೂಪದ ಪರಿಚಯ. ಈ ಸತ್ಯವನ್ನು ಅರಿತವರು ಶೇಖರ ಅಥವಾ ದಮಯಂತಿಯಲ್ಲ, ಪ್ರೇಮ ಮತ್ತು ಹುಸ್ನಾ. ಅವರು ಈ ಸತ್ಯವನ್ನು ಅರಿತು ಈ ಪರಿವಾರವನ್ನು ಬಿಟ್ಟು ಹೊರಟು ಹೋದರು ಮತ್ತು ಈ ಮನೆಯನ್ನು ಮತ್ತೆ ಸುರಕ್ಷಿತ ಬಿಟ್ಟುಹೋದರು. ಈ ಎಲ್ಲದರ ನಿರ್ಣಯ

ಯಥಾರ್ಥದ ತಳಹದಿಯ ಮೇಲೆ ಯೋಚಿಸಿ-ವಿಚಾರಿಸಿ ಮಾಡಿಲ್ಲ, ಕವಿತೆಯ ಆಳದಲ್ಲಿ ಒಮ್ಮೆಲೇ ಹೀಗಾಗಿದೆ. ಈ ಅಂಕಿನ ಥೀಮೆಂದರೆ ಸಹಜ ಮಾನವ ರೂಪ, ಇದರ ಭಾವ ಸಂಯಮದಲ್ಲಿ ಬಂಧಿತವಾದ ಪ್ರೇಮ ಮತ್ತು ಇದರ ಕೇಂದ್ರೀಯ ಪ್ರತೀಕ ಮಳೆ. ಜೀವನದ ಶಾಂತ ಗದ್ಯದಿಂದ ಜೀವಂತ ಕಾವ್ಯಾರ್ಥವನ್ನು ಉತ್ಪನ್ನಗೊಳಿಸುವ ಇಂಥ ನಾಟಕ ಪಂಜಾಬಿ ಭಾಷೆಯಲ್ಲಿ ಮತ್ತೊಂದಿಲ್ಲ.

ಮೇಲಿನ ಎರಡೂ ನಾಟಕಗಳ ಬಗ್ಗೆ ಒಂದು ಮಾತು ಹೇಳುವುದು ಉಚಿತವೆಂದು ಎನ್ನಿಸುತ್ತದೆ, ಆ ಮಾತು ಎರಡೂ ನಾಟಕಗಳು ಪ್ರೇಮದ ಪರಂಪರೆಯಿಂದ ಆಚೆ ಹೋಗಲು ಪ್ರಯತ್ನಿಸುತ್ತಿವೆ-ಎಂಬುದು. ಮಗುವಿನ ತಾಯಿ ತನ್ನ ಪ್ರೇಮಿಯೊಂದಿಗೆ ಓಡಿ ಹೋಗಿ ಮಧ್ಯಕಾಲೀನ ಪ್ರೇಮದ ಕಲ್ಪನೆಯನ್ನು ಅಳಿಸಿ ಹಾಕಿದಳು. ಬೈಣೋ ಅಥವಾ ಸಂತೀ, ಇವರಿಬ್ಬರಿಗೂ ಯಾರೂ ಓಡಿ ಹೋಗಲು ಹೇಳಲಿಲ್ಲ, ಸ್ವಇಚ್ಛೆಯಿಂದ ಇಬ್ಬರೂ ತಮ್ಮ ಪರಿವಾರ ಬಿಟ್ಟು ಓಡಿ ಹೋದರು. ಆದರೆ ಇಬ್ಬರ ಪ್ರೇಮದಲ್ಲಿ ಒಂದು ಮಧ್ಯಕಾಲೀನದ ವಿವಶತೆ ಕಾಣಿಸುತ್ತದೆ. ಬೈಣೋ ಮತ್ತು ಸಂತೀಯ ಪ್ರೇಮದ ಬಗ್ಗೆ ಬೇರೆಯವರಿಗೆ ಗೊತ್ತಿದೆ, ಆದರೆ ಅವರು ಎಲ್ಲರಿಗೂ ಗೊತ್ತಿರುವ ತಮ್ಮ ಪ್ರೇಮವನ್ನು ಆಕಳ ಮೇಲೆ ಆಣೆಯಿಟ್ಟು ಹಾಗೂ ತಮ್ಮ ಮನೆತನದ ಬಗ್ಗೆ ತಾವು ಮಾಡಿದ ಕರ್ತವ್ಯಗಳನ್ನು ಎಣಿಸಿ ಹೇಳುತ್ತ ಮರೆಮಾಚುವ ಪ್ರಯತ್ನ ಮಾಡುತ್ತಾರೆ. ಗ್ರಾಮ್ಯ ವಾತಾವರಣದಲ್ಲಿ ಪ್ರೇಮದ ಮಧ್ಯಕಾಲೀನ ವಿವಶರೂಪ ಮಾತ್ರವೇ ಪ್ರಸ್ತುತಗೊಳ್ಳಲು ಸಾಧ್ಯ. ದುಗ್ಗಲ್ ಪ್ರೇಮವನ್ನು ನಗರದ ವಾತಾವರಣದಲ್ಲಿ ಆಧುನಿಕ ಮತ್ತು ಸ್ವತಂತ್ರ ರೂಪದಲ್ಲಿ ಚಿತ್ರಿಸಿದ್ದಾರೆ. ಎರಡನೆಯ ಅಂಕಿನ ಕೊನೆಯಲ್ಲಿಯೇ ನಾಟಕ ಒಂದು ವೇಳೆ ಮುಗಿದು ಹೋಗಿದ್ದರೆ ವಾತ್ಸಲ್ಯದ ಶೃಂಗಾರದ ವಿಜಯವಾಗುತ್ತಿತ್ತು, ಹಾಗಿದ್ದರೂ ಮಧ್ಯಕಾಲೀನ ಪ್ರೇಮದ ರೀತಿಯೇ ಅದಾಗಿರುತ್ತಿತ್ತು. ದುಗ್ಗಲ್, ಪ್ರೇಮ-ಪರಿವಾರದ ವಿವಾದವನ್ನು ಹೀಗಾಗದಂತೆ ಮುಕ್ತಗೊಳಿಸುತ್ತಾರೆ. ಈ ನಾಟಕದಲ್ಲಿ ವಿವಶತೆಯಾಗಲಿ ವಿವಾಹದ ಮುಂಚೆ ಮಾಡಿದ ಯಾವುದೇ ಕರಾರಿನ ನೆನಪಾಗಲಿ ಯಾವುದೂ ಇಲ್ಲ. ಮನೆತನದ ಗೌರವ ಎಷ್ಟರಮಟ್ಟಿಗೆ ನುಚ್ಚಾಗಿದೆಯೆಂದರೆ ಅವರಿಗೆ ಯಾರದೇ ನಿಂದೆ, ಆರೋಪದ ಭಯ ಈಗ ಉಳಿದಿಲ್ಲ, ಯಾರಾದರೂ ತಮ್ಮನ್ನು ಬೆನ್ನುಹತ್ತಿ ಬಂದಾರೆಂಬ ಭಯವೂ ಇಲ್ಲ. ಆದ ನಿರ್ಣಯ ವಿವಶತೆಯಿಂದ ಮುಕ್ತವಾಗಿದೆ. ಗಾರ್ಗಿ ಪರಂಪರೆಯನ್ನು ಮುರಿಯುವ ಮೊದಲ ಪ್ರಯತ್ನ ಮಾಡಿದ್ದರು, ಆದರೆ ಅದು ಸಮತೋಲವಾಗಿರಲಿಲ್ಲ. ದುಗ್ಗಲ್ ಅದೇ ಪ್ರಯತ್ನವನ್ನು ಮುಂದುವರಿಸಿಕೊಂಡು ಹೋಗಿ ಅದನ್ನು ಸಮತೋಲನದ ಸೆಲೆಯ ವರೆಗೆ ತಲುಪಿಸಿದ್ದಾರೆ. ಪರಿವಾರ ಎರಡರಲ್ಲೂ ಸ್ಥಿರವಾಗಿದೆ. 'ಕಮ್ಮಾರ' ದಲ್ಲಿ ಪರಿವಾರ ಮುರಿದು ಹೋಗಿತ್ತು 'ಹಳೆಯ ಬಾಟಲಿಗಳು' ನಾಟಕದಲ್ಲಿ ಅಂಥದಿಲ್ಲ. ಎರಡೂ ನಾಟಕಗಳು ಜೀವನದ ಕಾವ್ಯಮಯತೆಯನ್ನು ಹೊಗಳಿವೆ, ಕೊಂಡಾಡಿವೆ.

**ದಮಯಂತೀ (1960):** ಪುರಾತನ ರಸವಾದೀ ನಾಟಕ ಮತ್ತು ಆಧುನಿಕ ಡಿಸ್ಕಶನ್‌ಪ್ಲೇ ಎಂಬ ಹೆಸರಿನ ಎರಡು ರಚನಾ-ಶೈಲಿಗಳ ಮಿಶ್ರಣವಾಗಿದೆ-ಈ ನಾಟಕ.

ರಸವಾದೀ ನಾಟಕ ಮೊದಲ ನಾಲ್ಕು ಅಂಕಗಳಲ್ಲಿ ಸಮಾಪ್ತಗೊಳ್ಳುತ್ತದೆ. ಈ ಭಾಗದ ಅಂಗೀರಸ ಅಥವಾ ಮುಖ್ಯರಸ ಶೃಂಗಾರವಾಗಿದೆ. ಮೊದಲ, ಎರಡನೆಯ ಮತ್ತು ಮೂರನೆಯ ಅಂಕಗಳು ಪೂರ್ವ ರಾಗದ ಸ್ಥಿತಿಗೆ ಸಂಬಂಧಿತವಾಗಿವೆ. ನಳ ಮತ್ತು ದಮಯಂತಿ ಇವರು ಇನ್ನೂ ಒಬ್ಬರನ್ನೊಬ್ಬರು ನೋಡಿಲ್ಲ, ಆದರೆ ಅವರಿಬ್ಬರೂ ಪರಸ್ಪರ ಪ್ರೇಮದಲ್ಲಿ ಸಿಲುಕಿದ್ದಾರೆ ಮತ್ತು ಒಬ್ಬರು ಇನ್ನೊಬ್ಬರಿಗಾಗಿ ಎಲ್ಲವನ್ನೂ ಸಹಿಸಿಕೊಳ್ಳುವ ನಿರ್ಧಾರ ಮಾಡಿಕೊಂಡಿದ್ದಾರೆ. ಮೊದಲ ಮತ್ತು ಎರಡನೆಯ ಅಂಕಿನ ಪೂರ್ವಾರ್ಧ ಪೂರ್ವ ರಾಗದ ಉದಾಹರಣೆಯಾಗಿದೆ. ದಮಯಂತಿ ನಳನನ್ನು ನೋಡಿಲ್ಲ, ನಳ ದಮಯಂತಿಯನ್ನು ನೋಡಿಲ್ಲ, ಆದರೆ ಪತ್ರಗಳ ಮುಖಾಂತರ, ಚಿತ್ರಗಳ ಮುಖಾಂತರ, ದೂತಿಯ ಮುಖದಿಂದ, ಒಬ್ಬರೊಬ್ಬರ ಗುಣ-ಶ್ರವಣದಿಂದ ಇಬ್ಬರೂ ಒಬ್ಬರನ್ನೊಬ್ಬರು ಪ್ರೇಮಿಸಲಾರಂಭಿಸಿದರು. ಎರಡನೆಯ ಅಂಕಿನ ಉತ್ತರಾರ್ಧ ಮತ್ತು ಮೂರನೆಯ ಅಂಕಿನಲ್ಲಿ ನಳ ಮತ್ತು ದಮಯಂತಿ ತಮ್ಮ ತಮ್ಮ ಪ್ರೇಮದ ಬಗ್ಗೆ ದೃಢತೆಯನ್ನು ವ್ಯಕ್ತಗೊಳಿಸುತ್ತಾರೆ. ಮೊದಲು ದೇವರಾಜ ಇಂದ್ರ, ನಳ, ದಮಯಂತಿಯ ಪ್ರೇಮದಿಂದ ವಿಮುಖನಾಗುವಂತೆ ಮಾಡಬಯಸುತ್ತಾನೆ ಮತ್ತು ಅಗ್ನಿ, ಪವನದೇವತೆಗಳು ದಮಯಂತಿಯ ಸಮ್ಮುಖದಲ್ಲಿ ತಮ್ಮ ತಮ್ಮ ಪ್ರೇಮ-ಪ್ರಸ್ತಾಪ ಮಾಡುತ್ತಾರೆ ಹಾಗೂ ನಳನನ್ನು ವರಿಸದಂತೆ ತಡೆಯುತ್ತಾರೆ. ಅವರು ತಮ್ಮ ಕೋಪವನ್ನು ಪ್ರದರ್ಶಿಸುತ್ತಾರೆ ಹಾಗೂ ಈ ಪ್ರೇಮದಿಂದಾಗುವ ದುಷ್ಪರಿಣಾಮಗಳ ಬಗ್ಗೆ ಎಚ್ಚರಿಕೆಯನ್ನೂ ನೀಡುತ್ತಾರೆ. ಅವರಿಬ್ಬರೂ ಪರಸ್ಪರರನ್ನು ನೋಡಿಲ್ಲ, ಪರಸ್ಪರರು ಯಾವುದೇ ಪ್ರಕಾರದ ವಚನಕ್ಕೆ ಬದ್ಧರಾಗಿಲ್ಲ ಹಾಗಿದ್ದರೂ ಇಬ್ಬರೂ ತಮ್ಮ ಸಂಕಲ್ಪದಿಂದ ವಿಮುಖರಾಗುವುದಿಲ್ಲ. ನಾಲ್ಕನೆಯ ಅಂಕದಲ್ಲಿ ಸ್ವಯಂವರದ ದೃಶ್ಯವಿದೆ. ದೇವತೆ ಹಾಗೂ ನಳ ಜೂಜಿನಲ್ಲಿ ಪರಸ್ಪರರನ್ನು ಸೋಲಿಸುವ ಯತ್ನ ಮಾಡುತ್ತಾರೆ. ಈ ಯತ್ನದಲ್ಲಿ ದೇವತೆ ಹಾಗೂ ದಮಯಂತಿ ತಮ್ಮ ತಮ್ಮ ಪಕ್ಷಕ್ಕೆ ಉಚಿತ-ಅನುಚಿತ ಸಹಾಯವನ್ನು ಮಾಡುತ್ತಾರೆ.

ದಮಯಂತಿ ನಳನ ಕೊರಳಿಗೆ ಮಾಲೆ ಹಾಕಿ ಅವನನ್ನು ತನ್ನ ಗಂಡನೆಂದು ಸ್ವೀಕರಿಸುತ್ತಾಳೆ. ನಾಯಕ ಧೀರೋದಾತ್ತನಾಗಿದ್ದಾನೆ, ನಾಯಿಕೆ ರಾಜಪುತ್ರಿ. ಶೃಂಗಾರ ರಸ ಮತ್ತು ಸಂಸ್ಕೃತ ನಾಟಕದ ಎಲ್ಲ ಕಟ್ಟಳೆಗಳು ಇಲ್ಲಿ ಪೂರ್ಣಗೊಂಡಿವೆ.

ಮೊದಲ ಅಂಕ ಮತ್ತು ಎರಡನೆಯ ಅಂಕದ ಪೂರ್ವಾರ್ಧ ಮಾತ್ರ ವಾಕ್ಚಾತುರ್ಯದಿಂದ ತುಂಬಿಕೊಂಡಿದೆ. ಈ ವಾಕ್ಚಾತುರ್ಯ ನಳ ಮತ್ತು ದಮಯಂತಿಯ ಮಿಲನದೆಡೆಗೆ ಸಂಕೇತ ನೀಡುತ್ತದೆ. ವಾಕ್ಚಾತುರ್ಯದ ಮೂಲಭೂತ ಗುಣವಾದ ವಾಚಾಳಿತನ ಇಲ್ಲಿದೆ. ಎರಡನೆಯ ಅಂಕಿನ ಉತ್ತರಾರ್ಧ ಹಾಗೂ ಮೂರನೆಯ ಅಂಕನ್ನು ಭಯ, ಪ್ರಲೋಭನ ಹಾಗೂ ಚಾರಿತ್ರಿಕ ದೃಢತೆಯ ಸುತ್ತ ನಿಲ್ಲಿಸಲಾಗಿದೆ. ಶಬ್ದಜಾಲ ಮತ್ತು ಚಾರಿತ್ರಿಕ ದೃಢತೆಯ ಪ್ರಸಾರವಿದೆ, ನಾಟಕೀಯ ಘಟನೆ ಇಲ್ಲಿ ಯಾವುದೂ ಇಲ್ಲ. ನಾಲ್ಕನೆಯ ಅಂಕಿನಲ್ಲಿ ಕೂಡ ಮೊದಲನೆಯ ಘಟನೆಯ ದರ್ಶನ ನಮಗಾಗುತ್ತದೆ. ಈ ಪ್ರಕಾರ ನಾಟಕದ ರಸಸ್ವಾದನೆಗೆ ವಿಶೇಷ ಪ್ರಕಾರದ ಕಲಾ-ಚೇತನದ ಅವಶ್ಯಕತೆ ಇದೆ. ನಾಟಕದ ಗತಿ

ಮಂದವಾಗಿದೆ, ಘಟನಾರಹಿತವಾದ ಚರಿತ್ರ-ದರ್ಶನ ಇದರ ಮುಖ್ಯ ವೈಶಿಷ್ಟ್ಯವಾಗಿದೆ.

ಸಂತ್ ಸಿಂಗ್ ಸೇಖೋ, ನಳ-ದಮಯಂತಿಯ ಪುರಾತನ ಕಥೆಗೆ ಆಧುನಿಕತೆ ನೀಡಲು ಪ್ರತೀಕಾತ್ಮಕವಾದಂಥ ವ್ಯಾಖ್ಯೆಯನ್ನು ನೀಡಿದ್ದಾರೆ. ಅವರು ಹೇಳಿದಂತೆ: "ನಳ ಮನುಷ್ಯ ಹಾಗೂ ದಮಯಂತಿ ಧರಿತ್ರಿ. ದೇವತೆ ಪ್ರಕೃತಿಯ ವಿಭಿನ್ನವಾದ ಶಕ್ತಿಗಳಾಗಿವೆ." ಈ ಹೇಳಿಕೆಯ ಅನುಸಾರ ಈ ನಾಟಕದ ವ್ಯಾಖ್ಯೆ ಆಗುವುದಿಲ್ಲ. ಸಾಹಿತ್ಯಕಾರ ವಿಮರ್ಶಕನಾಗುವ ಪ್ರಯತ್ನ ಮಾಡಿದರೆ ಯಾವಾಗಲೂ ಅದರ ಪರಿಣಾಮ ಶುಭವಾಗಿರುವುದಿಲ್ಲ. ವಿಮರ್ಶಕ ಸೇಖೋ ಹೀಗೆ ಹೇಳುತ್ತಾರೆ: "ದೇವತೆ ಪ್ರಕೃತಿಯ ವಿಭಿನ್ನ ಶಕ್ತಿಗಳಾಗಿವೆ." ಆದರೆ ಅವರ ನಾಟಕದ ನಾಯಕ ಮತ್ತು ದೇವತೆ ಈ ಪ್ರಕಾರ ಹೇಳುತ್ತಾರೆ:

**ಇಂದ್ರ:** ದಮಯಂತಿಗೆ ಏನೂ ತಿಳಿವಳಿಕೆ ಇಲ್ಲ. ಅವಳು ಪ್ರಕೃತಿ, ಜ್ಞಾನ ರಹಿತಳು.

**ರಾಜಾ ನಳ:** ದೇವತೆ ಪ್ರಕೃತಿಯ ಎದುರಿನಲ್ಲಿ ವಿವಶವಾಗಿದೆ.... ನಾವು ದೇವತೆಗಳಲ್ಲಿ ಸುಕಾಲಕ್ಕಾಗಿ ಯಾಚಿಸುತ್ತೇವೆ, ಆದರೆ ಅಕಾಲ ಬೀಳುತ್ತದೆ, ಮಳೆಗಾಗಿ ಪ್ರಾರ್ಥಿಸುತ್ತೇವೆ, ಬರಗಾಲ ಬೀಳುತ್ತದೆ. ಪುತ್ರನಿಗಾಗಿ ಪ್ರಾರ್ಥಿಸುತ್ತೇವೆ, ಪುತ್ರಿ ಜನಿಸುತ್ತಾಳೆ. ಪುತ್ರನನ್ನು ಬೇಡಿದಾಗ ಏನೂ ಸಿಕ್ಕುವುದಿಲ್ಲ. ನಾನು ತಿಳಿದೆ, ನಾನು ತಿಳಿದೆ, ದೇವತೆ ಪ್ರಕೃತಿಯಿಂದ ತನ್ನ ಇಚ್ಛೆಯನ್ನು ಪೂರ್ಣಗೊಳಿಸಿಕೊಳ್ಳಲಾರ.

ಅದು ಏನೇ ಇರಲಿ, ನಾಟಕ ಮಾತ್ರ ಮನುಷ್ಯ ಮತ್ತು ದೇವತೆಯ ಆದಿ-ಯುಗಾದಿ ಸಂಬಂಧವನ್ನು ಆಧುನಿಕ ದೃಷ್ಟಿಯಿಂದ ನೋಡುವ ಪ್ರಯತ್ನ ಮಾಡುತ್ತಿದೆ ಎಂಬುದು ಸ್ಪಷ್ಟವಾಗಿದೆ. ಹಳೆಯ ಕಥೆಯಲ್ಲಿ ದೇವತೆ ನಳನೊಂದಿಗೆ ಸಿಟಗೊಂಡಿದ್ದ ಏಕೆಂದರೆ ನಳ ದಮಯಂತಿಯನ್ನು ಪ್ರೇಮಿಸುತ್ತಿದ್ದ, ಆದರಿಂದಾಗಿ ಅವನು ದೇವತೆಗಳ ದಾರಿಯಲ್ಲಿ ಕಂಟಕನಾಗಿದ್ದ. ಪ್ರಸ್ತುತ ನಾಟಕ ಸೇಡು, ಸಿಟ್ಟು ಮಾನವೀಯ ದುಃಖದ ಮೂಲ ಕಾರಣವೆಂದು ಭಾವಿಸುತ್ತದೆ. ನಳನ ಪ್ರಜೆಗಳು ದೇವತೆಗಳಿಂದಾಗಿ ದುಃಖಿಗಳಾಗಿದ್ದಾರೆ. ಅರಣ್ಯದಲ್ಲಿ ಅಗ್ನಿಪ್ರಕೋಪ ಉಂಟಾಗುತ್ತದೆ, ಬರಗಾಲದ ಹಾವಳಿ, ಒಣ ಹವೆ ದಕ್ಷಿಣದಿಂದ ಚಲಿಸುತ್ತದೆ, ಬಿರುಗಾಳಿ ಬೀಸುತ್ತದೆ. ಕೃಷಿ, ವನ ಸಂಪತ್ತು, ಖನಿಜ ಎಲ್ಲವುಗಳ ಮೇಲೆ ದೇವತೆಗಳ ಸಿಟ್ಟಿನ, ಸೇಡಿನ ದುಷ್ಪ್ರಭಾವ ಬಿದ್ದಿದೆ. ಪಟ್ಟಣದ ಒಂದು ಹಿರಿದಾದ ಭಾಗ ಮಹಾಪೂರದಲ್ಲಿ ಕೊಚ್ಚಿಕೊಂಡು ಹೋಗಿದೆ. ಜನ ಬೀಳುತ್ತಿರುವ ಮನೆಗಳಿಂದ ಹೊರ ಹೊರಟು ಪೇಟೆಗೆ ಬರುತ್ತಾರೆ. ರಾಜಾ ನಳನ ಹತ್ತಿರ ಈ ವಿಪತ್ತನ್ನು ನಿವಾರಿಸುವ ಯಾವ ಸಾಧನವೂ ಇಲ್ಲ. ಈ ನಾಟಕದ ಹಿಂದಿನ ಎರಡು ಅಂಕಗಳು ಈ ಅನಿವಾರ್ಯ ದುಃಖಕ್ಕೇ ಸಂಬಂಧಿಸಿವೆ. ನಳ ಮತ್ತು ದಮಯಂತಿ, ಮನುಷ್ಯ, ದೇವತೆಗಳಿಗಿಂತ ಒಂದು ವಿಷಯದಲ್ಲಿ ಮಾತ್ರ ಮುಂದಿದ್ದಾನೆ ಅದುವೇ ಪ್ರೇಮ-ಎಂಬುದನ್ನು ಅರಿತಿದ್ದಾರೆ. ಪ್ರೇಮದ ಫಲವಾದ ಸಂತಾನ ಕೂಡ ಮನುಷ್ಯನಿಗೆ ಮಾತ್ರ ಪ್ರಾಪ್ತ,

ದೇವತೆಗಳಿಗೆ ಅಲ್ಲ. ದುಃಖ, ಪ್ರೇಮ ಮತ್ತು ಸಂತಾನ ಮಾನವನ ಅನಿವಾರ್ಯ ಸಂಗಿಗಳು. ಪ್ರೇಮದಿಂದಲೇ ಮನುಷ್ಯ ದುಃಖವನ್ನು ಎದುರಿಸುತ್ತಾನೆ ಮತ್ತು ಸಂತಾನದಿಂದಾಗಿ ತನ್ನನ್ನು ತಾನು ಅಮರವಾಗಿಸುತ್ತಾನೆ. ಇದುವೇ ಈ ನಾಟಕದ ಕೇಂದ್ರೀಯ ವಸ್ತುವಾಗಿದೆ. ದೇವತೆಗಳಿಗೆ ದಮಯಂತಿಯನ್ನು ಪಡೆಯಲಾಗಲಿಲ್ಲ, ಏಕೆಂದರೆ ಅವರು ನಳ ಮತ್ತು ದಮಯಂತಿಯನ್ನು ಭಯಭೀತಗೊಳಿಸುತ್ತಿದ್ದರೆ ವಿನಃ ಪ್ರೇಮಿಸಲಿಲ್ಲ. ಅವರ ಕ್ರೋಧ ಮನುಷ್ಯರ ಬಗ್ಗೆ ವ್ಯಾಪಕ ತೊಂದರೆ ನೀಡುವಲ್ಲಿ ತತ್ಪರವಾಯಿತು, ಮನುಷ್ಯರ ಹತ್ತಿರ ಇದನ್ನೆಲ್ಲ ಎದುರಿಸುವ ಸಾಧನ ಕೇವಲ ಪ್ರೇಮವಾಗಿತ್ತು.

ನಾಟಕಕಾರ ಸಂತಸಿಂಗ್ ಸೇಖೋ ಅವರ ಹತ್ತಿರ ಮೂರ್ತಬಿಂಬಕ್ಕಿಂತ ಹೆಚ್ಚಾಗಿ ಅಪಾರ ಅಮೂರ್ತ ಸಂಕಲ್ಪದ ಸಂಪತ್ತಿ ಇದೆ. ಮೊದಲ ನಾಲ್ಕು ಅಂಕಗಳಲ್ಲಿ ಮನುಷ್ಯನ ಪ್ರೇಮ ಮತ್ತು ದೇವತೆಗಳ ಕ್ರೋಧಮೂರ್ತ ಘಟನೆಯ ರೂಪದಲ್ಲಿ ನಮ್ಮೆದುರಿಗೆ ಬರುತ್ತವೆ. ದೇವತೆ ಕೂಡ ಸಮೂರ್ತ ವ್ಯಕ್ತಿತ್ವ ಧಾರಣ ಮಾಡಿಕೊಂಡು ನಾಟಕದ ಪಾತ್ರಗಳಾಗಿ ನಾಟಕದ ಗತಿಯಲ್ಲಿ ಸಮ್ಮಿಲಿತರಾಗುತ್ತಾರೆ. ಹಿಂದಿನ ಎರಡು ಅಂಕಗಳಲ್ಲಿ ದೇವತೆಗಳ ಮೂರ್ತ ವ್ಯಕ್ತಿತ್ವ ಮಾಯವಾಗುತ್ತದೆ. ಅಗ್ನಿ, ಬರಗಾಲ, ಮಹಾಪೂರ ಇತ್ಯಾದಿಗಳನ್ನು ದೇವಪ್ರೇರಿತವೆಂದು ತಿಳಿದು ಅವುಗಳ ಸಂಕಲ್ಪದ ವ್ಯಾಖ್ಯೆಯನ್ನು ಪ್ರಸ್ತುತಗೊಳಿಸಲಾಗಿದೆ. ಘಟನೆಯಿಂದ ಸಂಕಲ್ಪದೆಡೆಗೆ ಯಾತ್ರೆ ಮೆಲ್ಲ-ಮೆಲ್ಲಗೆ ಆಧುನಿಕ ಸೃಜನ ಶೈಲಿಯಾಗಿ ಹೊರಡುತ್ತದೆ. ದುಃಖವನ್ನು ದುಃಖದಲ್ಲಿಯೇ ಸಮಾಪ್ತಗೊಳಿಸುವುದು 'ಎಬ್ಸರ್ಡ' ನಾಟಕದ ಮುಖ್ಯ ಪರಿಚಯ-ಚಿಹ್ನವಾಗಿದೆ. ಸೇಖೋ ಮನುಷ್ಯ ಜೀವನ ಸೃಜನವನ್ನು ಅರ್ಥಹೀನ ಅಥವಾ 'ಎಬ್ಸರ್ಡ್' ಎಂದು ಒಪ್ಪುವುದಿಲ್ಲ. ಅವರು ಮಾನವೀಯ ಪ್ರೇಮದ ಮುಖಾಂತರ ಮಾನವೀ ಉದ್ಯಮಕ್ಕೆ ಅರ್ಥವತ್ತತೆಯನ್ನು ನೀಡುತ್ತಾರೆ. ಇದುವೇ ಈ ನಾಟಕದ ಬಹು ದೊಡ್ಡ ಕೊಡುಗೆಯಾಗಿದೆ.

–ಹರಭಜನ್ ಸಿಂಗ್

# ಪಾತ್ರ ಪರಿಚಯ

| | | |
|---|---|---|
| ಸಂತೀ | : | ಕಮ್ಮಾರನ ಹೆಂಡತಿ |
| ಬೈಶೋ | : | ಕಮ್ಮಾರನ ಮಗಳು |
| ದೀಪಾ | : | ಕಮ್ಮಾರನ ಮಗ |
| ಗಜ್ಜಣ | : | ಸಂತೀಯ ಪ್ರಿಯಕರ |
| ಕಾಕೂ | : | ಕಮ್ಮಾರ |
| ಬಚನೀ | : | ಸಂತೀಯ ಬಾಲ್ಯ ಗೆಳತಿ |
| ಚಮ್ಮಾರ | : | ಕಮ್ಮಾರನ ಮಿತ್ರ |
| ಕಟುಕ | : | ಕಮ್ಮಾರನ ಮಿತ್ರ |

ಮಗ್ಗುಲ ಮನೆಯಾಕೆ ಹಾಗೂ ಬೈಶೋನ ಪ್ರಿಯಕರ

# ಕಮ್ಮಾರ: ನಾಟಕದ ಬಗೆಗೆ

-ಬಲವಂತ ಗಾರ್ಗಿ

ಈ ನಾಟಕ 1944ರಲ್ಲಿ ಬರೆಯಲ್ಪಟ್ಟಿದೆ. ಲಾಹೋರದಲ್ಲಿ ಸ್ಟೇಜ ಮಾಡಲು ಇದರ ರಿಹರ್ಸಲ್ ನಡೆದಿತ್ತು. ಅದೇ ದಿನಗಳಲ್ಲಿ ಇದನ್ನು ರೇಡಿಯೋದಲ್ಲಿ ಪ್ರಸಾರ ಮಾಡಲಾಯಿತು. ಕೆಲ ಪಟ್ಟಭದ್ರರು, ಶ್ರೀಮಂತರು ಇದರ ವಿಷಯ-ವಸ್ತುವಿನ ಬಗ್ಗೆ ವಿರೋಧ ವ್ಯಕ್ತಮಾಡಿದರು. ಕಸೂರ ಪಟ್ಟಣದ ಕಮ್ಮಾರರ ಒಂದು ಪ್ರತಿನಿಧಿ ಮಂಡಲ ತಮ್ಮ ರೋಷ ಪ್ರಕಟಿಸಲು ಲಾಹೋರಿಗೆ ಬಂದರು. "ಏನು ಕಮ್ಮಾರರ ಹೆಣ್ಣುಮಕ್ಕಳು ಹೀಗಿರುತ್ತಾರೆಯೆ? ಇದು ನಮ್ಮ ಜಾತಿಯ ಮೇಲೆ ಕಲಂಕ ತರುವಂಥದಾಗಿದೆ" ಎಂದರು. ಸರಿ, ರೇಡಿಯೋದಲ್ಲಿ ಈ ನಾಟಕದ ಪ್ರಸಾರವನ್ನು ಕೆಲ ವರ್ಷಗಳ ಮಟ್ಟಿಗೆ ಸ್ಥಗಿತಗೊಳಿಸಬೇಕೆಂದು ನಿರ್ಣಯಿಸಲಾಯಿತು. ಆದರೆ ಸ್ಟೇಜ ಮೇಲೆ ಮಾತ್ರ ಇದಕ್ಕೆ ಸಫಲತೆ ಹಾಗೂ ಸಾಹಿತ್ಯಿಕ ಅಭಿಮತ ದೊರಕಿತು.

ಭಾವನೆಗಳ ಬಗೆಗೆ ಇರುವ ಕ್ರೂರತೆ ನನ್ನ ಧ್ಯಾನ ಎಳೆಯುತ್ತದೆ. ಏನೆಲ್ಲ ನಾಟಕದಲ್ಲಿ ನಡೆಯುತ್ತದೆಯೋ ಅದು ಸಾಧಾರಣ ಕಮ್ಮಾರ-ಪರಿವಾರದಲ್ಲಿ ಅಲ್ಲ, ಆದರೆ ಸಮಾಜದ ಅಸಂತುಲಿತ ಸಂಬಂಧಗಳ ಮತ್ತು ಭಾವನೆಗಳ ದಮನದ ಪ್ರತೀಕವಾಗಿದೆ. ಎರಡು ಭಾಗದಲ್ಲಿ ಹಂಚಿಹೋಗಿರುವ ಈ ಮನಸ್ಸು ಎರಡು ಕಡೆಯ ಪ್ರಾಮಾಣಿಕತೆ ನಿಜವಾದ ಭಾವನೆಯನ್ನು ಪ್ರಕಟಿಸುತ್ತವೆ.

ಈ ನಾಟಕದಲ್ಲಿ ನಾನು ಪರಂಪರಾಗತ ಮನೋಭಾವನೆಗಳನ್ನು ತಿರುಗಿ-ಮುರುಗಿ ಮಾಡಿ ಪ್ರಸ್ತುತಗೊಳಿಸಿದ್ದೇನೆ. ಮಗಳು, ಸ್ವಭಾವದಿಂದ ತನ್ನ ತಾಯಿಯ ಪ್ರತಿರೂಪವಾಗಿದ್ದಾಳೆ. ಹೊಸ ಜನಾಂಗದಲ್ಲಿ ಹಳೆಯ ತಲೆಮಾರಿನವರ ಬಗ್ಗೆ ಒಂದು ರೀತಿ ವಿದ್ರೋಹವಿದೆ. ಹೊಸ ಚೇತನ, ಹಳೆಯ ಚೇತನದ ಉಡಿಗೆ ತೊಡಿಗೆ ತೆಗೆದು ಮುಂದೆ ಹೋಗುತ್ತದೆ. ಆದರೆ ನಾನು ಇಲ್ಲಿ ಈ ನಾಟಕದಲ್ಲಿ ಮಾನಸಿಕ ವಿದ್ರೋಹದ ಕಿಡಿಯನ್ನು ತಾಯಿಯಿಂದ ಮಗಳ ಕಡೆಗೆ ಅಲ್ಲ, ಆದರೆ ಮಗಳಿಂದ ತಾಯಿಯ ಕಡೆಗೆ ಒಗೆದಿದ್ದೇನೆ. ತಲೆಮಾರಿನಿಂದ ತಲೆಮಾರಿಗೆ ಸಾಗಿ ಬರುವ ಸಂಸ್ಕಾರದ ಗತಿಯನ್ನು ಇಲ್ಲಿ ವಿರುದ್ಧ ದಿಕ್ಕಿನಲ್ಲಿ ಪ್ರವಹಿಸುವಂತೆ ಮಾಡಿದ್ದೇನೆ.

ನಾಟಕದ ನಾಯಿಕೆ ಸಂತೀಯ ಬಗ್ಗೆ ಬಹಳ ಜನ ಆರೋಪ ಎತ್ತಿದರು. ಭಾರತೀಯ ಸಂಸ್ಕೃತಿಯಲ್ಲಿ ಶ್ರದ್ಧೆಯಿರಿಸಿದ ನಾರಿ ಈ ಪ್ರಕಾರದ ವಿದ್ರೋಹ ಮಾಡಲು ಸಾಧ್ಯವಿಲ್ಲ, ಆದರೆ ಹಳ್ಳಿಗಳಲ್ಲಿ ಅತ್ಯಾಚಾರ, ಕೊಲೆ, ವೈಮನಸ್ಸು ಮತ್ತು ಕಾಮ-ವಶ ವಿದ್ರೋಹ ಸರ್ವೇ ಸಾಮಾನ್ಯವಾದುದು. ಹಳ್ಳಿಯ ಜೀವನವನ್ನು

ರೋಮಾಂಚಕ ಪುಟಕೊಟ್ಟು ನೋಡಬೇಕಾದ ಅವಶ್ಯಕತೆ ಇಲ್ಲ, ಅದೂ ಅಲ್ಲದೆ ಹಳ್ಳಿಯೆಂದರೆ, ಕೇವಲ ಹೊಲಗಳ ಜಗಳದಿಂದ ಕೂಡಿದ ಕ್ಷೇತ್ರವೆಂದೂ ತಿಳಿಯಬಾರದು. ಇದರ ಮೇಲೆ ತೋರುವ ಶಾಂತವಾದ ವ್ಯವಹಾರ ಮತ್ತು ಮನೆಗಳಲ್ಲಿಯ ಸರಳ ಜೀವನದ ಕೆಳಗೆ ಭಾವನೆಗಳ ಬೆಂಕಿ ಪ್ರಜ್ವಲಿಸುತ್ತಲೇ ಇರುತ್ತದೆ.

'ಕಮ್ಮಾರ', ಜೀವನದ ಕಠೋರ, ನಿರ್ದಯಿ, ನಿರ್ಮಮ ದೈನಿಕ ವ್ಯವಹಾರ ಮತ್ತು ಅನ್ಯಾಯದ ಪ್ರತೀಕ. 'ಕಮ್ಮಾರ'ನ ಕುಲುಮೆ, ಪಾತ್ರಗಳ ಮಾನಸಿಕ ಕ್ರಿಯೆಗಳ ಅನುಸಾರವಾಗಿ ಹತ್ತುತ್ತದೆ, ಉರಿಯುತ್ತದೆ, ಮತ್ತು ಧಗಧಗಿಸುತ್ತದೆ. ಈ ನಾಟಕ, ಇದೇ ಪ್ರತೀಕಾತ್ಮಕತೆಯ ಅಭಿವ್ಯಕ್ತಿ-ಎಂದು ತಿಳಿಯಬೇಕೆಂದು ಬಯಸುತ್ತದೆ. ಸುತ್ತಿಗೆಯ ಪೆಟ್ಟಿನ ಕಠೋರತೆ, ಇದರ ನಾಯಕನ ಸ್ವಭಾವದ ಅಭಿವ್ಯಕ್ತಿಯ ಪ್ರತೀಕ. ಪಾತ್ರಗಳ ಕ್ರಿಯೆ ಹಾಗೂ ಸಂಭಾಷಣೆಯಲ್ಲಿ ಕಠೋರತೆ ಇದೆ, ಭಾವುಕತೆ ಇಲ್ಲ.

ಕೆಲವೆಡೆ ಸಂಭಾಷಣೆಗಳು ಕಾವ್ಯಮಯವಾಗಿವೆ. ಇಂಥ ಭಾಷೆಯನ್ನು ಪಾತ್ರಗಳ ಅಂತರಂಗದ ಹೋರಾಟವನ್ನು ವ್ಯಕ್ತಗೊಳಿಸಲು ಉಪಯೋಗಿಸಲಾಗಿದೆ.

ಇಡೀ ನಾಟಕ ಒಂದೇ ಸ್ಥಳದಲ್ಲಿ ನಡೆಯುತ್ತದೆ. ಕಮ್ಮಾರನ ಅಡಿಗಲ್ಲು ಹಾಗೂ ಉಳಿದ ಸಾಮಾನುಗಳು ಅವನ ನಿರ್ದಯತೆಯ ಪ್ರತೀಕವೆನ್ನುವ ಹಾಗೆ ಇಲ್ಲಿ ಉಪಯೋಗಿಸಲಾಗಿದೆ.

ಈ ನಾಟಕವನ್ನು ನಾನು ಸ್ಟೇಜಿನ ಅನುಭವದ ಹಿನ್ನೆಲೆಯಲ್ಲಿ ಸುಧಾರಿಸಿ ಮತ್ತೆ ಬರೆದಿದ್ದೇನೆ.

# ಅಂಕ: ಒಂದು

**(ಕಾಕೂನ ಕುಲುಮೆ, ತಿದಿ, ಅಡಿಗಲ್ಲು, ಸುತ್ತಿಗೆ, ಇಕ್ಕಳ, ತವೆ ಮುಂತಾದ ಸಾಮಾನುಗಳು ಹರಡಿವೆ. ಒಂದೆಡೆಗೆ ಗೋಡೆಗೆ ತಾಗಿ ಚಕ್ಕಡಿಯ ಹಳಿ ಬದ್ದಿದೆ. ರಂಗಮಂಚದ ಹಿಂದೆ ಅರೆದೆರೆದ ಕಿಟಕಿ ಇದೆ, ಅದರೊಳಗಿಂದ ಒಲಿ ಮತ್ತು ಭಾಂಡೆಗಳು ಕಾಣಿಸುತ್ತವೆ. ಬಲಗಡೆ ಓಣಿಯ ಕಡೆ ಒಂದು ಬಾಗಿಲು. ಸಂತೀ, ಕುಲುಮೆಯ ಅಕ್ಕಪಕ್ಕದಲ್ಲಿ ಹರಡಿರುವ ಸಾಮಾನುಗಳನ್ನು ಸರಿಯಾಗಿ ಇಡುತ್ತಿದ್ದಾಳೆ. ದೀಪಾ, ಕುಲುಮೆಗೆ ಗಾಳಿ ಹಾಕುತ್ತಿದ್ದಾನೆ. ಬೈಸೋ, ಬಗಲಲ್ಲಿ ಹಾಲು ಹಿಂಡಿಕೊಳ್ಳುವ ಪಾತ್ರೆ ಇರಿಸಿಕೊಂಡು ಅಡಿಗೆ ಮನೆಯಿಂದ ಹೊರಬರುತ್ತಾಳೆ.)**

**ಸಂತೀ:** ಹಿಂಡೋ ತಂಬಿಗಿಯೊಂದಿಗೆ ಎಲ್ಲಿಗೆ ಹೊರಟಿರುವಿರಿ ?

**ಬೈಸೋ:** ಹಾಲ ಹಿಂಡ್ಲಿಕ್ಕ.

**ಸಂತೀ:** ಇಷ್ಟ ಜಲ್ದಿ ? ಇನ್ನು ಇದ ಈಗ ಹಸುಗಳು ಅಡವಿಯಿಂದ ಬಂದಾವ. ಅವು ಮೇವನ್ಯಾಗ ಮಾರಿನರ ಇಟ್ಟಾsವ ಇಲ್ಲ ಇನ್ನು.

**ಬೈಸೋ:** ಹಸುವಿನ ಹಾಲು ಈಗ ಹಿಂಡ್ಲಿಲ್ಲಾಂದ್ರ ಅದ ಮತ್ತ ಹಾಲ ತೊರೆಯೋದಿಲ್ಲ, ಇಳಿದ ಹಾಲ್ನೆಲ್ಲ ಮ್ಯಾಕ ಏರಿಸಿಗೊಂಡ್ಬಿಡತೈತಿ. ಈಗಾಗಲೇ ಅದು ನನ್ನ ಹಾದಿ ನೋಡುತ್ತಿರಬೇಕು, ಸ್ವಲ್ಪ ಹೊತ್ತ ಮಾಡಿದ್ರ ಸಾಕು ಕೊಂಬಿಲೆತ್ತಿ ಒಗ್ಯಾಕ ಬರತೈತಿ.

**ಸಂತೀ:** ಇನ್ನೂ ಹೊತ್ತಸೈತ ಮುಳುಗಿಲ್ಲ ಮಾರಾಯ್ತಿ....

**ಬೈಸೋ:** ಹೊತ್ತು ಮುಳುಗ ಮುಂದ ಹೋದ್ರ ನೀ ಸಿಟ್ಟಿಗಿಬರ್ತಿ, ಹೊತ್ತಿಲ್ಲ ಹೊತ್ತ್ಯಾಗ ಅಡ್ಡಾಡಬ್ಯಾಡ, ಜನ ಏನೇನೋ ಆಡ್ಕೋತಾರ ಅಂತೀ. ನಾ ಏನ ಮಾಡ್ಲಿನ್ನು....

**ಸಂತೀ:** ಹಂಗಾsದರ ಹೋಗ. ಒಂದ ಮಾತ, ಅಲ್ಲೇ ಬಹಳ ಹೊತ್ತ ಇರಬ್ಯಾಡ. ದಂದಹಕ್ಯಾಗ ಹಾಲ ಸಿಂಪಡ್ಸೋದು ಮರೀಬ್ಯಾಡ; ದೇವರು, ಸಿಡಸದಿದ್ರ ಸಿಟ್ಟಾಗ್ತಾನ, ಚಾತುರ್ಮಾಸದ ದಿನಗಳಿವು. ದೀಪಾ ಮುಡಿಸಿ ಜಲ್ದಿ ಬಾ.

**ದೀಪಾ:** ಅಕ್ಕನ ಜತಿಗೆ ನಾನೂ ಹೋಗಲೇನು ಹಾಲು ಹಿಂಡಿಕೊಂಡು ಬರಾಕ ?

**ಬೈಸೋ:** ನೀಸಿಲ್ಲೇ ಕುಲುಮ್ಯಾಗ ಇರು, ಇಲ್ಲಿ ಕೆಲಸ ಮಾಡು.

ಸಂತೀ: ಎಲ್ಲಿಗೆ ಹೋಗ್ತಿ ಮಗಾ? ಈಗ, ನಿನ್ನ ಅಪ್ಪ ಬರೋ ಹೊತ್ತಾತು. ಜಾಟರ ರಂಟಿಕುಳ ಬಿದ್ದಾವ, ಅವನ್ನ ಹಣದು ಚೂಪ ಮಾಡಬೇಕು.

ದೀಪಾ: ಇನ್ನೂ ಹಗಲು ಅದ ಆಳ, ಓಣ್ಯಾಗ ನನ್ನ ಗೆಳೆಯಾರು ಆಡಾಕಹತ್ಯಾರ ನಾನೂ ಆಡಾಕ ಹೋಗ್ತೀನಿ. ಅಪ್ಪ ಬರೋದರೊಳಗ ಬರ್ತೀನಿ....

ಸಂತೀ: ಅಲ್ನೋಡು ಬಂದs ಬಿಟ್ಟ.

ಬೈಸೋ: ಇವ ಅಪ್ಪ ಅಲ್ಲ.

ಸಂತೀ: ಯಾರ ಮತ್ತs.

(ಗಜ್ಜಣ ಪ್ರವೇಶಿಸುತ್ತಾನೆ.)

ಗಜ್ಜಣ: ಸ್ವಲ್ಪ ಬೆಂಕಿ ತಗೊಳ್ಳಾsಕ ಬಂದಿದ್ದೆ. ಚಿಲುಮಿಗೆ ಒಂದು ಕೆಂಡ ಬೇಕಾಗಿತ್ತು.

ಸಂತೀ: ಇನ್ನು ಈಗ ಪುಟವು ಮಾಡೀನಿ. ಇನ್ನೂ ಸರಿಯಾಗಿ ಇದ್ದಲಿ ಹತ್ತಿ ಕೊಂಡಿಲ್ಲ.

ಗಜ್ಜಣ: ನನಗ ಒಂದು ಕಿಡಿಯಾದರ ಸಾಕು. ಚಿಲುಮಿ ಅಷ್ಟರಿಂದಲೇ ಹತ್ತಿಗೊಳ್ಳತೈತಿ.

ಬೈಸೋ: ಜಲ್ದಿ ಹೋಗಲ್ಯಾ ಅವ್ವ, ಆಕಳ ಅಂಬಾ ಅನ್ನಾಕ ಹತ್ತೇತಿ.

ಸಂತೀ: ನಿನ್ನ ನೆರೆಹೊರೆಯ ಕುಲುಮೆಗಳಿಂದ ತೆಗೆದುಕೊಳ್ಳಬಹುದಾಗಿತ್ತಲ್ಲ.

ದೀಪಾ: ಸ್ವಲ್ಪ ಬೆಂಕಿ ಕೊಡಲೇನು, ತಗದು.

ಸಂತೀ: ಈಗ ಹತ್ಲಿಕ್ಕ ಹತ್ತ್ಯೈತಿ. ಪುಟವು ಆಗ್ತಾ ಇರೋ ಬೆಂಕಿನ ಕೆಡಸಬ್ಯಾಡ.

ಗಜ್ಜಣ: ಕಾಕೂ ಎಲ್ಲಿ?

ಸಂತೀ: ಪಂಡಿತರ ಹತ್ತರ ಹೋಗ್ಯಾನ, ಬೈಸೋನ ಮದುವೆಗೆ ಮುಹೂರ್ತ ನೋಡಾಕ.

ಗಜ್ಜಣ: ವರ ಸಿಕ್ಕನೇನು?

ಸಂತೀ: ಹಾಂ! ಮೋಡಾದ ಕಮ್ಮಾರನ ಮಗ.

ಗಜ್ಜಣ: ಒಳ್ಳೆಯದಾಯ್ತು, ದೊಡ್ಡಕಿ ಆಗ್ಯಾಳ ಮದುವೆ ವಯಸ್ಸು. ನನ್ನ ನೋಡು-ವಯಸ್ಸಿದ್ದಾಗ ಮದುವೆಯಾಗಲಿಲ್ಲ, ಈಗ ಕಾಲ ಮೀರಿ ಹೋಯಿತು.

ಸಂತೀ: ನೀನು ಮೂರ್ಖ. ಒಳ್ಳೊಳ್ಳೆ ಮನೆಯ ಸಂಬಂಧ ಬಂದವು, ಕಲ್ಲಂಗಡಿಯಂಥ ಬಣ್ಣದ ಹುಡುಗಿಯರು. ಆದರೂ ನೀನು ಮನಸ್ಸು ಮಾಡಲಿಲ್ಲ. ನಿನ್ನ ದೃಷ್ಟಿಯಲ್ಲಿ ಏನಿತ್ತೋ ಏನೋ ಯಾರು ಬಲ್ಲರು?

ಗಜ್ಜಣ: ನನಗ ಅದರ ಬಗ್ಗೆ ಈಗ ಬ್ಯಾಸರಿಲ್ಲ. ಮನೆ-ಮಾರು ಎಂದು ಅದರಲ್ಲಿ ಸಿಕ್ಕೊಂಡು ಕೇವಲ ಆ ಒಂದು ಮನೆಯುವನಾಗಿಯೇ ಉಳಿಯುತ್ತಿದ್ದೆ. ಈಗ ಯಾವ ಜವಾಬ್ದಾರಿನೂ ಇಲ್ಲ, ಮಜಾ ಇದ್ದೀನಿ.

ಸಂತೀ: ಹಾಂ! ಎರಡು ರೊಟ್ಟಿ ಸುಡಬೇಕಾದರೂ ನೀನsಒಲಿಮುಂದ ಕುಂತು ಒಲಿ ಊದಬೇಕು. ಹೆಂಡತಿ ಇದ್ದರ, ಬಿಸಿಬಿಸಿ ರೊಟ್ಟಿ ತಯಾರ

ಸಿಗತಿದ್ದವು. ಒಲಿ ಹೊತ್ತತಿತ್ತು ಹಾಗೂ ಮನೆಯಲ್ಲಿ ಸುಖ ಇರುತ್ತಿತ್ತು. ಈಗ ನೋಡು ಒಂದು ಚಿಲುಮಿ ಹಚ್ಚಿಕೊಳ್ಳಾಕ ಕುಲುಮಿ ಕುಲುಮಿ ಅಡ್ಯಾಡ್ತಿ. ಮದುವೆಯಾಗಿದ್ರ ಹೀಂಗ ಅಡ್ಯಾಡೋದು ತಪ್ಪತ್ತಿತ್ತು.

**ಗಜ್ಜಣ:** ಸಂತೀ, ನೀನು ಒಂದು ಕಿಡಿಬೆಂಕಿ ಸಲುವಾಗಿ ನೂರು ಅಂತೀ. ಕೊನೆಗೆ ಇದೆಲ್ಲ ಸುಟ್ಟ ಬೂದೀನ ಹೌದಲ್ಲ ಆಗೋದು? ಮೊನ್ನೆ ನೀನು ಕುಲುಮೆಯಿಂದ ಬೂದಿ ತೆಗೆದು ಒಗೆದಾಗ ಅದರಲ್ಲಿ ಅವೆಷ್ಟೋ ಉರಿಯುತ್ತಿದ್ದ ಇದ್ದಲಿಗಳಿದ್ದವು.

**ಸಂತೀ:** ಚಿಲಮಿ ಮುಂದೆ ಮಾಡು, ತಗೋ ಈ ಕೆಂಡ. ಈಗ ಹೊಂಟು ಹೋಗು ಇಲ್ಲಿಂದ.

(ಚಾಕು, ಕತ್ತರಿ ಮುಂತಾದವುಗಳನ್ನು ಸಾಣೆ ಹಿಡಿಯುವ ಕಲ್ಲನ್ನಿಡಲು ಕಾಕೂ ಬರುತ್ತಾನೆ.)

ಇಷ್ಟ ಹೊತ್ತು ಎಲ್ಲಿದ್ದೆ? ಹತ್ತಾರು ಕುಳ, ಮುಂಜಣಾ ಹಣಿಯುವುದಿದೆ.

**ಕಾಕೂ:** ಮೋಡಾದಿಂದ ಬೈಣೋಳ ಮಾವ ಬಂದಿದ್ದ. ನಾವು ಮುಹೂರ್ತ ತೆಗೆಸಿದಿವಿ. ಆಶ್ವೀಜದ ಮುಹೂರ್ತ ಹೊರಟಿದೆ, ಪಂಡಿತರ ಹತ್ತಿರವೇ ಹೊತ್ತಾತು. ಶ್ರಾವಣದ ನಂತರ ಕೆಲಸ ಕಡಿಮೆಯಾಗುತ್ತದೆ. ಪಂಚಮಿಯಿಂದ ಲಗ್ನ ಮಾಡೋದು.

**ಗಜ್ಜಣ:** ಸಮಯ ಹೀಂಗ ಅನ್ನೋದರೊಳಗ ಕಳೆದು ಹೋಗತೈತಿ. ಬೈಣೋ, ನಿನ್ನೆ ಮೊನ್ನೆ ಮನಿ ಅಂಗಳದಾಗ ಆಟಗಿ ಸಾಮಾನುಗಳೊಂದಿಗೆ, ಗೊಂಬೆಗಳೊಂದಿಗೆ ಆಡತಿದ್ಲು ಅನ್ನಸ್ತದ ಈಗಲೂ. ಒಮ್ಮಿಂದೊಮ್ಮಲೆ ಎಷ್ಟು ದೊಡ್ಡಾಕಿ ಆಗಿಬಿಟ್ಲು ನನಗ ಚೋಜಿಗ ಆಗೈತಿ.

**ಕಾಕೂ:** ಬೈಣೋನ ಮದುವೆ ಕಾಲಕ್ಕ ಮೆರವಣಿಗೆ ಇಡೋಣ, ಅದೂ ಮೂರು ದಿನದ್ದು, ಮೂರು ದಿನ ಬೀಗರು ಬಿಜ್ಜರ ಆತಿಥ್ಯ. ಹೊಟ್ಟೆ ತುಂಬುವ ಹಾಗೆ ಅವರನ್ನೆಲ್ಲ ಆದರಿಸಿ ಕಳಿಸಿ ಕೊಡೋಣ. ಊರವರೆಲ್ಲ ನಮ್ಮ ಮಗಳ ಮದುವೆಯ ಸಂಭ್ರಮ ನೆನಪಿಡಬೇಕು. ಹಾಂಗ ಮಾಡೋಣ ಮಗಳ ಮದುವೆ.

**ಸಂತೀ:** ಇಂಥ ದೊಡ್ಡಸ್ತಿಕಿ ಮಾತ ಆಡಬ್ಯಾಡ. ಮಗಳು ಕೊಟ್ಟವನು ಎಲ್ಲವನ್ನೂ ಕೊಟ್ಟಂತೆ.

**ಗಜ್ಜಣ:** ನಾನು ಬೈಣೋಗೆ ಒಂದು ಜೊತೆ ರೇಶ್ಮೆಯ ಬಟ್ಟೆ ಕೊಡುತ್ತೇನೆ.

**ಕಾಕೂ:** ನಿನ್ನ ಕುಂಟಿ ನಾಳೆಗೆ ತಯ್ಯಾರ ಆಗೈತಿ. ಬಂದು ಒಯ್ಯಿ. ನಾನು ಇಡೀ ದಿನ ಮನೆಯಲ್ಲಿರುವೆ.

**ಗಜ್ಜಣ:** ಎರಡು ಜುರಿ ಚಿಲಮಿ ಎಳೆದೆ. ನರಗಳಲ್ಲಿ ಜೀವ ಬಂತು. (ಹೋಗುತ್ತಾನೆ)

ಕಾಕೂ: ದೀಪಾ! ತಿದಿ ಜಗ್ಗು; ಜೋರಾಗಿ ಗಾಳಿ ಬರಲಿ. (ಕೂಡುತ್ತಾನೆ)

ಸಂತೀ: ಮೊದಲು ರೊಟ್ಟಿ ತಿನ್ನು ಆಮೇಲೆ ಕೆಲಸಕ್ಕ ಕೂಡುವಂತಿ. ಹರ್‍ಯಾಗಿಂದ ಏನೂ ತಿಂದಿಲ್ಲ. ರೊಟ್ಟಿ ಆರಿ ಅಂಗಾರ ಆಗ್ತಾವ.

ಕಾಕೂ: ಕಾದ ಕಬ್ಬಿಣ ಆರಿದರ ಅದಕ್ಕಿಂತ ಕೆಟ್ಟ. ಈಗ ಮುಂಜಣ ಕೆಂಪಗ ಆಗ್ಯಾವ, ಈಗಲೇ ಇವನ್ನ ಹಣೀಬೇಕು. (ಸಂತೀ ಒಳಗೆ ಹೋಗುತ್ತಾಳೆ.)

ದೀಪಾ, ಈ ಮುಂಜಣ ನೀರಾಗ ಮುಳುಗಿಸಿ ತಾ, ಇದನ್ನ ಚೂಪ ಮಾಡೀನಿ. ಸುತ್ತಿಗಿ ಎಲ್ಲೈತಿ ?

ದೀಪಾ: ಗೊತ್ತಿಲ್ಲ.

ಕಾಕೂ: ಸುತ್ತಿಗಿ ಎಲ್ಲೈತಿ ?

ಸಂತೀ: (ಒಳಗೆ ಬಂದು) ಬೈಣೋ ಇಲ್ಲೇ ಎಲ್ಲಾದರೂ ಇಟ್ಟಿರಬಹುದು.

ಕಾಕೂ: ಆಕಿ ಏನು ಮಾಡತಿದ್ಲು ಸುತ್ತಿಗಿ ತಗೊಂಡು ?

ಸಂತೀ: ಇಲ್ಲೇ ಎಲ್ಲಾದರೂ ಇರಬಹುದು.

ಕಾಕೂ: ನೀನ ಹುಡುಕಿಕೊಡು ಹಂಗಾರ.

ಸಂತೀ: ಆಕೆ ಬಂದ ಹುಡುಕಿ ಕೊಡ್ತಾಳಾಳ.

ಕಾಕೂ: ಆಕೆ ಎಲ್ಲಿ ಅದಾಳ ?

ಸಂತೀ: ಆಕಳ ಹಿಂಡಾಕ ಹೋಗ್ಯಾಳ.

ಕಾಕೂ: ಒಬ್ಬಳs

ಸಂತೀ: ಹಾಂ!

ಕಾಕೂ: ದನದ ಕೊಟಗ್ಯಾಗ ಒಬ್ಬಾಕಿನ ಕಳಿಸಬ್ಯಾಡ ಅಂತಾ ನಿನಗ ಎಷ್ಟು ಸಲ ಹೇಳಿಲ್ಲ. ಆದರ ನೀನು....

ಸಂತೀ: ಅಷ್ಟ್ಯಾಕ ಇದನ್ ಮಾಡ್ತೀರಿ..... ಇನ್ನೇನು ಬಂದ ಬಿಡ್ತಾಳ.

ಕಾಕೂ: ನೀನ ಯಾಕ ಹೋಗಲಿಲ್ಲ.

ಸಂತೀ: ನಾನೊಬ್ಬಳ ಎಲ್ಲಿ ಎಲ್ಲಿ ಹೋಗಲಿ, ಏನೇನು ಮಾಡಲಿ, ಕೆರೆಗೆ ಹೋಗಿ ಅರಿವಿ ಒಕ್ಕೊಂಡು ಬಂದೆ, ಭಾಂಡೆ ಬೆಳಗಿದೆ, ರೊಟ್ಟಿ ಮಾಡಿದೆ ಮತ್ತ ಈ ಕುಲಮಿ ಹಚ್ಚಿದೆ.

ಕಾಕೂ: ರೊಟ್ಟಿ ಆಮೇಲೆ ಮಾಡಿಕೋಬೇಕಿತ್ತು. ಇಲ್ಲದಿದ್ದರ ಆಕೀಗ ಮಾಡಲಿಕ್ಕ ಹೇಳಬೇಕಿತ್ತು ಮಾಡತಿದ್ಲು, ಎಷ್ಟು ಹೊತ್ತು ಆತು ಆಕಿ ಹೋಗಿ ?

ದೀಪಾ: ಒಂದು ತಾಸು ಆತಪ್ಪ. ಆಗs ಹೋಗ್ಯಾಳ. ನಾನು ಹೋಗಲಿ, ಕರ ಕೊಂಡು ಬರಲಿ.

ಕಾಕೂ: ಹೋಗ, ಆಕೀನ ಕರಕೊಂಡು ಬಾ. (ದೀಪಾ ಓಡಿ ಹೋಗುತ್ತಾನೆ) ಈಗ ಆಕಿ ಸಣ್ಣ ಕೂಸಲ್ಲ, ಹರೆದಾಕಿ. ಆಕೀನ ಹೀಂಗ ದೂರ ಬಿಡಬಾರದು, ಕಣ್ಣರೆಪ್ಯಾಗ ಇಟ್ಟಕೊ.

ಸಂತೀ: ಆಕಿ ಹೋಗ್ತಾಳರ ಎಲ್ಲಿ ? ಇದs ಮನಿಕೆಲಸ ಮಾಡ್ತಾಳ.

**ಕಾಕೂ:** ಹಾಂ.... ಹಾಂ.... ಮನಿಕೆಲಸ ಮುನ್ಯಾಗ ಕುಂತು ಮಾಡಲಿ.

**ಸಂತೀ:** ನಾನು, ಹಿಟ್ಟಿಗೆ ಎಸರು ಹಾಕಿಕೊಂಡು ನಾದಾಕ ಹತ್ತಿದ್ದೆ. ಆಗ ಹಾಲು ಹಿಂಡಲಿಕ್ಕ ಯಾರು ಹೋಗ್ತಾರ, ಈ ಕೆಟ್ಟ ಆಕಳ ಬೇರೆಯವರ್ನ ಹತ್ತರ ಕರದುಕೊಳ್ಳೋದಿಲ್ಲ. ಅಂದ ನಾನs ಹಿಂಡಕೊಳ್ಳಾಕ ಹೋದ್ರ ನನಗs ಒದಿತು. ಈಗಲೂ ಎದಿ ನೂಸ್ತದ. ಅದು ಬೈಣೋಗ ಸುಮ್ನ ಹಿಂಡತೈತಿ. ಆಕೆ ಅದರ ಹಾಲ ಓಂಡಿದರ ಓಂಡ್ಲಿ.

**ಕಾಕೂ:** ಆ ದಿನ ನೆನಪೈತೇನ? ದನದ ಕೊಟ್ಟ್ಯಾಗ ಸೂಬೇದಾರನ ಸರಬಣನೊಂದಿಗೆ ಮಾತಾಡ್ತಾ ಸಿಕ್ಕಿದ್ಲಲ್ಲ ನಮ್ಮ ಮನಿ ಪಕ್ಕದಾಗ ಇರುವ ಹಜಾಮನ ಹೆಂಡತಿ ನೋಡಿದ್ಲು, ಬೈಣೋ ಸರಬಣನ ಬಾಯಿಯಲ್ಲಿ ಆಕಳ ಹಾಲು ಹಾಕತಿದ್ಲು ಅಂತ ಹೇಳಿದಳಲ್ಲ. ಇಡೀ ಊರ ತುಂಬ ಆ ಮಾತು ಹಬ್ಬಿಹೋತು.

**ಸಂತೀ:** ಜನರ ಬಾಯಿ ಮುಚ್ಚೋರು ಯಾರು? ಈ ಊರಿನ ಹೆಂಗಸರು ಒಂದು ಮಾತಿಗೆ ಸಾವಿರ ಮಾತಾಡ್ತಾರ. ನನ್ನ ಮಗಳನ್ನ ನಾ ಬಲ್ಲೆ. ಆಕೆಯಲ್ಲಿ ಯಾವ ದೋಷಾನೂ ಇಲ್ಲ.

**ಕಾಕೂ:** ನಿನ್ನ ಬುದ್ಧೀನ ಹಾಳಾಗಿ ಹೋಗೇತಿ. ಕಷ್ಟದಿಂದ ಸಂಬಂಧ ಹುಡುಕಿಕೊಂಡು ಬಂದೀನಿ ಆಕಿ ಸಲುವಾಗಿ. ಯಾವನೋ ಕುದುರೆ ಕೇಳುತ್ತಿದ್ದ, ಇನ್ನಾವನೋ ಇನ್ನೇನೋ ಕೇಳ್ತಿದ್ದ. ಆಕಿ ಭಾಗ್ಯ ಛಲೋ ಐತಿ, ಮೋಡಾದವರು ಈ ಸಂಬಂಧ ಒಪ್ಪಿಗೊಂಡರು.

**ಸಂತೀ:** ಹುಡುಗನ್ನರ ನೋಡಿದೋ ಅಥವಾ ಹೇಳಿಕಿ ಮಾತ ಕೇಳಿಕೊಂಡು ಉಬ್ಬಿ ಉಬ್ಬಿ ಮಾತನಾಡ್ತಿಯೋ.

**ಕಾಕೂ:** ನಾನು ಸ್ವತಃ ನೋಡಿ ಬಂದೀನಿ. ಇಡೀ ಊರಿನ ಕಂಬಾರರಲ್ಲಿ ಒಂದನೇ ನಂಬರ ಹುಡುಗ. ಮೈ ಕೈಲೇ ಭರಪೂರ ಅದಾನ. ಇಡೀ ದಿನ ಕೆಲಸ ಮಾಡಿದರೂ ದಣಿಯೋದಿಲ್ಲ. ಕಬ್ಬಿಣದಿಂದ ಮಾಡಿದ ಹಾಗಿದ್ದಾನ.

**ಸಂತೀ:** ಕುಂಬಾರವಳು ಅಂತಿದ್ಲು-ಹುಡುಗ ಬಹಳ ಕಪ್ಪಗ ಹಾಗೂ ಹೆಬ್ಬಾವು ಇದ್ದಂಗ ಅದಾನ ಅಂತಾ.

**ಕಾಕೂ:** ಹ್ಞಾಂ! ಇವಳಿಗೆ ಯಾವ ತಹಶೀಲದಾರರನ್ನು ಹುಡುಕಿ ತರಲಿ? ಇವೆಲ್ಲ ಅನಾವಶ್ಯಕ ಮಾತುಗಳು. ಕೈ-ಕಾಲ ಆಡಿಸದಿದ್ದರೆ ದೇಹ ಹಳದಿ ಆಗುವುದು ಸ್ವಾಭಾವಿಕ. ನೆನಪಿಡು, ಇನ್ನು ಮುಂದೆ ಅವಳನ್ನು ರಾತ್ರಿ ಹಾಲು ಹಿಂಡಲು ಕಳಿಸಬೇಡ. ಇದರ ಬಗ್ಗೆ ಆಕೆಯ ಮಾವನ ಮನೆಯವರಿಗೆ ಸ್ವಲ್ಪ ಸುದ್ದಿ ಹತ್ತಿದರ ಸಾಕು ಈ ಸಂಬಂಧವನ್ನೇ ಮುರಿದುಕೊಂಡಾರು.

**ಸಂತೀ:** ನಿನಗಂತೂ ಬರೇ ಇಂಥ ಉಲಟ-ಸಲಟ ಮಾತs ಹೊಳಿತಾವ. ನಾನು ಅಂದ ಕೇಳಿದಾಗ ಆಕಿ, ಆಕಳ ಬಾಲ ಹಿಡಿದು ಆಣೆ ಇಟ್ಟುಗೊಂಡ್ಲು.

**ಕಾಕೂ:** ಹೋಗಿ ನೋಡ್ತೀನಿ, ಏನರs ಮಾಡಾಕ ಹತ್ಯಾಳ. ಇಷ್ಟು ಹೊತ್ತಾಯ್ತು. ನಜಾಮಸಕ್ಕೇನ ಕುದುರೆ ಎರಡು ಸಲ ಸುತ್ತಾಡಿ ಬಂತು. ಸೌಂಧಿ, ಆಡು ಕಾಯಿಕೊಂಡು ವಾಪಸ್ ಬಂದ್ಲು. ಒಲೆಯಲ್ಲಿ ರೊಟ್ಟಿ ಬೇಯಿಸಿಕೊಂಡು ಎಲ್ಲ ಹೆಂಗಸರೂ ಹೋದರು, ಆದರೂ ಆಕೆ ಇನ್ನೂ ಬರಲಿಲ್ಲ.

**ದೀಪಾ:** ಅಪ್ಪಾ!

**ಕಾಕೂ:** ಏನು ಮಗಾ ?

**ದೀಪಾ:** ಬ್ಯೆಣೋ ಕೊಟ್ಟಿಗೆಯಲ್ಲಿಲ್ಲ.

**ಕಾಕೂ:** ಸರಿಯಾಗಿ ನೋಡಿದೇನು ?

**ದೀಪಾ:** ಹಾಂ! ಎಲ್ಲಾ ಕಡೆಗೂ ನೋಡಿದೆ. ಕಟ್ಟೆಮ್ಯಾಲ ತಂಬಿಗಿ ಇತ್ತು. ಆದರ ಅಕ್ಕ ಅಲ್ಲಿಲ್ಲ.

**ಕಾಕೂ:** ಕೆಟ್ಟ ಸಂತಾನ! ಮನೆಯ ಮರ್ಯಾದೆಗೆ ಕಲಂಕ. ನೀನಿಲ್ಲಿ ಕೂಡು. ಹೋಗಿ ಅವಳ್ನ ಕರಕೊಂಡು ಬರ್ತೀನಿ.

(ಬ್ಯೆಣೋ ಹಾಲಿನ ತಂಬಿಗೆಯೊಂದಿಗೆ ಬರುತ್ತಾಳೆ ಹಾಗೂ ಒಳಗೆ ಹೋಗತೊಡಗುತ್ತಾಳೆ.)

**ಕಾಕೂ:** ಬ್ಯೆಣೋ!

**ಬ್ಯೆಣೋ:** ಏನು ?

**ಕಾಕೂ:** ಎಲ್ಲಿಗೆ ಹೋಗಿದ್ದಿ ?

**ಬ್ಯೆಣೋ:** ಹಾಲು ಹಿಂಡಲು.

**ಕಾಕೂ:** ಕೊಟ್ಟಿಗೆಯೊಳಗ ಇದ್ದಿಲ್ಲೇನು ನೀನು ?

**ಬ್ಯೆಣೋ:** ನಾನು ಅಲ್ಲೇ ಇದ್ದೆ. ಇಲ್ನೋಡು ಹಾಲಿನ ಪಾತ್ರೆ. ಇನ್ನೂ ಬುರಗು ಸಹಿತ ಹೋಗಿಲ್ಲ.

**ಕಾಕೂ:** ನಿನ್ನ ಗುಣ ಎಲ್ಲ ಗೊತ್ತೈತಿ ನನಗ.

**ಬ್ಯೆಣೋ:** ನಾನು ಕೊಟ್ಟಿಗೆಯೊಳಗ ಇದ್ದೆ. ಗೂಟಕ್ಕ ಕಟ್ಟಿದ ಕರ ಬಿಚ್ಚಿದಾಗ, ಅದು ಹಾರಾಡಿ ಹಾರಾಡಿ ಆಕಳದ ಹತ್ರ ಹೋಗಿ ಮಲಿ ಕುಡಿಯಾಕ ಹತ್ತಿದಾಗ, ನಾನು ಜಗ್ಗಿ ಹಿಡಿದು ತಂದು ಮತ್ತ ಗೂಟಕ್ಕ ಕಟ್ಟಿದೆ ಆ ಮ್ಯಾಲ ಹಾಲು ಹಿಂಡಲಾಕ ಕುಂತೆ.

**ಕಾಕೂ:** ನಿನ್ನ ನೋಡಾಕ ದೀಪಾನ ಕಳಿಸಿದೆ. ನೀನು ಅಲ್ಲಿರಲಿಲ್ಲ.

**ಬ್ಯೆಣೋ:** ಹಾಲು ಹಿಂಡುವುದರಲ್ಲಿ ಸ್ವಲ್ಪ ಹೊತ್ತಾದರೂ ಮನ್ಯಾಗ ಬಿರುಗಾಳಿ ಎಳ್ತದಂತ ನನಗ ಗೊತ್ತಿರಲಿಲ್ಲ. ಅದಲ್ದ ಹಿಂದ ಹಿಂದ ಹುಡುಗನ್ನೂ ಕಳಿಸ್ತೀರಿ, ನಾನೇನ ಕಳ್ಳಿ ಎನ್ನುವ ಹಾಗೆ.

**ದೀಪಾ:** ನಾನು, ಈಕೀನ ಎಲ್ಲ ಕಡೆ ನೋಡಿದೆ.

**ಬ್ಯೆಣೋ:** ಇರಲಿಬಿಡೋ ಭಡವಾ.

**ಕಾಕೂ:** ದೀಪಾ, ಡಾಗ ಬಂಗ್ಲಾಕ ಓಡಿ ಹೋಗಿ ಡಿಪ್ಪಿಯ ಜವಾನಗ ಹೇಳು, ಕುದುರೆ ಇಲ್ಲಿಗೆ ತಗೊಂಡು ಬಾ ಅಂತ. ಬೆಳಗಿನಿಂದ ಎರಡು ಸಲ

ಸಂದೇಶ ಬಂದಿವೆ ಹೋಗು. (ವಿರಾಮ) ನೀನು ಎಲ್ಲಿಗೆ ಹೋಗಿದ್ದಿ ಎಂಬುದು ನನಗ ಗೊತ್ತದ, ನಿನ್ನ ಅದೇ ಗೆಳೆಯನ್ನ ನೋಡಾಕ ಹೋಗಿದ್ದಿ ಹೌದಲ್ಲ ?

(ಗೋಡೆಹಾರಿ ದೀಪಾ ಓಡಿ ಹೋಗುತ್ತಾನೆ.)

ಬೈಸೋ: ಅಪ್ಪಾ !

ಕಾಕೂ: ಎಲ್ಲ ಗೊತ್ತದ ನನಗ, ನೀನು ಕುಲಟೆ, ಯಾವುದಾದರೂ ನೆಪದಿಂದ ಹೊರಗೆ ತಿರುಗುತ್ತಲೇ ಇರುವೆ, ಒಮ್ಮೆ ದಾರ ತೆಗೆಯಲಿಕ್ಕೆ, ಒಂದೊಮ್ಮೆ ಕೆರೆಗೆ ಅರಿವೆ ತೊಳೆಯಲೆಂದು ಮಗುದೊಮ್ಮೆ ಇನ್ನೇನೋ ನೆಪ ಮಾಡಿಕೊಂಡು. ಒಟ್ಟಿನಲ್ಲಿ ನಿನಗೆ ಯಾವುದಾದರೂ ನೆಪ ಬೇಕು. ಆ ಬದ್ಮಾಶನನ್ನು ನೋಡದೆ ನಿನಗ ಇರಲಿಕ್ಕೇ ಆಗೋದಿಲ್ಲ.

ಬೈಸೋ: ಊರಿನ ಪ್ರತಿಯೊಬ್ಬ ತರುಣ ನಿನಗ ಬದ್ಮಾಶರಾಗಿಯೇ ಕಾಣಸ್ತಾರ.

ಕಾಕೂ: ಸರಬಣನಂತೂ ಮಹಾಧೂರ್ತನಾಗಿದ್ದಾನೆ.

ಬೈಸೋ: ನಾಚಿಕೆ ಬರಲ್ಲೇನು ನಿನಗ ಹೀಂಗ ಅನ್ನಾಕ ? ಯಾವಾಗಲೂ ಸಂಶಯ. ಯಾವಾಗಲೂ ಕಣ್ಣು ಕೆಂಪು.

ಕಾಕೂ: ನೀನು ಕುಲಟೆ ನಿನ್ನ ಚಾಳಿ ಬಿಡೋಲ್ಲ ? ನಿನಗೆ ನಾನು ಎಷ್ಟು ಸಲ ಹೇಳಿನಿ, ಅಲ್ಲಿ ಹೋಗಬ್ಯಾಡ ಅಂತ.
(ಬೈಸೋ ಒಳಗೆ ಹೋಗಲೆತ್ನಿಸುತ್ತಾಳೆ) ಎಲ್ಲಿಗೆ ಹೊಂಟಿ ?

ಬೈಸೋ: ಬಿಡು ನನ್ನ.

ಕಾಕೂ: ನಾಳೆಯಿಂದ ಹಾಲು ಹಿಂಡಾಕ ಹೋದಿಯಂದ್ರ ಕಾಲ ಮುರ್ದ ಹಾಕ್ತೀನಿ.

ಬೈಸೋ: ನನ್ನ ಬಿಡಲ್ಲ.

ಕಾಕೂ: ನಿನ್ನ ಈ ಚಾಳಿ, ಎಂದಾದರೂ ಒಂದಿನ ನಮ್ಮನ್ನೆಲ್ಲ ಮುಳುಗಿಸಿ ಬಿಟ್ಟೀತು. ಈಗ ಕೊನೆಗಳಿಗ್ಯಾಗ ನೀನು ನನ್ನ ಮಾನಾ ಮಣ್ಣುಪಾಲ ಮಾಡಾಕಹತ್ತಿ. ನಾನು ನೋಡಿದರ, ನಿನ್ನ ಸಲುವಾಗಿ ವರನ ಹುಡುಕ್ತಾ ಇದ್ದೀನಿ, ನೀನು ಇತ್ತ ಹೀಂಗ ಮಾಡ್ತಾ ಇದ್ದಿ. ಹಿಂಗಾದರ ಹ್ಯಾಂಗ ? ಈಗ ಹುಡುಕಿರೋ ವರ ಮಸ್ತ ಇದ್ಯಾನ. ಅವನಿಗೂ ಕಮ್ಮಾರಕಿ ಕೆಲಸ ಐತಿ. ಹುಡುಗ ದಷ್ಟಪುಷ್ಟ ಕಟ್ಟಾಳು.

ಬೈಸೋ: ಹ್ಣುಂ ! ಕಮ್ಮಾರಕಿ ಕೆಲಸ ! ಹಾಗಂತನ ನನ್ನ ಮನಸ್ಸು ಒಪ್ಪೋದಿಲ್ಲ. ಆ ಕೆಲಸ ಅಂದರ, ನನಗ ವಾಕರಿಕಿ ಬಂದ ಹೋಗೇದ, ಅದಕ ಅವ ಅಂದ್ರ ನನಗ ಆಗೋದಿಲ್ಲ.

ಕಾಕೂ: ನಿನ್ನ ಬುದ್ಧಿ ಹಿಡ್ತದಾಗ ಐತೋ ಇಲ್ಲ ?

ಬೈಸೋ: ಇಲ್ಲ.

ಕಾಕೂ: ಹಾಂ ! ಏನಂದಿ ?

**ಬೈಸೋ:** ಇಲ್ಲ, ನನ್ನ ಬುದ್ಧಿ ಹಿಡ್ತದಾಗ ಇಲ್ಲ. ದಿನ ದಿನದ ಈ ಸುಳ್ಳಿನ ಕತೆಯನ್ನು ಇಂದ ಮುಗಿಸಿಬಿಡ್ತೀನಿ.

**ಕಾಕೂ:** ಯಾರು ಹೇಳ್ತಾರ ಸುಳ್ಳು ?

**ಬೈಸೋ:** ನಾನು.

**ಕಾಕೂ:** ಏನಂದಿ ?

**ಬೈಸೋ:** ನಾನು ಸುಳ್ಳು ಹೇಳಿದ್ದೆ. ಎಲ್ಲ ಮುಚ್ಚಿಡುತ್ತಿದ್ದೆ. ಆದರೆ ಇಂದು ಇದರ ಇತ್ಯರ್ಥ ಮಾಡಿ ತೀರುವೆ ಹಾಂ! ನಾನು ಅವನನ್ನೇ ಕಾಣಲು ಹೋಗಿದ್ದೆ.

**ಕಾಕೂ:** ನೀನು ನನ್ನ ಮಗಳಲ್ಲ, ಯಾವನೋ ಬದ್ಮಾಶನ ಸಂತಾನ. ನೋಡ್ತಿ ಏನು, ಕೇಳಿಸಲಿಲ್ಲೇನು ?

**ಬೈಸೋ:** ಇಲ್ಲ

**ಕಾಕೂ:** ಏನು ?

**ಬೈಸೋ:** ನಾನು ಏನನ್ನೂ ಕೇಳಲಿಲ್ಲ. ನನ್ನ ಕುತ್ತಿಗೆ ಹಿಚ್ಕಿ ಹಾಕಿಬಿಡು. ಕತ್ತರಿಸಿ ಹಾಕು ನನ್ನನ್ನು. ನನಗೆ ಈ ಮನೆಯೊಂದಿಗೇ ಜಿಗುಪ್ಸೆ, ದ್ವೇಷ. ಈ ಕುಲುಮೆ, ನೀನು-ಈ ಎಲ್ಲವನ್ನೂ ದ್ವೇಷಿಸುತ್ತೇನೆ.

**ಕಾಕೂ:** ನೀನು ಇಂಥದನೆಲ್ಲ ಬಿಟ್ಟುಬಿಡು, ಕುಲಟೆ. ಈ ರೀತಿ.....

**ಬೈಸೋ:** ಹಾಂ! ಈ ರೀತಿ..... ನಾನು ಇರುವುದಿಲ್ಲ, ಇಲ್ಲ ಇಲ್ಲ. ನೂರು ಸಲ ಹೇಳ್ತೀನಿ, ಹಿಂಗ ಇರೋದಿಲ್ಲ.

**ಕಾಕೂ:** (ಅವಳ ಕೈಯನ್ನು ತಿರುವುತ್ತ) ಮತ್ತ ಅವನ ಪತ್ತಿರ ಹೋಗ್ತಿ ? ಅವನ್ನ ಭೆಟ್ಟಿಯಾಗ್ತಿ ?

**ಬೈಸೋ:** (ಬಿಕ್ಕುತ್ತ) ಇಲ್ಲ.... ಬಿಡು.... ಇಲ್ಲ.... ಬಿಡು ನನ್ನ....

**ಕಾಕೂ:** ಮನೆಯಿಂದ ಹೊರಗ ಹೋದೀ ಅಂದ್ರ, ತುಂಡು ತುಂಡು ಮಾಡ್ತೀನಿ.

(ಸಂತೀ ಓಡುತ್ತ ಬರುತ್ತಾಳೆ.)

**ಸಂತೀ:** ಹುಡುಗಿಯೊಂದಿಗೆ ಯಾಕ ಕುಸ್ತಿ ಆಡಾಕ ಹತ್ತಿ ? ಬಿಡು ನನ್ನ ಮಗಳ್ನ.

**ಕಾಕೂ:** ಇವಳು ಸಿಕ್ಕಾಪಟ್ಟೆ ಮಾತಾಡಹತ್ತಿದರ, ನನಗ ಬೆಂಕಿ ಬೀಳ್ತದ ಹೊಟ್ಯಾಗ. ಇವಳ್ನ ಒಳಗ ಕರಕೊಂಡು ಹೋಗು.

**ಸಂತೀ:** ಯಾಕ ಇಷ್ಟು ಸಿಟ್ಟು ? ವಯಸ್ಸಿಗೆ ಬಂದ ಮಗಳ ಮೇಲೆ ನೀನು ಕೈ ಮಾಡಬಾರದು, ಇಡೀ ಊರ ನೋಡ್ತದ.

**ಕಾಕೂ:** ನೋಡ್ಲಿ ಬಿಡು. ನನಗ ಯಾರದರ ಹೆದರಿಕಿ ಐತೇನ ? ನಾನು, ಊರಲ್ಲಿ ತಲೆ ಬಾಗಿಸಿ ನಡೆಯುವುದಿಲ್ಲ. ತಿಳೀತಿಲ್ಲ. ನಾನು ಇವಳಿಗೆ ಸರಿಯಾಗಿ ಪಾಠ ಕಲಿಸ್ತೀನಿ. ಇವಳಿನ್ನೂ ನನ್ನ ಸಿಟ್ಟು ನೋಡಿಲ್ಲ. ಈಕಿ ಎಂದೂ ನನ್ನ ಎದುರಿಗೆ ಬಾಯಿ ಬಿಟ್ಟಿದ್ದಿಲ್ಲ. ನೀನ ಈಕೀನ ತಲೆ ಮೇಲೆ ಏರಿಸಿ ಕುಂತಿ. ನೀನು ಈಕಿ ಬಗ್ಗೆ ಬಹಳ ಕೊಬ್ಬಿಕೋತಿ,

ಸಣ್ಣಾಕಿ ಏನಾಯ್ತು ಬಿಡ್ರಿ, ಅನ್ನಕೋತ ಆಕೀ ಬೆನ್ನ ಕಟ್ಟಾಬಂದಿ, ಕೆರೆಗೆ ಬಟ್ಟೆ ತೊಳೆಯಾಕ ಹೋದ್ರ ಏನಾಯ್ತು, ತೊಟ್ಟಿಗಿಗೆ ಹಾಲು ಓಂಡಾಕ ಹೋದ್ರ ಏನಾಯ್ತು ಅಂತಾ ಬಂದಿ. ಈಗ 'ಏನಾಯ್ತು?' ಅನ್ನೋದ್ರ ಹಣೆಬರಹ ನೋಡ್ತಿಯೇನು ?

**ಸಂತೀ:** ನೀನು ಆಕಿ ಮ್ಯಾಲ ಕೈ ಮಾಡ್ದಿ; ಅದಕ ಆಕಿ ಹಾಂಗ ಮಾತಾಡ್ತಾಳ. ಅವತ್ತು ಆಕಿ ಕಪಾಳಕ ಹೊಡ್ದಿ, ನಿನ್ನ ಐದು ಬಳ್ಳು ಕಪಾಳದ ಮ್ಯಾಲ ಮೂಡಿದ್ವು. ವಯಸ್ಸಿನ ಮಕ್ಕಳ್ನ ಹೀಂಗ ಹೊಡಿಬಾರ್ದು, ಒಳಗ ಕರದು ಬುದ್ಧಿ ಹೇಳಬೇಕು.

**ಕಾಕೂ:** ತಿಳಕೋಬೇಕಲ್ಲ ಹೇಳಿದ್ದು. ಇವಳು ನನ್ನ ಮಗಳಾಗಿದ್ರ, ಯಾವನ ಕಡೆನರ ನೋಡೋದು ಸಾಧ್ಯ ಇತ್ತೇನು ?

**ಸಂತೀ:** ಅವಳು ನಿನ್ನ ಮಗಳ, ಅಂತಾsನ ಇಷ್ಟ ಹಟಮಾರಿ ಅದಾಳ.

**ಕಾಕೂ:** ನಿನ್ನ ಹೋತಳ ಆಕಿ. ಸಣ್ಣಕಿ ಇದ್ದಾಗ ಛಲೋ ಇದ್ಲು. ಮನಿ ಕೆಲಸ ಮಾಡತಿದ್ಲು. ನಾಚಿಕೆ-ಗೀಚಿಕ ಇತ್ತು. ಆದರ ಒಮ್ಮೆಗೆ ಎಲ್ಲ ನಾಚಿಕೆ ಬಿಟ್ಟು ಬಿಟ್ಲು. ಈ ಮನೆಯಲ್ಲಿ ಸಿಟ್ಟಿಗೆ ಬಂದು ಏನಾದರೂ ಅನ್ನೋದು ಕೂಡ ಅಪರಾಧವಾಗಿದೆ. ಕೆಟ್ಟ ಸಂತಾನ. ಯಾವುದೂ ಸರಿಯಿಲ್ಲ. ಯಾವ ನಡತಿಯೂ ಸರಿಯಿಲ್ಲ, ಸರಿಯಾದರೂ ಹ್ಯಾಂಗ ಇರತೈತಿ ? ನೀನೇನು ಸರಿಯಿದ್ದಿ ? ಈ ಮನೆಗೆ ಬಂದಮೇಲೆ ವರ್ಷಗಟ್ಟಲೆ ನಂಜೊತೆ ಮಾತಾಡಿದ್ದಿಲ್ಲ ನೀನು.

**ಸಂತೀ:** ಯಾಕ ಹಳೆ ಮಾತು ಈಗ ಎತ್ತೋದು ? ಅದೆಲ್ಲ ಕಳೆದುಹೋತು, ಮುಗದುಹೋತು. ಕುಲುಮೆಯ ಬೂದಿಯಲ್ಲಿ ಎಲ್ಲವೂ ಮುಚ್ಚಿ ಹೋತು. ನಾನು ಎಲ್ಲವನ್ನೂ ಮರ್ತಬಿಟ್ಟೇನಿ.

**ಕಾಕೂ:** ಐದುವರ್ಷ ಓಡದಿತ್ತು ನಿನಗ-ಅಲ್ಲ ಬಹುಶಃ ಏಳ ವರ್ಷ ಆಗಿರಬೇಕು. ಆಗ ಎಲ್ಲೋ ನೀನು ನನ್ನ ಜೊತೆ ಮಾತಾಡಕ ಸುರು ಮಾಡ್ದಿ. ನಿನಗ ಏನ ದುಃಖ ಅಂಬೋದ ಗೊತ್ತಾಗತ್ತಿದ್ದಿಲ್ಲ. ನಾನು ಮಾತ್ರ ನಿನ್ನ ಕಪ್ಪರದ ಗೊಂಬಿಯಾಂಗ ನೋಡಿಕೊಂಡೆ; ಆದರೂ ನೀನು ಮಾತ್ರ ಯಾವಾಗಲೂ ತವರ ಮನೆಯವಳs ಆಗಿದ್ದಿ, ನಂಜೊತೆ ಮಾತಾಡು ಅಂದಾಗ ನೀನು ಸುಮ್ಮನಿರ್ತಿದ್ದಿ-ಯಾವದೋ ಜಾದುವಿನಿಂದಾಗಿ ಸುಮ್ಮನಿರುವ ಗೊಂಬಿಹಾಂಗ. ನೀನು ಈ ಮನೆಯಲ್ಲಿ ಹೆರವರ್ಹಂಗ ಇದ್ದಿ.

**ಸಂತೀ:** ನೀನು ಕಳದು ಹೋದ ದಿನಗಳನ್ನು ನೆನಪಿಸಿದಾಗಲೆಲ್ಲ ನನ್ನ ಎದಿ ತಲ್ಲಣಗೊಳ್ತದ, ನಾನು ಇಲ್ಲಿಗೆ ಬಂದು 'ದೈವ'· ಒಪ್ಪಿಕೊಂಡು, ಎಲ್ಲದನ್ನು ನುಂಗಿಕೊಂಡು ಈ ಭಟ್ಟಿಯವಳೇ ಆಗಿಬಿಟ್ಟೇನಿ. ಈಗ ನನಗ ಸಂತೋಷ ಐತಿ, ನಾನೆಂದೂ ನಿನ್ನ ಮುಂದ ಯಾವ ತಕರಾರೂ ಮಾಡಿಲ್ಲ.

**ಕಾಕೂ:** ಆದರ ನೀನು ಈಗಲೂ ತವರಮನಿ ಮರ್ತಿಲ್ಲ. ಇಂಥ ಹೆಂಗಸರ

ಬಗ್ಗೆ ಏನು ಹೇಳೋದು. ತವರ ಮನಿಯಲ್ಲಿ ತುಣುಕು ರೊಟ್ಟಿ ತಿಂದು, ಹರಿದ ಚಿಂದಿ ಉಟ್ಟರೂ ಕೂಡ ತವರಮನೀದ ಹೆಚ್ಚಳಿಕೆ ಹೇಳೋದು.

**ಸಂತೀ:** ನೀನು ನನ್ನ ತವರಿಗೆ ಕೆಟ್ಟ ಕೆಟ್ಟ ಮಾತಾಡಬೇಡ.

**ಕಾಕೂ:** ನಿನ್ನ ತವರ ಮನ್ಯಾಗ ಏನಾರ ಐತಿ, ನನಗಂತೂ ಒಂದೂ ತಿಳಿವಲ್ಲು. ಏನಾದರೂ ಗುಪ್ತರೋಗ, ಏನಾದರೂ ರಹಸ್ಯ, ಯಾವುದಾದರೂ.....

**ಸಂತೀ:** ನಾನು ಈ ಮನ್ಯಾಗ ನಿನ್ನವಳಾಗಿ ಇದ್ದೀನಿ-ಹಗಲು ರಾತ್ರಿ ಕೆಲಸದಲ್ಲಿ ತೊಡಗಿ.

**ಕಾಕೂ:** ಕೆಲಸದಿಂದ ಬೇಜಾರು ಬಂದತೇನು ?

**ಸಂತೀ:** ಚಳಿಗಾಲದ ನಿಡಿದಾದ ರಾತ್ರಿಗಳಲ್ಲಿ ಕುಲುಮೆ ಹತ್ತಿರ ಕುಳಿತು, ನಿನ್ನ ಅಂಗಿ ಹೊಲಿತಾ ಇರಲಿಲ್ಲವೇನು ? ನಿನ್ನ ಹರಿದ ಬಟ್ಟೆಗಳನ್ನು ಕತ್ತರಿಸಿ ದೀಪಾಗ ಅಂಗಿ ಹೊಲಿತಾ ಇರಲಿಲ್ಲೇನು ? ಬುರ್ಲಹತ್ತಿ ಓಂಜಿ ಅಳ್ಳಿಮಾಡಿ ಹೊದ್ದುಕೊಳ್ಳಲು ರಜಾಯಿ ಮಾಡ್ತಿರಲಿಲ್ಲೇನು ? ನಾನು ಕೆಲಸಕ್ಕೆ ಎಂದೂ ಬೇಜಾರು ಮಾಡಿಕೊಂಡಿಲ್ಲ. ಈ ಕೆಲಸಗಳೇ ಚದುರಿ ಹೋದ ಸ್ಥಿತಿಯನ್ನು ಸಂಬಾಳಿಸಿವೆ. ನಿನ್ನನ್ನು ಸಂತೋಷದಿಂದ ಇಡಲು ಹಾಗೂ ಮನೆಯ ಮರ್ಯಾದೆ ಕಾಪಾಡಲು ನಾನು ದುಡಿದಿದ್ದೇನೆ. ನಾನು ನಿನಗೆ ಓರ್ವ ಮಗ, ಓರ್ವ ಮಗಳನ್ನೂ ನೀಡಿದ್ದೇನೆ. ಆದರೆ ನೀನು ಮಾತ್ರ ಮನದಲ್ಲಿ ಯಾವಾಗಲೂ ದ್ರೋಹ, ಸಂಶಯವನ್ನೇ ಬೆಳಸಿಕೊಂಡು ಬಂದಿ, ನನ್ನನ್ನು ಒಂದು ದಿನವೂ ಎಲ್ಲೂ ಹೋಗಗೊಡಲಿಲ್ಲ. ಮತ್ತೊಮ್ಮೆ ತವರಿಗ ಹೋಗಗೊಡಲಿಲ್ಲ ನೀನು.

**ಕಾಕೂ:** ತವರಮನೆಗೆ ಹೋಗಲು ನಿನ್ನನ್ನು ಎಂದು ಬೇಡ ಎಂದಿದ್ದ ?

**ಸಂತೀ:** ಈಗ ನಾನು ಅಲ್ಲಿ ಯಾರ ಹತ್ತಿರ ಹೋಗಲಿ. ನನ್ನವರೆನ್ನುವವರು ಅಲ್ಲಿ ಯಾರಿದ್ದಾರ ಈಗ ? ಅವ್ವ ಇದ್ಲು ಆಕೆ ಕಣ್ಣೀರ ಹಾಕಿ ಹಾಕಿ ಸತ್ತು ಹೋದ್ಲು; ಗೆಳತಿಯರಿದ್ದರೂ, ಅವರೆಲ್ಲ ಮದುವಿಯಾಗಿ ಗಂಡನ ಮನೆಗೆ ಹೋದರು. ಅಕ್ಕ-ತಂಗಿ, ಅಣ್ಣ-ತಮ್ಮ ಯಾರೂ ಇಲ್ಲ. ಅವ್ವ ಸತ್ತ ಮ್ಯಾಲ ಅಲ್ಲಿಗೆ ಹೋಗಲಿಕ್ಕ ಮನಸ್ಸಾಗಲಿಲ್ಲ. ನನ್ನ ಅಪ್ಪನೂ ಮಹಾ ಕ್ರೂರ ಕಮ್ಮಾರನಾಗಿದ್ದ. ಮಹಾಜಿದ್ದಿ, ಸಂಬಂಧಿಗಳೊಂದಿಗೆ ಬರೀ ವೈರತ್ವ, ಮಹಾಸಂಶಯೀ. ಇಡೀ ಆಯುಷ್ಯವೆಲ್ಲ ನನ್ನ ಅವ್ವನನ್ನು ಹೊಡೆಯುತ್ತಲೇ ಇದ್ದ. ನನ್ನವ್ವ ಹಾವು ಕಚ್ಚಿದ್ದರಿಂದ ಸತ್ಲು ಅಂತಾ ಜನರಿಗೆ ಗೊತ್ತಿರೋದು. ಆದರ ಆದರ ಒಳಗಿನ ನಿಜಸ್ಥಿತಿ ನನಗ ಗೊತ್ತೈತಿ- ನನ್ನವ್ವ ಸಾಯಿಲ್ಲಿಕ್ಕ ನನ್ನಪ್ಪನ ಕಾರಣ.

**ಕಾಕೂ:** ಅಲ್ಲ. ನಿನ್ನಪ್ಪ ಅಂದು ಪೇಟೆಗೆ ಹೋಗಿದ್ದ, ಯಾವುದೋ ಕಚೇರಿಯಲ್ಲಿ

ಸಾಕ್ಷಿ ಕೊಡಾಕ. ಅವ ಅಲ್ಲಿ ಇರಲಿಲ್ಲ.

**ಸಂತೀ:** ಅವ ಮನ್ಯಾಗ ಇರಲಿಲ್ಲ, ಆದರ ನಮ್ಮ ಅಂಗಳದಲ್ಲಿರುವ ಬೇವಿನಮರಕ ಜೋಕಾಲಿ ಇತ್ತು. ನಾನು ಸಣ್ಣಾಕಿ ಇದ್ದಾಗ ಜೋಕಾಲಿ ಆಡ್ತಿದ್ದೆ. ಅದೇ ಜೋಕಾಲಿಯ ಹಗ್ಗದಿಂದ ನೇಣುಹಾಕಿಕೊಂಡು ಸತ್ತುಹೋದ್ಲು. ಮತ್ತೇನ ಮಾಡ್ತಾಳ ? ನನ್ನ ತಂದೆಯ ಕಬ್ಬಿಣದಂಥ ಸ್ವಭಾವ ಮತ್ತು ಅವನ ನಿರ್ದಯಿ ವರ್ತನೆಗಳು ಅವಳಲ್ಲಿದ್ದ ಸ್ತ್ರೀಯತ್ವವನ್ನು ಮೊದಲೇ ಕೊಂದಿದ್ದವು.

**ಕಾಕೂ:** ನಿನ್ನ ತಂದೆಯ ಬಗ್ಗ ಇಂಥ ಮಾತ ಯಾಕ ಆಡ್ತಿ. ಅವ ನಿನ್ನ ಸಾಕಿ-ಸಲಹಿದ, ಮದುವೆ ಮಾಡಿದ, ಈಗ ಅವ ಈ ಜಗತ್ತಿನ್ಯಾಗೂ ಇಲ್ಲ.

**ಸಂತೀ:** ನನ್ನ ತಂದೆ ನನ್ನನ್ನು, ನಿನಗೆ ಮದುವೆ ಮಾಡಿ ತನ್ನ ಹಟ ಪೂರ್ತಿಮಾಡಿಕೊಂಡ. ಕಬ್ಬಿಣ ಹಣಿವವನ ದ್ರೋಹ ಹಾಗೂ ಕುಲುಮೆಯ ಅಭಿಶಾಪಗಳನ್ನು ನಿಭಾಯಿಸಿದ. ನಾನು ಒಂದು ಕುಲುಮೆಯಿಂದ ಇನ್ನೊಂದು ಕುಲುಮೆಯ ಬೂದಿ ಆರಿಸಲು, ಹುಡುಕಲು ಇಲ್ಲಿಗೆ ಬಂದೆ. ಕಾದ ಕಬ್ಬಿಣದ ವಾಸನೆ, ಹೊಗೆ ಹಾಗೂ ಕಾದು ಕೆಂಡವಾದ ಕಬ್ಬಿಣದ ಮೇಲೆ ಹಣಿಯುವುದರಿಂದ ಉಂಟಾಗುವ ಹೊಳಪು-ಇವೆಲ್ಲವುಗಳ ಬಗ್ಗ ನನಗೆ ದ್ವೇಷವಿತ್ತು. ನನ್ನ ಮನಸ್ಸು ಹಸಿರು ಹೊಡೆ ಮುರಿವ ಹೊಲಗಳಲ್ಲಿ, ಬೀಸುವ ಗಾಳಿಯಲ್ಲಿ ಜೀಕುವ ಆಸೆ ಹೊತ್ತಿತ್ತು. ನೀರಿನಿಂದ ತುಂಬಿ ತುಳುಕುವ ಕಾಲುವೆಗಳನ್ನು ಬಯಸುತ್ತಿತ್ತು. ಆದರೆ ನಿನ್ನ ಮನೆಗೆ ಬಂದು ಈ ಎಲ್ಲ ಆಶೆಗಳು ಸತ್ತು ಹೋದವು. ಪ್ರತಿಯೊಂದನ್ನೂ ನಿನ್ನ ಕಠೋರ ಸ್ವಭಾವ ನುಚ್ಚುನೂರು ಮಾಡಿತು. ಈಗ ನಿನ್ನ ಮಗಳು ಅಥವಾ ಮಗ ನಿನ್ನನ್ನು ಎದುರು ಹಾಕಿಕೊಳ್ಳುತ್ತಿದ್ದಾರೆ.... ಮುಖಾಮುಖಿ ಮಾತಾಡುತ್ತಿದ್ದಾರೆ.....

**ಕಾಕೂ:** ಮಗನಿಗೆಲ್ಲಿ ಅಂಥ ಧೈರ್ಯ! ಮಗಳೇ ಮಿತಿಮೀರಿ ನಿಂತಿದ್ದಾಳೆ. ನೀನಂತೂ ಪ್ರತಿಯೊಂದು ಮಾತನ್ನೂ ಮನಸ್ಸಿಗೆ ಹಚ್ಚಿಕೋತಿ. ನಾನು ಬೈಸೋಗೆ ಸಿಟ್ಟು ಮಾಡಿದೆ, ನೀನು ಅದನ್ನ ನಿನ್ನ ಮೇಲೆ ತಗೊಂಡಿ.

(ದೀಪಾ ಓಡುತ್ತ ಬರುತ್ತಾನೆ)

**ದೀಪಾ:** ಅಪ್ಪಾ, ಜವಾನ ಕುದುರೆ ತಗೊಂಡು ಬಂದ.

**ಕಾಕೂ:** ನೀನು ಇಲ್ಲೆ ಕುಂದ್ರು. ನಾನು ಸ್ವಲ್ಪ ಈ ನಾಲು ಬಿಸಿ ಮಾಡ್ತೀನಿ. (ಎತ್ತರದ ದನಿಯಲ್ಲಿ) ಕುದುರೀನ ಗೂಟಕ್ಕ ಕಟ್ಟು. ಈಗ ಬಂದೆ. ಇನ್ನಿಬ್ಬರ್ನ ಕರಕೊಂಡು ಬಾ, ಕುದುರೆ ಹಿಡಿಕೊಳ್ಳಾಕ. (ನಾಲನ್ನು ಕಬ್ಬಿಣದ ಅಡಿಗಲ್ಲಿನ ಮೇಲೆ ಇರಿಸಿ ಹಣಿಯುತ್ತಾನೆ. ಹೊರಗಿನಿಂದ ಕುದುರೆಯ ಹೇಕರಿಸುವ ದನಿ ಕೇಳಿ ಬರುತ್ತದೆ.)

**- ಪರದೆ -**

# ಅಂಕ: ಎರಡು

(ಒಂದು ವಾರದ ನಂತರ, ಸಂತೀ ಕುಲುಮೆಯ ಹತ್ತಿರ ಕುಳಿತಿದ್ದಾಳೆ. ಬೈಸೋ ಪ್ರೇಕ್ಷಕರ ಕಡೆಗೆ ಬೆನ್ನು ಮಾಡಿ ದೂರದಲ್ಲಿ ನಿಂತಿದ್ದಾಳೆ. ಆಕೆ ಸಿಟ್ಟಿನಿಂದ ತನ್ನ ತಾಯಿಯೆಡೆಗೆ ನೋಡುತ್ತಾಳೆ; ಮತ್ತು ರಂಗಮಂಚದ ಮತ್ತೊಂದು ಭಾಗದಲ್ಲಿ ಬಂದು ನಿಲ್ಲುತ್ತಾಳೆ.)

**ಸಂತೀ:** ಸುಮ್ಮಕ ಆದಿಯಲ್ಲ; ಹೇಳು.

**ಬೈಸೋ:** ನನ್ನ ಕೈ ಈಗಲೂ ನೂಸ್ತದ. ನನ್ನ ಕೂದಲ ಹಿಡಿದು ದರದರ ಎಳದ; ಹೊಡದದ. ನನ್ನ ಮೊಣಕಾಲೂ ತೆರ್ದಾವ.

**ಸಂತೀ:** ನೀನು ಹಟಮಾರಿತನ ಬಿಡೋದಿಲ್ಲ. ಅವನ ಹತ್ತರ ಹಂಗ ಮುಖಾಮುಖಿ ಮಾತಾಡ್ಬಿ ಯಾಕ ? ಸ್ವಲ್ಪ ಹುಷಾರಾಗಿ ಇರು. ನಿನಗ ಜನಮ ಕೊಟ್ಟೆ, ಸಾಕಿ ಸಲಹಿದೆ.....

**ಬೈಸೋ:** ನನ್ನ ಕುತ್ತಗಿ ಹಿಚಗು.

**ಸಂತೀ:** ಅವನ್ನ ಮತ್ತ ಕಂಡಿದ್ದಿಯೇನು ?

**ಬೈಸೋ:** ಯಾರ್ನ ?

**ಸಂತೀ:** ಸರಬಣ.

**ಬೈಸೋ:** ಯಾಕ ಕೇಳ್ತಿ ಹಗಲೆಲ್ಲ, ಅದು ಒಂದ ಮಾತನ್ನ.

**ಸಂತೀ:** ಅವನ ಮಾತನಂಬಿ ಕೆಡಬ್ಯಾಡ. ಏನೇನೋ ಹೇಳಿ ಪುಸ್ಲಾಸ್ತಾನ.

**ಬೈಸೋ:** ನನಗ ಅವ ಹಂಗ ಏನೂ ಹೇಳಿಲ್ಲ.

**ಸಂತೀ:** ಏನ ಹೇಳ್ತಿದ್ದ ?

**ಬೈಸೋ:** ಏನೂ ಇಲ್ಲ.

**ಸಂತೀ:** ನಿಂದ ಈಗ ಭರಪೂರವಯಸ್ಸು; ಈ ವಯಸ್ಸನಾಗ ಏನೂ ತಿಳಿಯೋದಿಲ್ಲ. ನಾ ಹೇಳಿದ್ದ ಕೇಳು.

**ಬೈಸೋ:** ನಿನಗೆ ಬಹಳ ಗೊತ್ತೈತಿ.

**ಸಂತೀ:** ನನಗ ಗೊತ್ತೈತಿ, ಅದಕ ನಿನಗ ಹೇಳಾಕ ಹತ್ತೀನಿ. ನೀನು ನನ್ನ ಮಾತ ಕೇಳದಿದ್ದರ ದುಃಖ ಪಡ್ತೀದಿ. ಜ್ವಾಕಿ.

**ಬೈಸೋ:** ನೀನು ಮಹಾ ಸುಖ ಪಡದಿಯಲ್ಲ.

**ಸಂತೀ:** ಬೈಸೋ !...

**ಬೈಸೋ:** ನೀನಾಕ ಮತ್ತ ನನಗ ಹೇಳ್ತಿ, ನನ್ನ ಉಸಿರು ಕಟ್ಟಿ ಹೋಗೇದ ಈ

ಕುಲುಮಿ ಹೊಗಿಯಾಗ. ಅಪ್ಪನ ಕುಲುಮೆಯ ವಾಸನೆ ಬರುವಂಥ ಮನಿಗೆ ನಾ ಹೋಗಲಾರೆ ಅವ್ವ, ಹೋಗಲಾರೆ.

**ಸಂತೀ:** ನಾನು ಹದಿನೆಂಟು ವರ್ಷದಿಂದ ಇದರಾಗ ಇದ್ದೀನಲ್ಲ. ನೀನು ಸ್ವಲ್ಪ ನನ್ನ ಕಡೆ ನೋಡು.

**ಬೈಸೋ:** ನಿನ್ನ ನೋಡಿದರ ನನಗ ಹೆದರ್ಕಿ ಬರ್ಲಾಕ ಹತ್ತೈತಿ.

**ಸಂತೀ:** ನಿನಗೇನ ಅವ ಮಾಟಾ ಮದ್ದು ಮಾಡಿಸ್ಯಾನ ಏನು ?

**ಬೈಸೋ:** ಅವ್ವ! ಹಿಂಗೆಲ್ಲ ಅನ್ನಬ್ಯಾಡ.

**ಸಂತೀ:** ಆ ದುಷ್ಕರ್ಮಿಯನ್ನು ಬಿಡೋದಿಲ್ಲೇನು ?

**ಬೈಸೋ:** ಎಂಥ ದುಷ್ಕರ್ಮಿ ?

**ಸಂತೀ:** ನಿನಗ ಗೊತ್ತೈತೇನು, ಇಡೀ ಊರಾಗ ಏನು ಸುದ್ದಿ ಹಬ್ಬೇದ ಅಂಬೋದು ?

**ಬೈಸೋ:** ಬೂದಿ.

**ಸಂತೀ:** ಹೀಗಾಂದರ ನೀನು ಬೂದೀನ ಹಾರಸ್ತೀದಿ. ನಿನ್ನ ಬುದ್ಧಿಗರ ಏನಾಗೇತಿ ?

**ಬೈಸೋ:** ಏನೂ ಆಗಿಲ್ಲ.

**ಸಂತೀ:** ನಾ ಹೇಳಿದ್ದು ನೀನ್ಯಾಕ ಕೇಳವಲ್ಲಿ ?

**ಬೈಸೋ:** ನನ್ನ ಮಾತ ನೀನ್ಯಾಕ ಕೇಳವಲ್ಲಿ ?

**ಸಂತೀ:** ನನ್ನ ಎದೆ ಹಾಲು ವೈರಿಯಾದರ ನಾನರ ಏನಮಾಡ್ಲಿ! ನಮ್ಮೆಲ್ಲರ ಮರ್ಯಾದಿನ ಅಂಗಳ್ದಾಗ ಆರಿಹಾಕ್ತಿ. ತಾಯಿ-ಮಗಳಲ್ಲಿ ನೂರು ರಹಸ್ಯ ಇರ್ತಾವ. ತಾಯಿ ತನ್ನ ಮಗಳ ಎಲ್ಲ ವಿಚಾರಾನೂ, ತಿಳಕೊಂಡಿರ್ತಾಳ-ಅವಳ ರಹಸ್ಯ, ಅವಳ ಲಜ್ಜೆ, ನಾಚಿಕೆ, ಅವಳ ನೋವು. ನೀನು ಎಲ್ಲವನ್ನೂ ಹೇಳಿತ್ತಿದ್ದೆ, ಆದರೆ ಸರಬಣನ ವಿಷಯದಲ್ಲಿ ಮಾತ್ರ ಏನೊಂದೂ ಹೇಳ್ಲಿಲ್ಲ.

**ಬೈಸೋ:** ನಾನು ಇದನ್ನ ಯಾರಿಗೂ ಹೇಳಲಾರದವಳಾಗಿದ್ದೆ. ಇದು ನನ್ನ ಅಂತರಾಳದ ರಹಸ್ಯವಾಗಿತ್ತು. ನಿನ್ನ ಈ ರಹಸ್ಯದ ಭಾಗಿದಾರಳನ್ನಾಗಿ ಮಾಡಲು ನನಗೆ ಸಾಧ್ಯವಾಗಲಿಲ್ಲ. ನಾನು ಅವನನ್ನು ಸಣ್ಣವಳಿದ್ದಾಗಿನಿಂದಲೂ ಬಲ್ಲೆ. ನಾವು ಒಮ್ಮೆ ಕೆರೆಯದಂಡೆಯಲ್ಲಿ ಆಡುತ್ತಿದ್ದೆವು. ನಾನು ಪಿಪ್ಪಲ ಗಿಡದ ಮೇಲೆ ಹೋಗಿ ಕುಳಿತುಕೊಂಡೆ. ಆಗ ನಾನು ಕುಳಿತ ಟೊಂಗೆ ಮುರಿದು ಬಿತ್ತು. ಅದರೊಂದಿಗೆ ನಾನೂ ನೀರಿಗೆ ಬಿದ್ದೆ. ಅವನು ಒಮ್ಮೆಲೇ ನೀರಲ್ಲಿ ಹಾರಿ, ನನ್ನನ್ನು ತನ್ನ ತೋಳಲ್ಲಿ ಹಿಡಿದುಕೊಂಡು ಈಸುತ್ತ ಹೊರಗೆ ಕರೆತಂದ. ಆಗ ನಾನು ಹನ್ನೆರಡು ವರ್ಷದವಳಿದ್ದೆ. ನಾನು ಅವನ ಕೈಯಲ್ಲಿಯ ಬಲ ನೋಡಿದೆ; ತೊಂದರೆಯಲ್ಲಿದ್ದವರನ್ನು ಉಳಿಸಬೇಕೆನ್ನುವ ಅವನ ಎದೆಯ ಮಿಡಿತ ಆಲಿಸಿದೆ. ಯಾರದೋ ಪ್ರಾಣ ಉಳಿಸುವುದಕ್ಕಾಗಿ ತನ್ನ ಪ್ರಾಣವನ್ನು ಬಲಿಕೊಡುವಂಥ ಧೈರ್ಯ, ಶೌರ್ಯ ನೋಡಿದೆ.

ಇದಕ್ಕಿಂತ ಹೆಚ್ಚಿನದೇನೂ ಗೊತ್ತಿರಲಿಲ್ಲ. ನಾನು ಮಟ ಮಟ ಮಧ್ಯಾಹ್ನ ಕೆರಿಗೆ ಒಗಿಲಾಕ ಹೋಗ್ತೀನಿ, ಆದರ ನೀನು ಒಂದಿನ ನನಗ ಸಿಟ್ಟಮಾಡ್ತಿ. ಆಗ ನನ್ನೆದೆಯಲ್ಲಿ ತೆರೆಗಳ ಅಬ್ಬರ ಏಳತೊಡಗಿತು. ನಾನು ಸರಬಣನನ್ನು ಕಾಣಲು ಚಡಪಡಿಸತೊಡಗಿದೆ. ಒಂದಿನ ಕೊಟಗ್ಯಾಗ ಹಾಲು ಹಿಂಡಾಕ ಹತ್ತಿದಾಗ, ಸರಬಣ ಕೊಟಗಿ ಗೋಡಿ ಹಾರಿ ಒಳಗ ಬಂದ. ಸರಿ, ಈ ಸುದ್ದಿ ಇಡೀ ಊರತುಂಬ ಹಬ್ಬಿತು. ನೀನು ನನ್ನ ಮೇಲೆ ಸದಾ ಕಣ್ಣಿಟ್ಟಿ. ಅಪ್ಪ, ಕ್ರೂರ ಚೌಕೀದಾರನ ಹಾಂಗ ಕಾಯಾಕ ಹತ್ತಿದ.

**ಸಂತೀ:** ನಾನು, ನಿನ್ನ ಕುಕರ್ಮವನ್ನು ಹೊಟ್ಟ್ಯಾಗ ಇಟಗೊಂಡು ತಿರಗ್ತೀನಿ.

**ಬೈಸೋ:** ಎಂಥ ಕುಕರ್ಮ ?

**ಸಂತೀ:** ನಿನಗಾಗಿ ನಿನ್ನ ತಂದೆಯು ಸಿಟ್ಟನ್ನು ಸಹಿಸುತ್ತಿರುವೆ. ನಿನ್ನಮ್ಯಾಲ ಅವ ಸಿಟ್ಟ ಆದಾಗ ನಿಜವಾಗಿನೂ ಅವ ನನ್ನ ಮೇಲಿನ ಸಿಟ್ಟ ತೀರಿಸಿಕೊಳ್ತಾ ಇರ್ತಾನ-ಅಂತ ಅನಸ್ತದ.

**ಬೈಸೋ:** ನಿನ್ನ ಕುಕರ್ಮದ ದೋಷ ನನಗೆ ಕೊಡಬ್ಯಾಡ. ತಂದೇದು ನಿನ್ನೊಂದಿಗೆ ಬಹಳ ಹಳೆ ಜಗಳ ಅದ. ಹಳೆ ಘಾಯ. ಅವ ನಿನ್ನ ಎಂದೂ ಕ್ಷಮಿಸಿಲ್ಲ ಹಾಗೂ ಕ್ಷಮಿಸುವದೂ ಇಲ್ಲ. ನೀವಿಬ್ಬರೂ ಈ ಮನೆಯ ಮಾನ-ಮರ್ಯಾದೆಯ ಬಗ್ಗೆ ಬೂಟಾಟಿಕೆ ನಡಿಸೀರಿ. ಬರೀ ತೋರ್ಕಿ ! ಬರೀ ಸುಳ್ಳು !

**ಸಂತೀ:** ನೀನು ಅನ್ನೋದರ ಏನು ?

**ಬೈಸೋ:** ನಾನೇನು ಕಣ್ಣು ಕಟ್ಟಿಕೊಂಡಿಲ್ಲ. ನಿನ್ನ ಕಾಣಾಕೂ ಅವ ಬರ್ತಾನಲ್ಲ.

**ಸಂತೀ:** ಯಾರು ?

**ಬೈಸೋ:** ನಿನ್ನೀನೂ ಬಂದಿದ್ದ, ಬೆಂಕಿ ನೆಪಮಾಡಿಕೊಂಡು.

**ಸಂತೀ:** ನನ್ನದು ಅವನೊಂದಿಗೆ ಯಾವ ಸಂಬಂಧಾನೂ ಇಲ್ಲ.

**ಬೈಸೋ:** ನೀನು ಇದನ್ನ ಹೇಳ್ತಿ. ಆದರ ಅವ, ಈ ಮನೆಯ ಎಲ್ಲ ವಸ್ತುವಿನೊಂದಿಗೂ ಸಂಬಂಧವಿರಿಸಿಕೊಂಡಿದ್ದಾನೆ, ನಿನ್ನ ಜೊತೆಯ ಸಂಬಂಧ ಶಾಶ್ವತವಾಗಿರಲಿ, ಎಂದು.

**ಸಂತೀ:** ಎಚ್ಚರಿದಿಂದ ಮಾತಾಡು.

**ಬೈಸೋ:** ಊರಿನ ಹಜಾಮರ ಮುದುಕಿ ನನ್ನ ತಲಿಬಾಚ್ತಿದ್ದಾಗ ಮೆಲ್ಲಕ ನನ್ನ ಕಿವಿಯಾಗ ನಿನ್ನ ರಹಸ್ಯವನ್ನೆಲ್ಲ ಬಯಲಿಗಿಟ್ಟು, ಇಲ್ಲಿ ಬೆಂಕಿ ನೆಪಮಾಡಿಕೊಂಡು ಬರುವಾತನ ಬಗ್ಗೆಯೂ ಹೇಳಿದ್ಲು. ಬಹಳ ಕಾಲದಿಂದ ಅವ ನಿನಗಾಗಿ ಯಾತನೆ ಪಡ್ತಾ ಇದ್ದಾನ. ಒಂದು ರಾತ್ರಿ ಅಪ್ಪ ನಿನ್ನ ಕೂಡ ಜಗಳಾಡ್ತಿದ್ದ ಹಾಗೂ ನಿನ್ನ ಹೊಡಿಯಾಕ ಸುತ್ಗಿ ತಗೊಂಡ. ಆಗ ನೀನು ಅವನ ಕಾಲ ಮ್ಯಾಲ ಬಿದ್ದು ಅಳಾಕ ಹತ್ತಿದಿ. ಆಗ ನಾನು ಐದು ವರ್ಷದವಳಿದ್ದೆ. ಅಂಗಳದಲ್ಲಿ ಮಲಗಿಕೊಂಡೇ ಎಲ್ಲ ಮಾತೂ ಕೇಳಿದೆ. ಕತ್ತಲದಲ್ಲಿ ಇಂಥ ಜಗಳ ಬಹಳ ಸಲ

ನೋಡಿದೆ. ಮೆಲಮೆಲ್ಲಕ ನೀನು ಹಳೆಯ ಭಾವನೆಗಳನ್ನು ಒತ್ತಿ. ಸಮಾಜದ ಬಂಧನ, ಮರ್ಯಾದೆಗಳಿಗೆ ಹೆದರಿ ನಡಿಲಾಕ ಹತ್ತಿದಿ. ಹಾಗಿದ್ದರೂ ಈ ಮನುಷ್ಯ ಈಗಲೂ ನಿನ್ನ ಸುಪ್ತಮನದಲ್ಲಿ ನೆಲಸಿದ್ದಾನೆ.

**ಸಂತೀ:** ಬೈಸೋ! ನೀನು ನನ್ನೊಂದಿಗೆ ಯಾವುದರ ಸೇಡು ತೀರಿಸಿಕೊಳ್ಳುತ್ತಿರುವೆ ?

**ಬೈಸೋ:** ನನಗ ಜನ್ಮ ನೀಡಿ ನೀನು ಸೇಡು ತೀರಿಸಿಕೊಂಡೆ.

**ಸಂತೀ:** ನೀನು ಜನರ ಕಣ್ಣಲ್ಲಿ ಒತ್ತತಾ ಇದ್ದಿ. ನೀನು ಕೇವಲ ಈ ಮನೆಯ ಮಗಳಷ್ಟೇ ಅಲ್ಲ, ಇಡೀ ಊರಿನ ಮಗಳು. ನೀನು ಊರಿನ ಮರ್ಯಾದೆ ಕಳೆದರೆ ನಿನ್ನ ಯಾರೂ ಕ್ಷಮಿಸುವುದಿಲ್ಲ.

**ಬೈಸೋ:** ಊರಿನ ಮರ್ಯಾದೆಯಂತೂ ದಿನವೂ ಲೂಟಿಯಾಗುತ್ತದೆ. ಪ್ರತಿಕ್ಷಣ, ಪ್ರತಿಗಂಟೆ ಈ ಮರ್ಯಾದೆ ಬೂಟಾಟಿಕೆ ಹಾಗೂ ಸುಳ್ಳಿನ ಮೇಲೆ ನಿಂತಿದೆ. ಇಲ್ಲಿಯ ಪ್ರತಿಯೊಬ್ಬ ಹೆಂಗಸಿನ ಎದೆಯಲ್ಲಿ ಬೆಂಕಿ ಧಗಧಗಿಸುತ್ತಲಿದೆ, ಈ ಬೆಂಕಿಯಲ್ಲಿ ಅವಳು ಸುಟ್ಟು ಬೂದಿಯಾಗಿ ಬಿದ್ದಿದ್ದಾಳೆ. ನೀನು ಕೂಡ.....

**ಸಂತೀ:** ಊರಿನ ಮರ್ಯಾದೆ ತೆಗೆಯುವುದಕ್ಕಿಂತ ನಾನು ವಿಷ ಕುಡಿಯುತ್ತಿದ್ದೆ.

**ಬೈಸೋ:** ಎಲ್ಲರಿಗೂ ಗೊತ್ತದ ಊರಿನ ಮರ್ಯಾದೆ ವಿಷಯ. ಮುದುಕಿಯರಿಗೆ, ತರುಣಿಯರಿಗೆ, ಸಣ್ಣಸಣ್ಣ ಹುಡುಗಿಯರಿಗೂ ಕೂಡ ಹುಟ್ಟುತ್ತಲೇ ಗೊತ್ತಾಗತೈತಿ ಕತ್ತಲದಾಗ ಏನು ನಡೆದಿದೆ ಎಂಬುದು. ಎಲ್ಲರೂ ನೋಡುತ್ತಾರೆ, ಆದರೆ ಒಪ್ಪುವುದಿಲ್ಲ. ಎಲ್ಲರಲ್ಲೂ ಗುಪ್ತ ತಿಳುವಳಿಕೆ ಇದೆ, ಒಂದು ಗುಪ್ತ ಭೇದವನ್ನು ಮುಚ್ಚಿಡುವ ಷಡ್ಯಂತ್ರ. ನಿನಗ ಇದರ ಅಭಿಷಾಪವಿದೆ. ಆದರ ನಾನು ಈ ಹೊರೆಯನ್ನು ಹೊರಲಾರೆ.

**ಸಂತೀ:** ಮನೆ ಮರ್ಯಾದಿನ ಓಣ್ಯಾಗ ಕಳಿಬ್ಯಾಡ. ಯಾವಳಾದರೂ ಸೊಸಿಯ ಅವಮರ್ಯಾದೆಯನ್ನು ಊರು ಸಹಿಸಿಕೊಳ್ತದ ಆದರ ಮಗಳ್ದು ಸಹಿಸಿಕೊಳ್ಳೋದಿಲ್ಲ. ಸೊಸಿ ಪರಊರಿನವಳಾಗ್ತಾಳ, ಬೇರೆಯವರ ರಕ್ತ-ಆದರ ಮಗಳು..... ತಮ್ಮರಕ್ತ.....

**ಬೈಸೋ:** ನನಗ ಏನೂ ತಿಳಿತಾಯಿಲ್ಲ. ನಿರುಪಾಯಳಾಗಿದ್ದೀನಿ. ನನ್ನ ಮನದಲ್ಲಿ ಕೋಲಾಹಲ ನಡದದ. ನಾನು ಎಲ್ಲಿ ಉಸಿರಾಡಿಸಲಿ ? ಎಲ್ಲಿ ಹೋಗಿ ಕಣ್ಣೀರು ಹಾಕಲಿ ? ಎಲ್ಲಿ ಹೋಗಿ ನನ್ನ ಯಾತನೆಯ ಗಂಟ್ಲ ಬಿಚಕಲಿ ?

**ಸಂತೀ:** ಈ ದುಃಖ, ಈ ಯಾತನೆ ಹೆಣ್ಣಿನ ಜನಮದೊಂದಿಗೆ ಹುಟ್ತದ-ಅವಳ ಭಾಗ್ಯ, ಅವಳ ದೈವ.

**ಬೈಸೋ:** ನನ್ನ ಉಸಿರು ಕಟ್ತದ-ಕಣ್ಣೆದುರಿಗೆ ಕಗ್ಗತ್ಲು-ಯಾರೋ ನನ್ನ ಕರಳಾಗ ಕತ್ತರಿ ಆಡಸಾಕ ಹತ್ಯಾರ. ಏನೊಂದೂ ತೋಚವಲ್ದು. ನಿನಗ ಏನೇನ

ಕೆಟ್ಟಕೆಟ್ಟ ಮಾತನಾಡ್ತೆ. ಆಗ ನನಗ ಎಷ್ಟೂ ಎಚ್ಚರಾನ ಇರ್ಲಿಕ್ಕಿಲ್ಲ. ನಾನು ಮತ್ತ ಅವನ್ನ ಭೆಟ್ಟಿಯಾಗೋದಿಲ್ಲ; ಅವ್ವ... ಅವನ್ನ ಭೆಟ್ಟಿಯಾಗೋದಿಲ್ಲ.

**ಸಂತೀ:** ನನಗ ನಿನ್ನ ಮ್ಯಾಲ ಭರೋಸಾ ಅದ, ಮಗಳ.

**ಬೈಸೋ:** ಅವನ್ನ ಮತ್ತ ಭೆಟ್ಟಿಯಾಗೋದಿಲ್ಲ... ಭೆಟ್ಟಿಯಾಗೋದಿಲ್ಲ.... ಎಂದೂ ಭೆಟ್ಟಿಯಾಗೋದಿಲ್ಲ.... (ಬಿಕ್ಕಿ ಬಿಕ್ಕಿ ಅಳುತ್ತಾಳೆ.)

**ಸಂತೀ:** ನನ್ನ ಮುದ್ದುಮಗಳೇ.... ಕಣ್ಣೀರು ಒರೆಸಿಕೋ.... ನನ್ನ ಕೂಸ, ನನ್ನೆದೆಯ ಮುಗಳ, ಅಳಬೇಡ.... (ಅವಳನ್ನ ಅಪ್ಪಿಕೊಳ್ಳುತ್ತಾಳೆ.)

(ಮಗ್ಗಲ ಮನಿಯಾಕೆ ಬರುತ್ತಾಳೆ.)

**ಮಗ್ಗಲಮನೆಯಾಕೆ:** ಕಾಕೂ ಎಲ್ಲಿ ?

**ಸಂತೀ:** ಯಾಕ ?

**ಮಗ್ಗಲಮನೆಯಾಕೆ:** ಕೊಟಗ್ಯಾಗ ನಿಮ್ಮ ಆಕಳ ಒದ್ದಾಡಾಕ ಹತ್ತೈತಿ. ಏನಾರ ತಿಂದಿರಬೇಕು ಅನಸ್ತದ. ಹುಳ-ಹುಪ್ಪಡಿ ತಿಂದಿದ್ದರೂ ತಿಂದಿರಬೇಕು, ಹುಲ್ಲಿನ ಜೊತೆಗೆ. ಪಶುವೈದ್ಯರನ್ನು ಕರೆದುಕೊಂಡು ಬಾ.

**ಸಂತೀ:** ಬೈಸೋಳ ತಂದೆ ಅತ್ತಕಡೇನ ಹೋಗ್ಯಾನ. ಆದರ ಇನ್ನೂವರೆಗೂ ಬಂದಿಲ್ಲ. ಬರ್ತಿರಬೇಕು. ಹೋಗಿ ನೋಡ್ತೀನಿ.

**ಮಗ್ಗಲಮನೆಯಾಕೆ:** ಅಜಿವಾನ ಹಾಗೂ ವನಸ್ಪತಿ ತಗೊಂಡು ಹೋಗು, ಸಂಗಡ ಉಪ್ಪಿನ ಹಳ್ಳೂ ಒಯ್ಯಿ.

(ಸಂತೀ ತೀವ್ರ ಹೋಗುತ್ತಾಳೆ ಮತ್ತು ಅವಳ ಹಿಂದೆ ಮಗ್ಗಲ ಮನೆಯಾಕೆ ಕೂಡ. ಬೈಸೋ ಕಿಟಕಿ ಹತ್ತಿರ ನಿಂತು ದೂರ ಕತ್ತಲಲ್ಲಿ ನೋಡುತ್ತಿದ್ದಾಳೆ. ಬಚನೀ ಬರುತ್ತಾಳೆ.)

**ಬಚನೀ:** ಮನ್ಯಾಗ ಯಾರ ಅದೀರಿ ? ಅಂಗಳಂತೂ ಖಾಲಿ ಅದ. ಕುಲುಮೆ ಉರಿತಾ ಇದೆ. ಸಂತೀ.... ಎಲ್ಲಿಗರ ಹೋದ್ಲು ? ನಾನು ಚೌಕೀದಾರನೊಂದಿಗೆ ಹೇಳಿ ಕಳಿಸಿದ್ದೆ.... ಅಲ್ಲಿ ಕಿಟಕಿ ಹತ್ತಿರ ನಿಂತಾಳಲ್ಲ.... ಸಂತೀ.

**ಬೈಸೋ:** (ಹೊರಳಿ) ಯಾರದು ?

**ಬಚನೀ:** ನಾನು, ನಿನ್ನ ತಾಯಿ ಗೆಳತಿ-ನಿನ್ನ ಚಿಕ್ಕಮ್ಮ. ಎಲ್ಲಿ ಹೋಗ್ಯಾಳ ಸಂತೀ ?

**ಬೈಸೋ:** ದನದ ಕೊಟಗ್ಯಾಗ ಹೋಗ್ಯಾಳ. ನಮ್ಮ ಆಕಳ ಯಾಕ ಒದ್ದಾಡಾಕ ಹತ್ತಿತ್ತು. ಅಡವಿಗೆ ಹೋದಾಗ ಏನಾರ ತಿಂದಿರಬೇಕು. ಅದನ್ನ ನೋಡಾಕ ಹೋಗ್ಯಾಳ.

**ಬಚನೀ:** ಏದು ವರ್ಷದ ಮೊದಲು ನಿಮ್ಮ ಮನಿಗೆ ಬಂದಿದ್ದೆ. ಏನು ಮರ್ತ ಬಿಟ್ಟೇನ ಚಿಕ್ಕಮ್ಮನ್ನ ?

ಬೈಹೋ: ಹಾಂ! ಹೌದು! ಒಂದಿನ ಸಲ ಬಂದಾಗ ನನಗ ಬಾರಿಹಣ್ಣು ತಂದಿದ್ದಿ.

ಬಚನೀ: ಈಗಲೂ ತಂದೀನಿ. ನೀನು ಈಗಲೂ ಅಷ್ಟ ದೊಡ್ಡಕಿ ಅದಿ ಅಂತ ಮಾಡಿದ್ದ. ದಿನ ಕಳೆಯುವುದರಲ್ಲಿ ತಡಾsನ ಇಲ್ಲ. ಈಗಂತೂ ಸೌಭಾಗ್ಯದಿಂದ ವಯಸ್ಸಿಗೆ ಬಂದಿರುವಿ.

ಬೈಹೋ: ನೋಡು, ಅವ್ವ ಬಂದಬಿಟ್ಲು.

ಸಂತೀ: ನೀ ಬಂದಿ. ನನಗ ಬಹಳ ಅಂದ್ರ ಬಹಳ ಖುಷಿ ಆಗೇದ, ನನ್ನ ಭಾಗ್ಯನ ತೆರದಷ್ಟು. (ಅವಳನ್ನು ಅಪ್ಪಿಕೊಳ್ಳುತ್ತಾಳೆ.) ನಿನ್ನ ನೋಡಿ ಹೊಟ್ಟಿ ತುಂಬಿತು. ನೀನು ಮೊದಲು ಹ್ಯಾಂಗಿದ್ದಿ ಹಂಗ ಅದಿ, ಏನೂ ಬದಲಾವಣೆ ಇಲ್ಲ. ಯೌವ್ವನ, ಹಾಗೂ ಮುಗುಳ್ನಗಿ..... ಎಲ್ಲವೂ ಮೊದಲಿನಂತೆಯೇ-ಬಾ ಕುಂದ್ರು ಇಲ್ಲಿ. ನೀನು ಹೇಳಿ ಕಳಿಸಿದಾಗಲೇ ಓಗ್ಗಿ ಓರಿಕಾಯಿ ಆಗಿದ್ದೆ. ಇಷ್ಟುಹೊತ್ತು ಮನ್ಯಾಗ ಇದ್ದೆ. ಈಗ ನಮ್ಮ ಆಕಳ ಒದ್ದಾಡಾಕ ಹತ್ತಿತ್ತು. ನೋಡಾಕ ಹೋಗಿದ್ದೆ, ಏನಾರ ಹುಳ-ಹುಪ್ಪಡಿ ತಿಂತೇನೋ ಅಂತ. ಆದರ ಅದು ಗಬ್ಬಾಗೇದ ಅಂತಾ ತಿಳೀತು. ದೇವರ ದಯೆ.

ಬಚನೀ: ನನಗ ಗಿಣ್ಣಾ ಕಳಿಸ್ತಿಯಲ್ಲ?

ಸಂತೀ: ನಿನಗ ಕಳಸಿಲ್ಲ ಇನ್ನಾರಿಗೆ ಕಳಿಸ್ಲಿ? ಯಾವಾಗ ಬಂದಿ?

ಬಚನೀ: ನಿನ್ನೆ ಸಾಯಂಕಾಲ. ನನ್ನ ಮನೆಯವರಿಗೆ ಅಕಸ್ಮಾತ್ತಾಗಿ ಇಲ್ಲಿಗೆ ವರ್ಗ ಆತು. ಮೊದಲಿನ ಜಿಲ್ಲೆದಾರನನ್ನು ತೆಗೆಯಲಾಯಿತು. ಅವನು ಲಂಚಖೋರನಾಗಿದ್ದ.

ಸಂತೀ: ನೀನು ಇಲ್ಲಿಗೆ ಬಂದದ್ದು ಬಹಳ ಒಳ್ಳೆಯದಾಯ್ತು, ಬಚನೀ.

ಬಚನೀ: ಬಾರೀಹಣ್ಣು ತಗೊಂಡು ಬಂದೀನಿ, ಬೈಣೂಗ ಮತ್ತು ದೀಪಾಗ.

ಸಂತೀ: ಏ ಬೈಹೋ! ಏನ ಮಾಡ್ತಿದ್ದಿ? ಎಲ್ಲಿ ಹೋದಿ? ನಿನ್ನ ಚಿಗವ್ವನೊಂದಿಗೆ ಮಾತಾಡು ಬಾ. ತಗೊಳ್ಳಿ. ನೀನು ದೀಪಾ ಕೂಡಿ ಹಂಚಿಕೊಂಡು ತಿನ್ರಿ.

(ಬೈಹೋ ಮೇಲು ಹೊದಿಕೆಯ ಚುಂಗಿನಲ್ಲಿ ಹಾಕಿಸಿಕೊಂಡು ಒಳಗೆ ಹೋಗುತ್ತಾಳೆ.)

ಬಚನೀ: ನಾನು ಬಂದಾಗ, ಬೈಹೋ ಕಿಟಕಿಯ ಹತ್ತಿರ ನಿಂತಿದ್ಲು. ನನಗ, ನೀನ ನಿಂತಿ ಅಂತಾ ಅನಿಸ್ತು. ಅದೇ ಎತ್ತರ, ಅದೇ ರೂಪ, ಅದೇ ರೀತಿ, ಅದೇ ಧ್ವನಿ-ಎಲ್ಲ ನಿನ್ನ ಹಂಗs.

ಸಂತೀ: ಈಗ ಅವಳು ದೊಡ್ಡವಳಾಗ್ಯಾಳ.

ಬಚನೀ: ಥೇಟ ನಿನ್ನ ಹಂಗ, ಹದಿನೇಳು ವರ್ಷದವಳಿದ್ದಾಗ ನೀನೂ ಹಿಂಗs ಇದ್ದಿ.

ಸಂತೀ: ನೀನ ಅನ್ನೋದು ಸರಿ ಅದ, ಬಚನೀ ನಿನ್ನೆ ನಾ ಹೊಸ ಕೆರವು ತಂದೆ. ಬೈಹೋ ಮೆಟ್ಟಿಕೊಂಡ್ಲು. ಅವಳಿಗೇ ಮಾಡಿಸಿದ ಹಾಗೆ ಬರೋಬರಿ ಆದವು. ಈಗ ನನ್ನ, ಅವಳ ಅಳತಿ ಒಂದs.

ಬಚನೀ: ಅವಳನ್ನ ನೋಡಿ, ನನಗಂತೂ ನೀನು, ನಾನು ಕೂಡಿ ಕೆರಿಗೆ ಅರಿವಿ ಒಗೀಲಾಕ ಹೋಗ್ತಿದ್ದ ಸಮಯ ನೆಪ್ಪಾತು. ಆಗ ಕೆರಿನೀರಾಗ ಕಾಲ ಬಿಟ್ಟುಕೊಂಡು ಕೂಡುತಿದ್ದಿವಿ ಮತ್ತ ಹಿಂಬಡ ತಿಕ್ಕೊಳ್ತಿದ್ದಿವಿ.

ಸಂತೀ: ಆಗ ಕೆರಿ ನೀರು ಸ್ವಚ್ಛ ಇರ್ತಿದ್ದವು. ಆದ್ರ ಈಗ ಬಹಳ ಹೊಲಸ ಆಗೇವ. ಈಗಿನ ಹುಡುಗಿಯರೂ ಹೀಂಗ ಆಗೇರ ಅಂತಾ ಅನಸ್ತದ. ನಿನ್ನೆ ಮೊನ್ನೆ ಬೈಣೋ ತನ್ನ ಅಪ್ಪನೊಂದಿಗೆ ಬಾಯಿಗೆ ಬಾಯಿ ಹತ್ತಿದ್ಲು. ಅಷ್ಟು ಅಲ್ಲ ಅವನಿಗೇ ಇದರ ನಿಂತ್ಲು.

ಬಚನೀ: ಯಾಕ ?

ಸಂತೀ: ಏನ ಹೇಳ್ಲಿ ಮಾರಾತಿ. ಅವಳು ಕದ್ದು-ಮುಚ್ಚಿ ಸುಬೇದಾರನ ಮಗನ ಕಾಣತಿದ್ಲು. ನನಗ ಸಂಶಯ ಸುರು ಆಗಿತ್ತು. ಏನಾರ ಮಾಡಿಕೊಂಡ ಕುಂತ್ರ ಹ್ಯಾಂಗಂತ ನನಗ ಚಿಂತಾಗಿತ್ತು.

ಬಚನೀ: ಆಗಿನ ನಿನ್ನ ದಿನಗಳನ್ನು ಮರ್ತಬಿಟ್ಟೇನು! ಕೆರಿದಂಡಿ ಮ್ಯಾಲ ಗಜ್ಜಣನ ಸಂಗಡ ಮಾತಾಡ್ತಾ ನಿಲ್ತಿದ್ದಿಲ್ಲ. ನಿನ್ನ ಜತಿಗೆ ನಾನೂ ಬರ್ತಿದ್ದೆ.

ಸಂತೀ: ವಯಸ್ಸಿನ ಮಸ್ತಿ ಅದು. ಮೂರ್ಖತನನೂ ಹೌದು. ಆದ್ರ ಮದುವಿ ಆದಮ್ಯಾಲ ಮತ್ತ ಅಂಥದನ್ನ ಮಾಡಿಲ್ಲ. ಆ ಮಾತು ಅಲ್ಲಿಗೇ ಮುಗದು ಹೋಯ್ತು.

ಬಚನೀ: ಈಗಲೂ ಅವನ್ನ ಭೆಟ್ಟಿಯಾಗ್ತಿ ?

ಸಂತೀ: ನಾನಾಗಲಿ ಇಲ್ಲ. ಅವನ ಯಾವದಾರ ಕೆಲಸಕ್ಕಂತ ಯಾವಾಗರ ಬರ್ತಾನ. ಆದ್ರ ಅವನ ಬಗ್ಗೆ ನಾ ಯಾವ ಕಾಳಜೀನೂ ಮಾಡೋದಿಲ್ಲ.

ಬಚನೀ: ಎಂದಾದರೂ ಕಾಕೂಗ ಇದರ ಬಗ್ಗೆ ಸಂಶಯ ಬಂದದೇನು ?

ಸಂತೀ: ಮೊದ-ಮೊದಲು ಅವನ ಮನಸ್ಸಿನ ಮ್ಯಾಲ ಒಂದು ನೆರಳಿನ್ಹಾಂಗ ಇತ್ತು. ಏನೋ ಅವಗ ನೋವು ಮಾಡ್ತಿತ್ತು ಅಂತಾ ಅನಸ್ತಿತ್ತು. ಒಂದು ರಾತ್ರಿ ಭಾರಿ ಜೋರ ಮಾಡಿದ. ಆಗ ನಾ ಇದೆಲ್ಲ ಸುಳ್ಳು ಅದ ಅಂತಾ ಹೇಳಿ ಅವನ ಕಾಲ ಹಿಡಕೊಂಡ ಅಳಾಕ ಹತ್ತಿದೆ. ಅವನ ಮನಸ್ಸು ಕರಗಿತು. ಆ ನಂತರ ಅವ ಆ ಮಾತು ಇಂದಿನವರೆಗೂ ಎತ್ತಿಲ್ಲ. ಈಗ ಗಜ್ಜಣ ಉಳಿದವರು ಬರುವ ಹಾಗೆ ಕುಲುಮೆ ಕೆಲಸಕ್ಕ ಯಾವಾಗಾದರೂ ಬರ್ತಿರ್ತಾನ. ಇದಕ್ಕಿಂತ ಹೆಚ್ಚಿಗೆ ಏನೂ ಇಲ್ಲ.

ಬಚನೀ: ಇದರ ನಡುವಿನ ವಿಷಯ ನಿನಗ ಗೊತ್ತು. ಮನುಷ್ಯ ತನಗ ತಾನು ಸತ್ಯವಂತನಾಗಿರಬೇಕು, ಅಂದ್ರ ಯಾರ್ದೂ ಹೆದರ್ಕಿ ಇರೋದಿಲ್ಲ.

ಸಂತೀ: ನನ್ನ ತವರುಮನೆಯಿಂದ ನೀನೊಬ್ಬಳ ನನ್ನ ಗೆಳತಿ ಅಂದ್ರ. ನಿನ್ನ ಜತಿಗೆ ಏನು ಮುಚ್ಚಿಡದ ಅದ ಹೇಳು. ನನ್ನ ಮನಸ್ಸಿನಲ್ಲಿ ನನ್ನ ಗಂಡನ ಹೊರತು ಇನ್ನಾರೂ ಇಲ್ಲ.

(ಬೈಣೋ ಮತ್ತು ದೀಪಾ ಗುದ್ದಾಡುತ್ತ ಒಳಗಿನಿಂದ ಬರುತ್ತಾರೆ.)

ಬೈಸೋ: ನಾನ್ಯಾಕ ಕೊಡ್ಲಿ ?
ದೀಪಾ: ಎಲ್ಲ ಬೇಕಾಗಿಲ್ಲ.
ಬೈಸೋ: ನಡೀ ಆಚೆ, ವ್ಯೆಮ್ಯಾಲ ಬರ್ತಾನ.
ದೀಪಾ: ನನ್ನ ಪಾಲಿಂದ ನನಗ ಕೊಡು.
ಸಂತೀ: ಅರೆ, ಯಾಕ ಹೊಡದಾಡ್ತೀರಿ ?
ದೀಪಾ: ನನಗ ಸ್ವಲ್ಪ ಕೊಟ್ಟಾಳ.
ಬೈಸೋ: ತನ್ನ ಪಾಲಿನವು ತಿಂದು ಈಗ ನನ್ನ ಪಾಲಿನ ಮೇಲೆ ಸಿಂಹ ಆಗಿ ಮ್ಯಾಲ ಬೀಳ್ತಾನ.
ಸಂತೀ: ಬೈಸೋ. ಸಣ್ಣವಳನ ನೀ ಇನ್ನೂ, ಬಾರಿಹಣ್ಣಿಗೆ ಗುದ್ಯಾಡ್ತಿ ?
ಬೈಸೋ: ತಗೋ..... ಎಲ್ಲ ತಗೊಂಡ ಹೋಗು, (ಅವಳು ಮೇಲು ಹೊದಿಕೆಯಲ್ಲಿದ್ದ ಎಲ್ಲ ಹಣ್ಣುಗಳನ್ನು ಸೂರೆ ಮಾಡುತ್ತಾಳೆ. ದೀಪಾ ಸೂರೆಯಾದ ಬಾರಿ ಹಣ್ಣುಗಳನ್ನು ಆರಿಸತೊಡಗುತ್ತಾನೆ.) ನನಗ ಯಾಕ ಸಿಟ್ಟು ಬಂತೋ ಏನೋ, ನನಗ ಗೊತ್ತಿಲ್ಲ.
ಬಚನೀ: ಈಗ ನಾ ನಡೀತೀನಿ, ಮತ್ತ ಯಾವಾಗರ ಬರ್ತೀನಿ.
ಸಂತೀ: ಬಂದsಬರಬೇಕು. (ಬಚನೀ ಹೋಗುತ್ತಾಳೆ)
ಒಲಿಮ್ಯಾಲ ಸಾರಿಗೆ ಇಟ್ಟು ಮರ್ತಬಿಟ್ಟೆ. ವಾಸ್ನಾಗ ಕುಂತೆ. ಎಲ್ಲಿ ಎಲ್ಲ ಸುಟ್ಟಹೋತೋ ಏನೋ. ಬೈಸೋ, ಹೋಗಿ ಸಾರಿನಾಗ ಸೌಟು ಆಡಿಸು, ಹಂಗ ಹಿಟ್ಟ ನಾದು. ನಿನ್ನ ಅಪ್ಪ ಬರೋ ಹೊತ್ತಾತು. ಇವತ್ತ ತನ್ನ ಗೆಳೆಯನ್ನರ್ನ ಊಟಕ್ಕ ಕರದಾನ.
(ಬೈಸೋ ಒಳಗೆ ಹೋಗುತ್ತಾಳೆ. ದೀಪಾ ಹಣ್ಣು ಆರಿಸಿಕೊಂಡು ಅವಳ ಹಿಂದೆ ಹೋಗುತ್ತಾನೆ. ಸಂತೀ ಬೈಸೋ ಹೋಗುವುದನ್ನು ನೋಡುತ್ತಾಳೆ, ಹಾಗೂ ಯೋಚನೆಯಲ್ಲಿ ಮಗ್ನಳಾಗುತ್ತಾಳೆ, ಆಗಲೇ ಗಜ್ಜಣ ಬಾಗಿಲದಲ್ಲಿ ಕಾಣಿಸಿಕೊಳ್ಳುತ್ತಾನೆ.)
ಯಾರು ?
ಗಜ್ಜಣ: ನಾನು... ಒಣ್ಯಾಗ ಹೊಂಟಿದ್ದೆ, ನಿನ್ನ ನೋಡ್ದೆ.
ಸಂತೀ: ಬೈಸೋನ ಅಪ್ಪ ಇದ್ದಾಗ ನೀ ಬಾ.
ಗಜ್ಜಣ: ಯಾಕ ಸಿಟ್ಟಾದಿ ?
ಸಂತೀ: ಆ ಎಲ್ಲ ಮಾತಿಗೆ ಎಷ್ಟು ವರ್ಷ ಕಳ್ದ ಹೋದವು, ನಿನಗ ಏನರ ಗೊತ್ತೈತೇನು ? ಇನ್ನೂವರೆಗೂ ಘಾಯ ಮಾಯವಾಗಿಲ್ಲ ?
ಗಜ್ಜಣ: ನಿನ್ನ, ಒಂಟಿಯಾಗಿದ್ದಾಗ ಬಹಳ ಕಡಿಮೆ ಭೆಟ್ಟಿಯಾಗೀನಿ.
ಸಂತೀ: ನನ್ನ ಮಗಳು ಒಳಗ ಕೆಲಸ ಮಾಡ್ತಿದ್ದಾಳ, ಮತ್ತ ನನ್ನ ಮನಿಯವ ಬರೋ ಹೊತ್ತಾಗೇದ.
ಗಜ್ಜಣ: ನಿನ್ನ ಯಾವಾಗಲೂ ಈ ಎರಡರ ನೆರಳಿನಲ್ಲಿಯೇ ಭೆಟ್ಟಿಯಾಗಿರುವೆ.
ಸಂತೀ: ನಿನಗ ಎಷ್ಟು ಸಲ ಹೇಳಿಲ್ಲ, ಬೇರೆ ಯಾವದರ ಊರಾಗ ಹೋಗಿ ಇರು-ಅಂತ.

ಗಜ್ಜಣ: ಜಾಟ, ಸಾಧು ಆದ್ರ ಊರ ಬಿಡ್ತಾನ ಅಥವಾ ಯಾವುದರ ಹೆಣ್ಣನ್ನ ಓಡಿಸಿಕೊಂಡು ಊರ ಬಿಡ್ತಾನ. ಒಂದ್ಸಲ ಇಂಥದ ಸಮಯ ಬಂದಿತ್ತು. ಸಂಜೆ ಆದ ಕೂಡಲೇ ನೀನು ಕೆರೆ ಹತ್ತಿರ ಬರ್ತೀನಿ ಅಂತಾ ಹೇಳಿದ್ದಿ, ನಿನಗ ನೆಪ್ಪ ಐತೇನ-ಆದ್ರ ಅಂದ ನೀ ಬರಲಿಲ್ಲ. ನಾ ಬಹಳ ಹಾದಿ ನೋಡ್ದೆ.

ಸಂತೀ: ಆ ಮಾತ ಈಗ ಎತ್ತಬ್ಯಾಡ. ಆಗ ನನ್ನ ನಿಶ್ಚಯ ಆಗಿತ್ತು. ನನ್ನ ಮದುವಿ ಆಗೋದರಲ್ಲಿತ್ತು. ಅಂಥ ಹೊತ್ತಿನಾಗ ನಿನ್ನ ಹತ್ತಿರ ಹ್ಯಾಂಗ ಬರ್ಲಿ ? ಇಂಥ ಕೆಲಸ ಕೆಟ್ಟ ಹೆಂಗಸು ಮಾಡ್ತಾಳ.

ಗಜ್ಜಣ: ಯಾವುದು ಕೆಟ್ಟದ್ದು ಅಂಬೋದು ನನಗ ಗೊತ್ತಿಲ್ಲ. ಆ ರಾತ್ರಿ ನಿನ್ನ ಹಾದಿ ಬಹಳಂದ್ರ ಬಹಳ ನೋಡ್ದೆ. ಆಕಾಶದಾಗ ಚುಕ್ಕಿ ಕರಗ್ತಾ ಇದ್ದವು, ಹೊಲದಲ್ಲಿಯ ಹಸಿರುಪೈರು ಗಾಳಿಯಲ್ಲಿ ಜೀಕ ಹೊಡೆಯುತ್ತಿತ್ತು, ಸುತ್ತಲೂ ನಿಶ್ಯಬ್ದತೆ ಕಾವಲಿತ್ತು... ಆದರೂ ಸಂತೀ, ನೀನಂದು ಬರಲಿಲ್ಲ....

ಸಂತೀ: ಗಂಡಸರ್ದೇನು, ಯಾವಾಗ ಬೇಕ ಆವಾಗ ಹೆಣ್ಣಿನ್ ಬಯಸ್ತಾರ, ಹುಡುಕ್ತಾರ. ಯಾವಳಾದರೂ ಕೆಟ್ಟ ಕರ್ಮಕ್ಕ ಬಲಿ ಆದವಳು ಮಾತ್ರ ಇಂಥ ಬಲಿಯಾಗ ಬೀಳ್ತಾಳ. ನನ್ನ ಜತೆ ಈ ವಿಷಯ ಮತ್ತ ಎತ್ತಬ್ಯಾಡ.

ಗಜ್ಜಣ: ನಾನು..... ಯಾವುದೋ ಕೆಲಸಕ್ಕ ಬಂದಿದ್ದೆ.

ಸಂತೀ: ಏನು ?

ಗಜ್ಜಣ: ಏನೋ ಕೇಳಾಕ ಅಂತಾ ಬಂದಿದ್ದೆ ನೀನು ನೆನಪು ಹಾರುವಂಗ ಮಾಡ್ದಿ.

ಸಂತೀ: ನನ್ನ ಮಗಳು ಈಗ ದೊಡ್ಡವಳಾಗ್ಯಾಳ, ನೋಡ್ತಿ ಇಲ್ಲ.... ಮತ್ತ.....

ಗಜ್ಜಣ: ನೋಡ್ತಾ ಇದ್ದೀನಿ ಮತ್ತ ನಿನ್ನ ಬಗ್ಗೆ ಯೋಚಿಸ್ತಾ ಇದ್ದೀನಿ. ಯಾವಾಗಲೂ ನಿನ್ನ ಬಗ್ಗೆಯೇ..... ಹಂಗ ಅಂತಾನ ಈವರೆಗೂ ಮದುವಿ ಆಗಲಿಲ್ಲ.....

ಸಂತೀ: ನನಗ ಇದರ ದೋಷ ಕೊಡುಬ್ಯಾಡ. ಈ ಮೊದಲು ತವರ ಮನಿಯಾಗ ನಿನ್ನ ಸಲುವಾಗಿ ಅಪಮಾನ ಸಹಿಸೀನಿ, ಈಗ ಮತ್ತ.... ಎಲ್ಲ ನಿನ್ನ ಕಾರಣದಿಂದ. ಈಗ ನನ್ನ ಮಗಳೂ, ನಿನ್ನ ಹೆಸರು ತಗೊಂಡು ನನ್ನ ಜತೆಗೆ ವಾದಕ್ಕಿಳಿತಾಳ. ಇನ್ನು ಮುಂದ ಇಲ್ಲಿಗೆ ನೀ ಬರಬ್ಯಾಡ.

ಗಜ್ಜಣ: ಕಳೆದು ಹೋದ ಆ ಕ್ಷಣಗಳನ್ನು ನೀ ಮರ್ತಿರಬಹುದು. ಆದ್ರ ನನಗ ಮಾತ್ರ ಮರಿಲಾಕ ಆಗಾಕಿಲ್ಲ.

ಸಂತೀ: ನಿನ್ನ ಜತಿಗೆ ನಗನಗ್ತಾ ಮಾತಾಡ್ತಿದ್ದೆ. ಅಷ್ಟಕ್ಕ ಬದ್ನಾಮ ಆದೆ. ಮಗಳು ಬೈಣೋಳ ಮದುವಿ ಆಗೋದಿದೆ, ಹಾಗೂ ದೀಪಾ ಕುಲುಮೆ ಕೆಲಸ ನೋಡಿಕೊಳ್ಳೋವಷ್ಟು ದೊಡ್ಡವ ಆಗ್ಯಾನ. ಈಗ ಆ ಹಳೆ ಕತೆ, ಮರ್ತಬಿಡು.

ಗಜ್ಜಣ: ನೀನು ಹೇಳೋದು ಸರಿಯೇ. ನಾನು ಇಲ್ಲಿ ಬರಬಾರ್ದು. ಈ ಕುಲುಮೆಯ ಬೆಂಕಿಯಲ್ಲಿ, ಇನ್ನ ಮೇಲೆ ಕಿಡಿ ಹುಡುಕಾಕ ಬರೋದಿಲ್ಲ. (ಹೊರಟು ಹೋಗುತ್ತಾನೆ. ಸಂತೀ ಕೆಲ ಕ್ಷಣ ಯೋಚನೆಯಲ್ಲಿ ಮಗ್ನಳಾಗ್ತಾ ದೂರದವರೆಗೂ ನೋಡುತ್ತಿರುತ್ತಾಳೆ.)

ಸಂತೀ: ಬೈಣೋ!

ಬೈಣೋ: (ಒಳಗಿನಿಂದ) ಹಾಂ, ಅವ್ವ.

ಸಂತೀ: ಇಲ್ಲಿ ಬಾ.

(ಬೈಣೋ ಬರುತ್ತಾಳೆ.)

ಇದೇನು ತಗೊಂಡು ತಿರಗ್ತಾ ಇದ್ದಿ?

ಬೈಣೋ: ನಿನ್ನೆ ಹಗ್ಗ ಹರಿದುಕೊಂಡಿತ್ತು, ಆಕಳು. ಅದನ್ನ ಸರಿ ಮಾಡ್ತಿದ್ದೆ.

ಸಂತೀ: ಎಲ್ಲಿ, ನೋಡ್ತೀನಿ.

ಬೈಣೋ: ತಗೋ, ಹುರಿಮಾಡಿ ಗಂಟು ಹಾಕೀನಿ. ಇದನ್ನೆಲ್ಲ ಮಾಡ್ದೆ, ಆದರ ಇದು ಎರಡು ದಿನರ ತಡೀತದೋ ಇಲ್ಲೋ.

ಸಂತೀ: ಹಿಟ್ಟ ನಾದಿಕೊಂಡಿ?

ಬೈಣೋ: ಹಾಂ!

ಸಂತೀ: ಒಲಿ ಉರಿಯಾಕ ಹತ್ತೇನು?

ಬೈಣೋ: ಹಾಂ! ಹತ್ತಾಕ ಹತ್ತೈತಿ.

ಸಂತೀ: ಹಂಗಾರ ರೊಟ್ಟಿ ಮಾಡ್ತೀನಿ.

(ಕಾಕೂ ಬರ್ತಾನ, ಬೈಣೋ ಒಳಗ ಹೋಗ್ತಾಳ)

ಕಾಕೂ: ಒಂದ ಹರಿಯಾಗ ಎದ್ದ ಹೋದಾವ ಈಗ ಬಹಳ ಕಷ್ಟದಿಂದ ಮನಿಗ ಬಂದ ಹತ್ತಿದೆ. ಎಷ್ಟೋ ಅಂಗಡಿಗಳನ್ನು ತಿರಿಗ್ದೆ. ಸಾಮಾನುಗಳ ಬೆಲಿ ದಿನ ದಿನಕ ಏರ್ಲಾಕ ಹತ್ತೈತಿ. ಈಗಲೇ ಬೈಣೋಗ ಕೊಡೋ ಸಾಮಾನು ಖರೀದಿ ಮಾಡಬೇಕು ಅಂತಾ ಯೋಚಿಸ್ದೆ. ಆ ಮ್ಯಾಲ ಸಿಂಪಿಗ ಹಾಗೂ ಅಕ್ಕಸಾಲಿಗರಿಗೂ ಪುರಸತ್ತ ಸಿಗೋದಿಲ್ಲ.

ಸಂತೀ: ನೀನ ಹೋದಮ್ಯಾಲ ಬೈಣೂಗ ಬಹಳ ಬೈದೆ, ಸಿಟ್ಟಮಾಡ್ದೆ. ಗಂಟೆಗಟ್ಲೆ ತಿಳಿಸಿ ಹೇಳ್ದೆ. ಆಕಿ ಬಹಳ ಅತ್ಲು, ಆಮ್ಯಾಲ ಅವನ್ನ ನಾನು ಇನ್ನೆಂದೂ ಭೆಟ್ಟಿಯಾಗೋದಿಲ್ಲ ಅಂತಾ ಹೇಳಿದ್ಲು. ಈಗ ನೀನು ಆಕೀಗ ಏನೂ ಅನ್ನಬ್ಯಾಡ, ಈಗ ಆಕಿ ಎಲ್ಲ ಸರಿಹೋಗ್ಯಾಳ.

ಕಾಕೂ: ಇಂಥ ಮುಗ್ಧ ಹುಡುಗೀಗ ನಾನೇನು ಅನ್ಲಿ!

ಸಂತೀ: ಮದುವಿಯಾದ ಮ್ಯಾಲ ತಾನs ಬುದ್ಧಿ ಬರತೈತಿ.

ಕಾಕೂ: ಕೋಳಿಗೆ ಕಾಳು ಹಾಕ್ದೇನು?

ಸಂತೀ: ಅವು ತಿಂದಾ ಇರ್ತಾವೇನ? ಹಾಕಲಿಲ್ಲ ಅಂದ್ರ ಒದರಾಕ ಹತ್ತಾವ. ಅಂಗಳ ಕಸ ಹೊಡಿತಿದ್ದೆ, ಆ ಹುಂಜ ಚೊಂಚಿಲೆ ಹೊಡಿತು, ಅತ್ಲಾಗ

ಸರಸಾಕ ಹೋದ್ರ.

**ಕಾಕೂ:** ಅದರ ಬಗ್ಗೆ ಕಾಳಜಿ ಇರಲಿ, ಅಂದ್ರ ಅದು ಮಸ್ತ ಕಾದಾಡತ್ತೈತಿ. ಏನ ಅಡಿಗಿ ಮಾಡಿರಿ ?

**ಸಂತೀ:** ಭಾಜಿ, ಅವರಿಕಾಳ ಪಲ್ಲೆ ಹಾಗೂ ಗಡಿಗಿ ತುಂಬ ಬೆಣ್ಣೆ.

(ಚಮ್ಮಾರ ಹಾಗೂ ಕಟುಕ ಬರುತ್ತಾರೆ.)

**ಕಾಕೂ:** ಸರಿಯಾದ ಸಮಯಕ್ಕ ಬಂದ್ರಿ. ಒಳಗ ಬರ್‍ರಿ. ರೊಟ್ಟಿ ತಯಾರ ಆಗ್ಯಾವ. ಆದ್ರ ಮೊದಲ ಒಂದ ಜುರಿ ಹುಕ್ಕಾ ಸೇದೋಣ! ಹುಕ್ಕಾ ಸೇದಲ್ದ ಊಟ ರುಚಿ ಹತ್ತೋದಿಲ್ಲ.
(ಅವರು ಚಪ್ಪಲಿ ಬಿಟ್ಟು ಖರ್ಜೂರಿನ ಚಾಪಿ ಮೇಲೆ ಕೂಡುತ್ತಾರೆ, ಮತ್ತು ಹುಕ್ಕಾ ಸೇದುತ್ತಾರೆ.)

**ಚಮ್ಮಾರ:** (ಕೆಮ್ಮುತ್ತ) ಬಹಳ ಖಡಕ ಅದಾಪಾ ತಂಬಾಕ.

**ಕಾಕೂ:** ಒಂದ್ನೆ ನಂಬರ ತಂಬಾಕ ಅದು. ನಾನs ಬೆಲ್ಲದ ಪುಟಕೊಟ್ಟು ತಿಕ್ಕಿ ತಯ್ಯಾರ ಮಾಡೀನಿ.

**ಕಟುಕ:** ಒಂದ ಜುರ್ಕಿ ಹೊಡ್ದು ನೋಡತೀನಿ (ಖಲೂ....ಖಲೂ)-ವಾಹ್ವಾ, ಕಣ್ಣು ತೆರ್ದಬಿಟ್ಟವು. ಒಮ್ಮೆ ನಾನು ಇಂಗ್ಲಂಡದ ತಂಬಾಕ ಸೇದಿದ್ದೆ ಆದ್ರ ಇದು ಅದನ್ನ ಮೀರಸ್ತದ.

**ಚಮ್ಮಾರ:** ಇಂಗ್ಲಂಡ ತಂಬಾಕ, ತಂಬಾಕ ಅಲ್ಲ ಅದು, ಬರೀ ಕುದುರಿ ಲದ್ದಿ. ಮನಿ ತಂಬಾಕಿನೊಂದಿಗೆ ಅದಕ್ಕೇನು ಹೋಲಿಕೆ.

**ಕಾಕೂ:** ಏನು ಪೇಪರ ತಗೊಂಡು ತಿರಗಾಕ ಹತ್ತೀದಿ. ಅಂಥ ದೊಡ್ಡ ಸುದ್ದಿ ಏನೈತಿ ?

**ಚಮ್ಮಾರ:** ಎಲ್ಲಕ್ಕಿಂತ ಬಹಳ ದೊಡ್ಡ ಸುದ್ದಿ ಅಂದ್ರ (ಓದುತ್ತಾನೆ) ಇಂಗ್ಲಂಡದಲ್ಲಿ ಓರ್ವ ಹೆಣ್ಣುಮಗಳು ನಾಯಿಯ ಮದುವೆಗಾಗಿ ಎರಡು ಲಕ್ಷ ರೂಪಾಯಿ ಖರ್ಚು ಮಾಡಿದಳು.

**ಕಟುಕ:** ಎದರ ಸಲುವಾಗಿ ಎರಡು ಲಕ್ಷ? ನಾಯಿಗಳ್ನು ಯಾವ ಮೆರವಣಿಗೆ ಹೊಂಡಿಸಿದ್ಲು? ಯಾವುದರ ಸಿಂಗಾರಕ್ಕ ಈ ಖರ್ಚು ?

**ಚಮ್ಮಾರ:** ನೋಡ, ಓದು, ಇದರಾಗ ಪ್ರಿಂಟಾಗೇದ. ನಾಯಿದು ಹಾಗೂ ಈ ಹೆಂಗಸಿಂದು ಚಿತ್ರಾನೂ ಐತಿ ನೋಡು.

**ಕಟುಕ:** ಹಂಗಾರ, ನಮ್ಮಂಥವರಿಗಿಂತ ನಾಯಿನ ಮೇಲನ್ನು ರೇಶ್ಮಿ ಗಾದಿ ಮ್ಯಾಲ ಮಲಗ್ತಿರಬೇಕು.

**ಚಮ್ಮಾರ:** ಇನ್ನೂ ಮುಂದ ಕೇಳ, ಒಬ್ಬ ಗಂಡಸ ಬರಬರ್ತಾ ಹೆಂಗಸಾದ ಮತ್ತ ತನ್ನ ಅಡಿಗೆ ಆಳಿನೊಂದಿಗೆ ಮದುವೆಯಾದ.

**ಕಟುಕ:** ಇಂಗ್ಲಂಡದಾಗ ಎಲ್ಲಾ ಉಲ್ಟಾ ಕಾಣಸ್ತದ. ತಾ ಹುಕ್ಕಾ ಇತ್ಲಾಗ.

**ಚಮ್ಮಾರ:** ಪೂರ್ವದಲ್ಲಿ ಯುದ್ಧ ಸುರುವಾಗೇದ. ಬಾಂಬುಗಳು ಸಮುದ್ರದಲ್ಲಿ ಬೆಂಕಿ ಹೊತ್ತಿಸಿವೆ.

ಕಾಕೂ: ನಮ್ಮ ವೇದಗಳಲ್ಲಿ ಬಾಂಬುಗಳನ್ನು ಸಿದ್ಧಗೊಳಿಸುವ ಯುಕ್ತಿ ಇತ್ತು. ಇಂಗ್ಲೀಷರು ನಮ್ಮ ನಿಜವಾದ ವೇದವನ್ನು ಕಳವು ಮಾಡಿಕೊಂಡು ತಗೊಂಡು ಹೋದ್ರು. ನಮ್ಮ ಕಾಶೀಯ ಬ್ರಾಹ್ಮಣರಂತೂ ಬರೀ ಜುಟ್ಟಾ ಕಟ್ಟೋದು ಹಾಗೂ ತಿಲಕ ಇಡೋದು ಅಷ್ಟ ಕಲ್ತರು.

ಕಟುಕ: ಯುದ್ಧಂತೂ ಎಲ್ಲ್ಯಾರ ಒಂದ ಕಡೆ ಇದ್ದದ್ದ-ಪರಮಾತ್ಮನ ಕಾನೂನೇ ಹಿಂಗದ.

ಚಮ್ಮಾರ: ಹುಕ್ಕಾ ಇತ್ಲಾಗ ತಾ.

ಕಾಕೂ: ಯುದ್ಧ ನಮ್ಮ ಕುಲುಮಿ ಹಂಗ, ಇದರೊಳಗಿಂದ ಪಾರಾಗಿ ಹೋದಾವ ಹೋದ. ನಮ್ಮ ಜನ ಯಾವಾಗಲೂ ಶಾಂತಿ, ಶಾಂತಿ, ಶಾಂತಿ ಅಂತಾರ. ಹಂಗಂತನ ಇವರ್ನ ಯಾರೂ ಕೇಳೋದಿಲ್ಲ.

ಕಟುಕ: ಏನಪಾ, ಭಾರೀ ಸುವಾಸ್ನಿ ಹಿಡಿಗೇದ ಮಸಾಲೀದು.

ಕಾಕೂ: ನಿನ್ನ ಅತ್ತಿಗಿ ಸಾರಿಗೆ ಒಗ್ಗರಣಿ ಹಾಕಾಕ ಹತ್ಯಾಳ. ಏ, ಏನು, ರೊಟ್ಟಿ ತಗೊಂಡು ಬಾ.

(ದೀಪಾ, ಒಂದು ಕೆರಸಿಯೊಳಗ ರೊಟ್ಟಿ ಹಾಗೂ ಮೂರು ಪಾತ್ರೆಯೊಳಗ ಸಾರು, ಭಾಜಿ, ಬೆಣ್ಣೆ ಎಲ್ಲ ತಂದಿಡುತ್ತಾನೆ. ರೊಟ್ಟಿ ತಿನ್ನುತ್ತಾರೆ.)

ಕಟುಕ: ಭಾಜಿ ಬಹಳ ಭಲೋ ಅದ. ತುಪ್ಪ ತಿಂದ್ಹಾಂಗ ಆಗ್ತದ.

ಚಮ್ಮಾರ: ಅತ್ತಿಗಿ ಕೈಗುಣನ ಹಾಂಗ. ಅವರ ಮಾಡಿದ ರೊಟ್ಟಿ ರುಚೀನ ಬೇರೆ.

ಕಾಕೂ: ದೀಪಾ, ಭಾಜಿ ಇನ್ನಿಷ್ಟ ತಾ.

ಚಮ್ಮಾರ: ನೀನಿಂದ ತಹಸೀಲ ಆಫೀಸಿಗೆ ಹೋಗಿದ್ದೆಲ್ಲ. ಕುದುರೀಗ ನಾಲು ಕಟ್ಟೋ ಗುತ್ತಿಗಿ ಸಿಗೋದಿತ್ತು. ಏನಾಯ್ತು?

ಕಾಕೂ: ಹರಾಜನ್ಯಾಗ ಬಹಳ ರೊಕ್ಕ ಏರಿಸಿದ್ರು. ಸುಮ್ನ ಓಡಾಟ ಆತು. ಎಲ್ರೂ ಕೆಳಗಿನಿಂದ ಮೇಲಿನ ತನಕ ಲಂಚ ಹೊಡ್ತಾರ. ಕುರುಡು ಸರಕಾರದ ಕೆಲಸನs ಹಿಂಗs!

ಕಟುಕ: ಇಷ್ಟ ರೊಕ್ಕ ಏರಿಸಿ ಗುತ್ತಿಗಿ ಹಿಡ್ದಾವನೂ ರೊಕ್ಕ ಮಾಡಕೋ ಬೇಕಲ್ಲ.

ಕಾಕೂ: ಎಂಥದರ ಕಬ್ಬಿಣದ ನಾಲು ಮಾಡಿಕೊಡ್ತಾನ. ಕೇವಲ ಕಾಗದದಲ್ಲಿ ಮಾತು, ಕರಾರು. ಅಲ್ಲಿ ಎಲ್ಲ ಮಾಡ್ತೀವಿ ಅಂತಾ ಬರ್ದಕೊಡ್ತಾರ ಅಷ್ಟ. ಹಂಗs ಅಲ್ಲಿ ಹೋಗಿದ್ದೆ. ನನಗ ಕುಲುಮ್ಯಾಗs ರಗಡ ಕೆಲಸ ಐತಿ. ನಮ್ಮಪ್ಪ ಹೇಳ್ತಿದ್ದ-ಮಗನ ನಾಲ್ಕು ಪೈಸೆ ಕಡಿಮೆಯಾದರೂ ಚಿಂತಿಲ್ಲ ನಮ್ಮ ನಮ್ಮ ಜಗಾದಾಗ ಇರಬೇಕು-ಅಂತಾ.

ಚಮ್ಮಾರ: ಬಹಳ, ಬಹಳ ಆನಂದಾತು ಊಟ. ತಗೋ ಹುಕ್ಕಾ ಮತ್ತ ತಾಜಾ ಮಾಡು, ಎಲ್ಲ ಆರಿ ಹೋಗೇದ.

(ಕೈ ತೊಳೆಯುತ್ತಾರೆ. ದೀಪಾ ಅವರ್ದೆಲ್ಲ ಊಟವಾದ ಮೇಲೆ ಪಾತ್ರೆ ತಗೊಂಡು ಹೋಗುತ್ತಾನೆ. ಕಾಕೂ ಹುಕ್ಕಾದೊಳಗ ಮತ್ತ ತಂಬಾಕ ಹಾಕುತ್ತಾನೆ.)

**ಕಾಕೂ:** ಏ, ಇಲ್ನೋಡು.

**ಸಂತೀ:** (ಒಳಗಿನಿಂದ) ಏನು ?

**ಕಾಕೂ:** ಹಾಲಿನ್ಯಾಗ ಸಕ್ಕರಿ ಹಾಕಬ್ಯಾಡ, ಇಂದ ಕೇಸರಿ ಹಾಕಿಕೊಡು. ಇವರೆಲ್ಲ ದಿನಾ-ದಿನಾ ಎಲ್ಲಿ ಬರ್ತಾರ. (ಪುಟ್ಟಿಯೊಳಗಿಂದ ಹುಂಜ ಹೊರಗ ತಗದು ಕೈಯಾಡಿಸುತ್ತಾನೆ, ಅದರ ಬೆನ್ನಮೇಲೆ) ಬಾ, ರಾಜಾ, ನನ್ನ ಕೈಯಿಂದ ತಿನಿಸ್ತೀನಿ. ಸಜ್ಜಿ, ಬಿಳಿ ಎಳ್ಳು ತಿಂತದ.

**ಕಟುಕ:** ಎಳ್ಳು !

**ಕಾಕೂ:** ಹಾಂ ! ಅತೀ ಖುಷಿಯಿಂದ ತಿಂತದ. ಇದರಿಂದಾಗಿಯೇ ಇದು ಇಷ್ಟು ಬಲಿಷ್ಠ ಆಗಿರೋದು. ಮೈದಾನದಾಗ ಯಾರಿಗೂ ಬರಗೊಡೋವುದಿಲ್ಲ. ಹಿಂದಿನ ಸಲ ಇದರ ಕೈ ನೋಡಿದ್ದೇನ. ತುರಾಯಿ ನಿಗರಿಸಿ ಹಿಂಗ ಕೂಗ್ತು ಫತ್ತು ತೇಲಿಯ ಹುಂಜ ಮೈದಾನ ಬಿಟ್ಟು ಓಡಿ ಹೋತು.

**ಚಮ್ಮಾರ:** ಎಷ್ಟು ವರ್ಷದ್ದು ಐತಿ ?

**ಕಾಕೂ:** ನಾಳೆ ಆಶ್ವಿಜಕ್ಕ ಪೂರಾ ಎರಡೂವರಿ ವರ್ಷದ್ದಾಗ್ತದ.

**ಕಟುಕ:** ಹಂಗಾರ ಇನ್ನೂ ಸಣ್ಣದ ಐತಿ.

**ಕಾಕೂ:** ಆದರ ಅದರ ಸೇವಾ ಎಷ್ಟು ಮಾಡ್ತೀವಿ ? ಎಂಥ ಖುರಾಕ ಕೊಡ್ತೀವಿ ? ಇದರ ತುರಾಯಿ ನೋಡು-ರಕ್ತದ್ಹಂಗ ಕೆಂಪು. ಇದರ ಉಗರ ನೋಡು ಹ್ಯಾಂಗದಾವ.

**ಚಮ್ಮಾರ:** ಬಹಳ ಚೂಪ, ಹರತ ಅದಾವ.

**ಕಾಕೂ:** ನೀನು ಹುಂಜದ ವಿಷಯ ಬಿಡು, ಬೇರೆ ಪ್ರಾಣಿಗಳನ್ನೂ ಕೂಡ ಬಿಡುವುದಿಲ್ಲ.

**ಕಟುಕ:** ಹಿಂದಿನ ಸಲ ಗಜ್ಜಣನ ಹುಂಜನೂ ಛಲೋ ಹೋರಾಡ್ತು.

**ಕಾಕೂ:** ಒಣರೊಟ್ಟಿ ತಿನ್ನೋ ಹುಂಜ ಏನು ಹೋರಾಡತೈತಿ ?

**ಕಟುಕ:** ಹಾಂಗ ಅನ್ನಬ್ಯಾಡ. ಹೋರಾಟ ಏನ, ಎದೆ ಸೆಟೆದು ಹೋರಾಟ ಮಾಡ್ತದ. ಹಿಂದಿನ ಸಲ ನಿನ್ನ ಹುಂಜದ ಜತಿಗೆ ಕಾದಾಡಿದಾಗ ಯಾವುದ ಗೆದಿತದಂತಾ ಹೇಳೋದು ಕಷ್ಟಾಗಿತ್ತು.

**ಕಾಕೂ:** ಆದ್ರ ಗೆದ್ದದ್ದು ಯಾವುದು ?

**ಕಟುಕ:** ಒಂದಂತೂ ಗೆಲ್ಲಬೇಕಾಗಿತ್ತು. ಆದರ ಮಸ್ತ ಕಾದಾಡ್ತು.

**ಕಾಕೂ:** ನೋಡಾಕ ಒಣಗಿದ್ಹಾಂಗ ಐತಿ. ಇಡೀ ದಿನ ತಿರಗ್ತದ. ಹುಳ ಹುಪ್ಪಡಿಗಳ ರಾಶಿಮ್ಯಾಲ. ನಾನು ಇಂಥ ಹುಂಜನ ಎಂದೂ ಇಡೋದಿಲ್ಲ.
ಏ, ಏನು !

**ಸಂತೀ:** (ಒಳಗಿನಿಂದ) ಬರ್ತೀನಿ.

**ಕಾಕೂ:** ಏನಾಯ್ತು ಹಾಲಿಗೆ ?

**ಸಂತೀ:** ಭೈಣೋ, ಹಿಂಡಿಕೊಂಡು ಬರಾಕ ಹೋಗ್ಯಾಳ. ಬರ್ತಿರಬೇಕು.

**ಕಾಕೂ:** ಕತ್ಲ ಆಗೋದರಾಗ ಹಾಲ ಹಿಂಡಿ ಕೊಡಬೇಕು, ದೀಪಾ, ಹೋಗಿ ಬೈಣೋನ ಕರಕೊಂಡು ಬಾ.
(ದೀಪಾ ಹೊರಗೆ ಹೋಗುತ್ತಾನೆ. ಸಂತೀ ಹುಂಜವನ್ನು ಕರೆದುಕೊಂಡು ಒಳಗ ಹೋಗುತ್ತಾಳೆ.)

**ಚಮ್ಮಾರ:** ನಿನಗ ಗೊತ್ತದ ಏನು, ಆಯುಶಾಗ ಹೆಣ್ಣು ಮಗು ಆಗೇದ ?

**ಕಾಕೂ:** ಆಯುಶಾಗ ಹೆಣ್ಣು ಮಗು ? ಅರೆ, ನಿನ್ನೆ ಮೊನ್ನೆ ಸಣ್ಣಾಕಿ ಕಂಡ್ಹಾಂಗ ಕಾಣಿಸತಿದ್ಲು. ನಾನು ಕೆಲಸಕ್ಕ ಕೂತಾಗ, ನನ್ನ ಹತ್ತಿರ ಬಂದು ಗಲ್ಲ ಉಬ್ಬಿಸಿ ತಿದಿಹಂಗ ಊದ್ತಿದ್ಲು. ನಾನು ತಿದಿ ಜಗ್ಗಿದಾಗ ಕುಲುಮ್ಯಾಗಿಂದ ಹಳ್ಳಿದ್ದ ಕಿಡಿ ನೋಡಿ ನಗ್ತಿದ್ಲು ಮತ್ತ ಅವನ್ನ ಹಿಡ್ದು ಚೀಲ್ದಾಗ ಹಾಕಿಕೊಳ್ಳಾಕ ಯತ್ನಿಸುತ್ತಿದ್ಲು.

**ಕಟುಕ:** ಇದು ವಿಪರೀತಾತು. ಆಯುಶಾಳ ಉಡಿಯಲ್ಲಿ ಮಗಳು ಅಂದ್ರ. ಈ ಹುಡುಗಿಯರು ಬಹಳ ಜಲ್ದಿ ದೊಡ್ಡವರಾಗ್ತಾರ, ಒಂದಿನದಾಗ ದೊಡ್ಡವರಾಗ್ತಾರ, ಒಂದಿನದಾಗ ಮದುವಿ ಆಗ್ತದ.

**ಕಾಕೂ:** ಮದುವಿಯಂತೂ ಆಗೇ ಆಗ್ತದ. ಬೈಣೋನ ಮದುವಿ ನಾಳೆ ಆಶ್ವಿಜ ಮಾಸದಾಗ. ಹುಡುಗ ಗೊತ್ತಾಗೇನ.

**ಚಮ್ಮಾರ:** ಭಲೋ ಆತಲ್ಲ.

**ಕಾಕೂ:** ನಾನಂತೂ ಬಹಳ ಸಾದಾ ಮದುವಿ ಮಾಡ್ತೀನಿ. ಆದ್ರ ಊಟ ಅಭ್ರಾಟ ಮಾಡಸ್ತೀನಿ. ಈಗಲೇ ನಾಲ್ಕು ಆಡು ಖರೀದಿ ಮಾಡೀನಿ. ಬೈಣೋನ ತಾಯಿಗೂ ರೇಶ್ಮಿಯ ಬಟ್ಟೆ ಹೊಲಿಸಿ ಕೊಡಬೇಕಾಗೇದ. ಬೈಣೋನ ಅರಿವೆ, ಒಡವಿ, ವಸ್ತ್ರ ಈಗಲೇ ತಯ್ಯಾರ ಮಾಡಾಕ ಹೇಳಿನಿ. ನತ್ತು, ಬಳಿ ಬಂಗಾರದವು. ನಿಮಗಿಬ್ಬರಿಗೂ ಇಂದೇ ಆಮಂತ್ರಣ ನೀಡಿನಿ. ತಪ್ಪಸ ಬಾರ್ದುರ್. ಮರಿಬಾರ್ದುರ್.
(ದೀಪಾ ಓಡುತ್ತ ಬರುತ್ತಾನೆ. ಅವನ ಕೈಯಲ್ಲಿ ಖಾಲಿ ತಂಬಿಗೆ ಇದೆ.)

**ದೀಪಾ:** ಅಪ್ಪಾ! ಆಕಿ ಅಲ್ಲಿಲ್ಲ. ಕರು ಎಲ್ಲ ಹಾಲು ಕುಡ್ದದ. ಮತ್ತ ತಂಬಿಗಿ ಆಕಳ ಕಾಲಾಗ ಬಿದ್ದಿತ್ತು.

**ಕಾಕೂ:** ಆಂ! ಏನಂದೆ ಅಲ್ಲಿಲ್ಲ ಆಕಿ ?

**ದೀಪಾ:** ಇಲ್ಲ.

**ಕಾಕೂ:** ಮತ್ತ ಎಲ್ಲಿ ಹೋದ್ಲು ?

**ದೀಪಾ:** ಗೊತ್ತಿಲ್ಲ.

**ಕಾಕೂ:** ಹಂಗಾದರ ಹೋದ್ಲು ಆಕಿ.... ಆಕಿ ನಡತಿ....

**ಸಂತೀ:** (ಓಡಿ ಒಳಗಿನಿಂದ ಬರುತ್ತಾಳೆ) ಎಲ್ಲಿಗೆ ಹೋದ್ಲು ?

**ಕಾಕೂ:** ಅವಳ ವರ್ತನೆ...ನಮ್ಮ ಭಾಗ್ಯ....ಅವನೊಂದಿಗೆ ಆಕಿ ಹೊಂಟಹೋದ್ಲು.... (ಬಾಗಿಲ ಕಡೆಗೆ ಹೋಗುತ್ತಾನೆ ಹಾಗೂ ಎತ್ತರದ ದನಿಯಲ್ಲಿ ಕೂಗುತ್ತಾನೆ) ಬೈಣೋ !...(ಮಗ್ಗಲ ಮನಿಯಾಕಿ ಬರುತ್ತಾಳೆ.)

**ಮಗ್ಗಲಮನಿಯಾಕೆ:** ಏನಾಯ್ತು ?

**ಕಾಕೂ:** ಬೈಶೋ !

**ಮಗ್ಗಲಮನಿಯಾಕೆ:** ಆಕೀನ ನಾನs ದನದ ಕೊಟ್ಟ್ಯಾಗ ನೋಡಿದ್ದೆ. ಸರಬಣನೂ ಅಲ್ಲಿದ್ದ. ನೀರ ಬಾವಿ ಹತ್ರ ನಿಂತ ಅವನೊಂದಿಗೆ ಮಾತಾಡ್ತಾ ಇದ್ಲು. ನನ್ನ ನೋಡಿ ಆಕಿ ಕರು ಬಿಟ್ಲು.

**ಕಾಕೂ:** ಆಕಿ ಹೋದ್ಲು ?

**ಸಂತೀ:** ಕತ್ಲ ಆತು. ಇನ್ನು ದೂರ ಹೋಗಿರಲಿಕ್ಕಿಲ್ಲ. ನೀ ಅವರ ಬೆನ್ನು ಹತ್ತು.

**ಮಗ್ಗಲಮನಿಯಾಕೆ:** ಧೈರ್ಯದಿಂದ ಬೆನ್ನು ಹತ್ತು. ಆ ಹರಾಮಿ, ನಿನ್ನ ಮಾನಮರ್ಯಾದೆ ತಗದ್ಲು.. ಹೋಗಿ ಹಿಡಕೊಂಡು ಬಾ. ಈಗಲೇ ಹೋಗು.

**ಕಾಕೂ:** ಬರ್ರಿ ಹೋಗೋಣ.

(ಚಮ್ಮಾರ, ಕಟುಕ ಮತ್ತು ಕಾಕೂ ಓಡಿ ಹೋಗುತ್ತಾರೆ. ಓಣಿಯಲ್ಲಿ ಶಬ್ದಗಳು..... "ಕಾಕೂನ ಮಗಳು ಓಡಿ ಹೋದ್ಲು." "ಸುಬೇದಾರನ ಸರಬಣನೊಂದಿಗೆ" "ಹಿಡಕೊಂಡು ಬರ್ರಿ ಆ ಲಜ್ಜಗೇಡಿನ" "ತಂದೆ-ತಾಯಿಗಳ ತಲೆಯ ಮೇಲೆ ಮಣ್ಣು ಹಾಕಿ ಹೋದ್ಲು" "ತುಂಡು ತುಂಡ ಮಾಡ್ರಿ ಹರಾಮಿನ" "ಶೈತಾನಳ ಕಾಲ ಮುರ್ದಹಾಕ್ರಿ.")

**ಸಂತೀ:** (ಬಾಗಿಲದಲ್ಲಿ) ಕೂದ್ಲ ಹಿಡ್ದು ಎಳಕೊಂಡು ಬರ್ರಿ ಆ ಬದ್ಮಾಷ್ ರಂಡೀನ.

**–ಪರದೆ–**

# ಅಂಕ: ಮೂರು

(ಒಂದು ವರ್ಷದ ನಂತರ, ಮಧ್ಯಾಹ್ನ. ಬಚನೀ ಹಾಗೂ ಸಂತೀ ಮಾತಾಡುತ್ತಿದ್ದಾರೆ.)

**ಬಚನೀ:** ನೀನು ಆ ದಿನಗಳನ್ನ ಹ್ಯಾಂಗ ಮರ್ತಿ ಅಂತೀನಿ. ಅಶ್ವತ್ಥ ಮರದ ಮ್ಯಾಲ ಹತ್ತೋದರಲ್ಲಿ ಎಲ್ಲರಿಗಿಂತ ಮುಂದ. ಕೆರಿಮ್ಯಾಲ ಬಟ್ಟಿ ಒಗಿತಿದ್ರ ಬಿಸಿಲಿನ ಚಕ್ರ ಹೊಳಿತಿದ್ದವು.

**ಸಂತೀ:** ಆ ಸಂತೀ ಬೇರೆ ಇದ್ಲು. ಈ ಸಂತೀ ಬೇರೆ ಇದ್ದಾಳ. ನನ್ನ ನಾ ಕುಲುಮೆಯಲ್ಲಿ ಹಾಕಿ ಬಹಳ ಕಾಲ ಆಯ್ತು. ಬಚನೀ ನನಗ ಅನಸ್ತದ, ಆ ಮಾತಿಗೆ ಯುಗ ಕಳೆದುಹೋತು.

**ಬಚನೀ:** ನಿನಗೀಗ ಎಂದೂ ಗಜ್ಜಣ ನೆನಪ ಆಗೋದಿಲ್ಲೇನು ?

**ಸಂತೀ:** ಇಲ್ಲ.

**ಬಚನೀ:** ನೀ ಪುಕ್ಕಿ ಅದಿ.

**ಸಂತೀ:** ಹೆಣ್ಣಿಗೆ ಗಂಡನ ಮನೀನ ಗತಿ-ಮತಿ ಎಲ್ಲ. ಅವಳ ಸಂಸಾರ, ಗಂಡ, ಅವಳ ಮಕ್ಕಳು, ದೀಪಾ ಈಗ ಹದಿಮೂರು ವರ್ಷದವ ಆದ. ಇನ್ನೊಂದು ಎರಡು ಮೂರು ವರ್ಷ ಕಳ್ದರ ಮದುವಿಗೆ ಬರ್ತಾನ. ಅವನ ಹೆಂಡತಿ ಮನಿಗೆ ಬರ್ತಾಳ ಮತ್ತು ಮನಿ, ಒಲಿ ನೋಡಿಕೊಳ್ಳತಾಳ. ನನಗ ಇನ್ನೇನ ಬೇಕು. ಅರ್ಧಕ್ಕಿಂತ ಹೆಚ್ಚು ವಯಸ್ಸಾದವು. ಉಳಿದ ಜೀವ ಇನ್ನೇನು ಹೀಂಗ ಕಳದು ಹೋಗ್ತದ.

**ಬಚನೀ:** ನೀನೆಂಥ ಸಹನತೆಯ ಗುಟುಕು ಕುಡ್ದು ಕುಂತಿಯೋ ಗೊತ್ತಿಲ್ಲ. ಹರನಾ ಮೀನೂ ಓಡಿ ಹೋದ್ಲು, ಜನ ನಾಲ್ಕು ದಿನ ಮಾತಾಡಿಕೊಂಡ್ರು, ಗದ್ಲ ಮಾಡಿದ್ರು, ಮತ್ತ ತಮ್ಮಷ್ಟಕ ತಾವ ಸುಮ್ಮನಾದರು. ಮನುಷ್ಯ ಯಾರ ಯಾರ್ದು ಮರ್ಯಾದೆ ಕಾಯಬೇಕು. ನನಗ ಇಷ್ಟಗೊತ್ತದ, ಯಾರು ತಮ್ಮ ಮನಕ್ಕ ತಿಳಿದದ್ದು ಮಾಡ್ತಾರ ಅವರು ಸುಖವಾಗಿರ್ತಾರ.

**ಸಂತೀ:** ನಾನು ಹಿಂಗೆ ಎಂದೂ ಯೋಚಿಸಿಲ್ಲ. ಈಗ ಯೋಚನೆ ಮಾಡೂದರಾಗ ಏನು ಲಾಭ ಐತಿ. ಎಲ್ಲ ಮುಗದಹೋಗೇದ....

**ಬಚನೀ:** ನನ್ನ ಮಾತಿನ ಉತ್ತರಾ ಕೊಡು.

**ಸಂತೀ:** ಏನು ?

**ಬಚನೀ:** ಗಜ್ಜಣ !

ಸಂತೀ: ಮತ್ತ ಅವನ ಮಾತ, ತಕ್ಕೊಂಡು ಕುಂತಿ !

ಬಚನೀ: ಯಾಕ ಹೇಳೋದಿಲ್ಲ ? ಗಜ್ಜಣ ಬಂದು ಎಷ್ಟು ದಿನಗಳಾದವು ?

ಸಂತೀ: ಮೂರು ತಿಂಗಳ ಆಗಿರಬೇಕು. ಬೈಣೋನ ಪತ್ತೆ ಏನಾರ ತಿಳಿತೇನು ? ಅಂತಾ ಅವ ಕೇಳಿದ. ನಾನು ಅವಗ ಸಿಟ್ಟ ಮಾಡ್ದೆ ಮತ್ತ ಇನ್ನ ಮ್ಯಾಲ ಇಲ್ಲಿಗೆ ಬರಬ್ಯಾಡ ಅಂತಾ ತಾಕೀದ ಮಾಡ್ದೆ. ಖಬರದಾರ. ಅವ ಯಾಕ ಕೇಳಬೇಕು ಬೈಣೋನ ಬಗ್ಗೆ ? ಅದರ ಅರ್ಥ ಏನು ? ಈ ಗುಪ್ತಯಾತನೆಯನ್ನು ನನಗ್ಯಾಕ ನೀಡಬೇಕು ? ಬೈಣೋನ ಮಾತ ಎತ್ತಿ ನಾ ಮರೆತು ಬಿಟ್ಟಿರುವ ಹಿಂದಿನ ಘಟನೆಯ ನೆನಪ ಕೊಡ್ತಾನ. ನನ್ನ ಸೋಲು. ನನ್ನ ನಾ ತುಳ್ದು ನಿಂತೀನಿ ಅನಸ್ತದ, ನನ್ನೊಳಗ ಹಣಕಿ ಹಾಕಿ ನೋಡಿಕೊಂಡಾಗ, ಇದಕ್ಕಾಗೀನ ಆ ಘಟನೆಯನ್ನು ಮೆಟ್ಟಿ ನಿಂತೀನಿ. ನಾನು ಒಬ್ಬ ಗೃಹಿಣಿಯಾಗಿ ಬದುಕ ಮಾಡೀನಿ. ಯಾವ ಆಶೆಯನ್ನೂ ಹತ್ತಿರ ಸುಳಿಗೊಟ್ಟಿಲ್ಲ. ನನ್ನ ನಸೀಬ ಏನಿತ್ತೋ ಅದನ್ನ ಒಪ್ಪಿಕೊಂಡು ಜೀವನ ಮಾಡೀನಿ. ಆ ಘಟನೆಯನ್ನು ಹತ್ತಿಕ್ಕಿ ಬದುಕುವಲ್ಲಿಯೇ ಮರ್ಯಾದಿ ಅದ. (ದೀಪಾ ಹೊರಗಿನಿಂದ ಓಡುತ್ತಾ ಬರುತ್ತಾನೆ, ಮತ್ತು ಸಂತೀಯನ್ನು ಅವಚಿ ಹಿಡಿದುಕೊಳ್ಳುತ್ತಾನೆ.)

ದೀಪಾ: ಓ ! ಅವ್ವಾ !

ಸಂತೀ: ಓಣ್ಯಾಗ ಯಾರ ಸಂಗಡಾರ ಜಗಳಮಾಡಿ ಬಂದೇನ ?

ದೀಪಾ: ಇಲ್ಲಿ ನೋಡು, ಟೇಕು ನನ್ನ ಅಖರೋಟ ಕಸಗೊಳ್ಳಾಕ ಹತ್ತಿದ್ದ, ನಾನು ಗೆದ್ದ ಕೂಡಲೇ ನನಗೆ ಬಯ್ಯಾಕ ಹತ್ತಿದ, ಎಲ್ಲ ಅಖರೋಟ ತಗೊಂಡು ಓಡಿ ಬಂದೆ.

ಸಂತೀ: ಜಗಳ ಮಾಡಬ್ಯಾಡ ಮಗಾ.

ದೀಪಾ: ಅವ ನನಗ ಯಾಕ ಬಯ್ಯಬೇಕು ?

ಸಂತೀ: ಅವ್ನ ನಾಲ್ಗಿ ಹೊಲಸಾತು, ನಿಂದೇನು ಹೋತು (ಹಣೆ ಚುಂಬಿಸಿ) ನನ್ನ ಸುಂದರ ಚಂದಿರ, ನನ್ನ ಮಗ ಬಹಳ ಒಳ್ಳೇವ. ನಿಮ್ಮಪ್ಪನಿಗೆ ನಿನ್ನಿಂದ ಬಹಳ ಆಶಾ ಅದ. ಉಫ್.... ಇದೇನು ವಾಸನಿ ನಿನ್ನ ಕೂದಲ್ದಾಗ ? ಎಲ್ಲೆರ ಹೊಲಸ್ನಾಗ ಆಡ್ತಿದ್ದೇನು ?

ದೀಪಾ: ಇಲ್ಲವ್ವ. ನಿನ್ನೆ ರಾತ್ರಿ ಅಪ್ಪನೊಂದಿಗೆ ಕುಲುಮ್ಯಾಗ ತಿದಿ ಜಗ್ಗತಾ ಇದ್ದೆ. ಕಾದ ಕಬ್ಬಿಣದ ಮೇಲಿನ ಹೊಟ್ಟು ನನ್ನ ತಲ್ಯಾಗ ಬಿದ್ದಿರಬೇಕು.

ಸಂತೀ: ಹೀಂಗ... ಮತ್ತ ಎಲ್ಲಿಗೆ ಹೊಂಟಿ ?

ದೀಪಾ: ಹೊರಗ ಆಡಾಕ.

ಸಂತೀ: ಆಟ ಆಡಿದ್ದು ಬಹಳಾತು. ಅಖರೋಟ ಎಲ್ಲಿಯಾದರೂ ಮುಚ್ಚಿಡು ಮತ್ತ ಕುಲುಮ್ಯಾಗಿಂದ ಬೂದಿ ತಗಿ.

ದೀಪಾ: ಇಲ್ಲ.

ಸಂತೀ: ಹೊತ್ತ ಮಾಡಬ್ಯಾಡ.

ದೀಪಾ: ನಾ ತೆಗೋದಿಲ್ಲ.

ಸಂತೀ: ಹೇಳಿದ್ದು ಕೇಳಬೇಕು. ನಿನ್ನಪ್ಪ ಈಗ ಬರ್ತಿರಬೇಕು. ನಿನ್ನ ಹುಡುಕ್ತಾ ತಿರಗ್ತಾನ, ಮತ್ತ ನೀ ಹೋದರ....

ದೀಪಾ: ರಾತ್ರಿ ಕುಂತ ಕುಂತ ನನ್ನ ನಡಾನ ಒಡ್ಡಬಿಟ್ಟೇತಿ. ತಿದಿ ಜಗ್ಗಿ ಜಗ್ಗೀ ನನ್ನ ಕೈ ನೋಯಾಕ ಹತ್ಯಾವ. ನಾನಂತೂ ಈಗ ಆಡಾಕ ಹೋಗ್ತಾವ.

ಸಂತೀ: ಹಾಗಾದರ ಕುಲುಮಿಯ ಬೂದಿ ಯಾರ ತಗೀತಾರ ?

ದೀಪಾ: ಅದು ಬೈಣೋನ ಕೆಲಸ, ಆಕಿ ಕೆಲಸ ನಾನ್ಯಾಕ ಮಾಡ್ಲಿ ?

ಸಂತೀ: ಇನ್ನ ಮ್ಯಾಲ ಬೈಣೋನ ಕೆಲಸ ಯಾರು ಮಾಡಬೇಕು ? ನೀನ ಮಾಡಬೇಕು.

ದೀಪಾ: ನಾನ್ಯಾಕ ಮಾಡ್ಲಿ, ನೀ ಮಾಡು.

ಸಂತೀ: ಹೇಳಿದ್ದು ಕೇಳೋದಿಲ್ಲ.....

ದೀಪಾ: ಇಲ್ಲ.

ಸಂತೀ: ಮಕ್ಕಳು ಮಾತ ಕೇಳ್ತಾರ.

ದೀಪಾ: ನನ್ನ ಮುಟ್ಟಗ್ಯಾಗ ಏನೈತಿ ಹೇಳು ?

ಸಂತೀ: ಹೇಳಿದ್ರ ಕೆಲಸ ಮಾಡ್ತಿ ?

ದೀಪಾ: ಹ್ಞುಂ !

ಸಂತೀ: ಸರಿ. ಹಂಗಾರ ನಾ ಹುಡುಕಲಾ.

ದೀಪಾ: ಹ್ಞುಂ !

ಸಂತೀ: ಜೋಡಿ.

ದೀಪಾ: ಅಲ್ಲ. ನೀ ಹೇಳ್ಲಿಲ್ಲ. ನೋಡಿಲ್ಲಿ, ಜೋಡಿ ಅಲ್ಲ, ನಾ ಇನ್ನ ಹೋಗ್ತೀನಿ. (ದೀಪಾ ಓಡಿ ಹೋಗುತ್ತಾನೆ.)

ಸಂತೀ: ದೀಪಾ ನನ್ನ ಅವಚಿಕೊಂಡಾಗ ಅವನ ಕೂದಲ್ತಾಗಿಂದ ಒಂದು ವಿಚಿತ್ರ ವಾಸನಿ ಬಂತು. ಆ ವಾಸನಿ ನನ್ನ ಕರುಳಿನ ಒಳಗ ಇಳಿತಾ ಹೋತು. ಮನಸ್ಸು ರೋಸಿಗೊಂಡಿತು. ಬಹಳ ಹಿಂದ ಈ ವಾಸನಿ ನಾ ಅದs ಬಂದಾಗ, ಆಗಲೂ ನನಗ ಇಂಥದ ವಾಸನಿ ಬಂದಿತ್ತು. ಬರಬರ್ತಾ ಕುಲುಮಿ, ಕಾದ ಕಬ್ಬಿಣದ ಹೊಲಸ ವಾಸನಿ ರೂಡಾ ಆತು. ಇಂದ ಮತ್ತ ಹತ್ತೊಂಬತ್ತ ವರ್ಷದ ನಂತರ ಆ ವಾಸನಿ ನನ್ನ ಕರಳ ಮುಟ್ಟಿ ಅಲ್ಲೋಲ ಕಲ್ಲೋಲ ಮಾಡೇದ.

ಬಚನೀ: ಹತ್ತೊಂಬತ್ತು ವರ್ಷದ ಹಿಂದಿನ ಸಂತೀ, ನೀನೀಗ.

ಸಂತೀ: ಹಾಂ ! ಕೆರಿಮ್ಯಾಲ ಬಟ್ಟಿ ಒಗೀತಾ ಇರೋ ಸಂತೀ, ಅವಳು ನನ್ನೊಳಗ ಈವರೆಗೂ ಮಲಗಿದ್ಲು. ಇಂದ ಅಕಸ್ಮಾತ್ತಾಗಿ ಬಿಸಿಲಿನ ಗಂಧ ಹಾಗೂ ನೀರಿನ ಹೊಯ್ದಾಟ ಜಾಗ್ರತವಾಗೇದ-ಬಹಳ ಕಾಲದಿಂದ ಯಾರಿಗರ ಇದನ್ನು ಹೇಳಿದ್ರ ಏನಾದರೂ ಆದೀತಲ್ಲ ಎಂಬ ಭ್ರಮೆಯಲ್ಲೆ ಇದ್ದೆ. ಆದ್ರ-ಬೈಣೋ ಹೊರಟು ಹೋದ್ಲು. ಊರಲ್ಲಿ ಎರಡ ದಿನ ಗದ್ಲ ಆತು, ಆಮ್ಯಾಲ ಏನೂ ಆಗಲಿಲ್ಲ-ನನಗ ಬಹಳ ಹೆದರಿಕೆ ಆಗಿತ್ತು.

ಬಚನೀ: ನಿನಗ ಬೈಣೋನ ನೆನಪ ಆಗ್ತದ.

ಸಂತೀ: ಹಾಂ! ಅವಳು ನನ್ನ ಮನಸ್ಸನ್ನು ಚುಚ್ಚಾಕ ಹತ್ಯಾಳ.

ಬಚನೀ: ಮತ್ತ ನೀ ಏನ ಮಾಡ್ತಿ?

ಸಂತೀ: ಏನೂ ಇಲ್ಲ. ನನಗ ಇದನ್ನೆಲ್ಲ ಸಹಿಸಿಕೊಳ್ಳೋ ರೂಢಾ ಆಗೇದ. ಅವಳು ನನ್ನ ಕೊನಿ ಉಸೀರಿನವರೆಗೂ ಹೀಗೆ ಚುಚ್ಚತಾ ಇರ್ತಾಳ, ಅವಳು ಹೊರಟು ಹೋದ್ಲು-ಒಂದು ಭಾರ ಇಳ್ದಾಂಗ ಆತು. ಒಂದು ಸಾಲ ತೀರಿದ್ಹಾಂಗ ಆತು. ನನಗ ಗೊತ್ತಿಲ್ಲ, ಅದು ಯಾವುದು ಅಂತಾ. ಕೊಟ್ಟಿಗ್ಯಾಗ ಹಾಲು ಹಿಂಡಾಕ ಹೋಗ್ತೀನಿ, ಆ ಕತ್ತಲದಾಗ ಬೈಣೋನ ನೆರಳು ಅಲುಗಾಡಿದ್ಹಾಂಗ ಕಾಣಸ್ತದ... ದನಗಳ ಬಿಸಿ ಉಸಿರಿನಲ್ಲಿ ಅವಳ ಉಸಿರು.

ಬಚನೀ: ಬೈಣೋ ನಿನ್ನ ಮಗಳು, ನಿನ್ನ ಉದರದ ಧ್ವನಿ, ನೀನು ಒಳಗೇ ಹತ್ತಿಕ್ಕಿದ ಅತೃಪ್ತ ಬಯಕೆಯ ಆಕ್ರಂದನ, ನೀನು ಹತ್ತೊಂಬತ್ತು ವರ್ಷ ಈ ಬೆಂಕಿಯಲ್ಲಿ ಬೇಯ್ತಾ ಇದ್ದಿ, ಪಶ್ಚಾತ್ತಾಪ ಪಡ್ತಾ ಇದ್ದಿ, ನೀನು ಮಾಡಲಾರದ್ದನ್ನ ನಿನ್ನ ಮಗಳು ಮಾಡಿದ್ಲು.

ಸಂತೀ: ಮೊದಮೊದ್ಲು ಬೈಣೋನ ಮ್ಯಾಲ ಬಹಳ ಸಿಟ್ಟು ಇತ್ತು. ಅವಳ ಕುತ್ತಿಗೆ ಹಿಚುಕಿ ಬಿಡಬೇಕು ಅನಸ್ತಾ ಇತ್ತು. ಆದ್ರ ನಿಜವಾಗಿ ನೋಡಿದ್ರ ನನ್ನ ಕುತ್ತಿಗೀನ ಹಿಚುಕಿ ಬಿಡಬೇಕು ಅಂತಾ ಇಚ್ಛೆ ಇತ್ತು. ಈಗ ಅವಳ ಬಗ್ಗೆ ನನ್ನಲ್ಲಿ ಯಾವ ಸಿಟ್ಟೂ ಇಲ್ಲ, ಸೆಡವೂ ಇಲ್ಲ. ಈಗ ನನ್ನೊಳಗ ಅವಳಿಗಾಗಿ ಮಮತೆಯ ಮಹಾಪೂರನ ಹರಿತೈತಿ. ಒಂದು ರೀತಿ ಮುಕ್ತಿ ಅನುಭವಿಸ್ತಾ ಇದ್ದೀನಿ. ನಾನೀಗ ಅವಳಿಗೆ ಬಹಳ ಹತ್ರ ಬಂದೀನಿ ಅಂತಾ ಅನಸ್ತದ. ರಾತ್ರಿ, ಅಶ್ವತ್ಥದ ಟೊಂಗೆಗಳು ಮುರಿದ ಸಪ್ಪಳ ಕೇಳಿಬರ್ತದ, ಮತ್ತ ನನ್ನ ಎದೆಯಲ್ಲಿ ಸೂರ್ಯ ಸುಡಲಾಕ ಹತ್ಯಾನ.

ಬಚನೀ: ನಿನ್ನ ಒಳಗಿನ ದುಃಖಾನ ನಾ ತಿಳಕೊಂತೀನಿ, ಸಂತೀ.

ಸಂತೀ: ಸಾಯಂಕಾಲ ಬಾ, ನಾವು ಬಾವಿಗೆ ನೀರ ತರ್ಲಾಕ ಹೋಗೋಣಾಂತ.

ಬಚನೀ: ಬರ್ತೀನಿ.

ಸಂತೀ: ಬೈಣೋ ಹೋದಾಗಿನಿಂದ, ಯಾವ ಕೆಲಸ್ದಾಗೂ ಮನಸು ಇಲ್ದಂಗಾಗೇತಿ. ಮನಿ ಕೆಲಸ ಸಹಿತ ಯಾರ್ದ ಕೆಲಸ ಅನ್ನುವಂಗಾಗೇತಿ.

ಬಚನೀ: ನಾ ಸಂಜೀಗ ಬರ್ತೀನಿ. ತಯ್ಯಾರ ಇರು. (ಹೋಗುತ್ತಾಳೆ, ಸಂತೀ ಕುಲುಮಿಯ ಬೂದಿ ತೆಗೆಯುತ್ತಾಳೆ. ಗಜ್ಜಣ ಮುಂಜಣಾ ತಗೊಂಡು ಬರುತ್ತಾನೆ.)

ಗಜ್ಜಣ: ಹೊಗಿ ಏಳೋದು ನೋಡಿದೆ. ಹಂಗಾರ ಕಾಕೂ ಮನಿಯಾಗ ಇರಬೇಕು ಅಂತಾ ಬಂದೆ.

ಸಂತೀ: ಅವ ಕಬ್ಬಿಣ, ಇದ್ಲಿ ತರಾಕ ಪ್ಯಾಟಿಗ ಹೋಗ್ಯಾನ.

ಗಜ್ಜಣ: ರಂಟೆ ಹೊಡೀತಾ ಮುಂಜಣಾ ಮುರ್ದಹೋತು. ಮತ್ತ ಇದರ ತುದೀನೂ ಮಂಡ ಆಗೇತಿ ನಾನು ಇದನ್ನ ಇಟ್ಟು ಹೋಗಲಿ ?

ಸಂತೀ: ಇಟ್ಟು ಹೋಗು, ಇಲ್ಲೆ.

ಗಜ್ಜಣ: ತಯ್ಯಾರ ಆದ್ರ ಮುಂಜಾನೆ ಬಂದು ಒಯ್ತೀನಿ.

ಸಂತೀ: ಅವಗ ಹೇಳ್ತೀನಿ. (ಗಜ್ಜಣ ಹೊರಡಲನುವಾಗುತ್ತಾನೆ.) ನೀನು ಬಂದೀ ಅಂದ್ರ ಜನ ಮಾತಾಡಿಕೊಳ್ತಾರ.

ಗಜ್ಜಣ: ಇದು ನಿನ್ನ ಭ್ರಮೆ, ನಿನಗ ನೆರಳು ಕೂಡ ಮಾತಾಡಿದ್ಹಾಂಗ ಅನಸ್ತದ. ಕುಲುಮೆಯಿಂದ ಅಪಮಾನದ ಹೊಗಿ ಎದ್ಹಾಂಗ ನಿನಗ ಭಾಸ ಆಗ್ತದ.

ಸಂತೀ: ಹಾಂ! ಅಪಮಾನಾ ಕೆರಿ ಹತ್ತಿರ ನಾವು ಕೂತಿದ್ದಕ್ಕಾಗಿ ಬಂದ ಅಪಮಾನ ಇನ್ನೂ ಹೋಗಿಲ್ಲ.

ಗಜ್ಜಣ: ಆ ಮಾತಿಗೆ ಈಗ ಇಪ್ಪತ್ತು ವರ್ಷ ಆಗಿ ಹೋತು. ಆನಂತರ ನನ್ನ ಮನಸಿನ ಮಾತ ನಿನಗ ಹೇಳಬೇಕೂ ಅಂತ ಒದ್ದಾಡ್ತಾ ಇದ್ದೆ. ನಾನು ಎಷ್ಟು ಹತ್ತಿರ ಬರಕ ಪ್ರಯತ್ನ ಮಾಡ್ತಿದ್ದೆ. ನನ್ನ ಮನಸು ದುಃಖ ಅನುಭವಿಸ್ತಾನ ಇತ್ತು. ಏದಕೂ ಮನಸು ಹತ್ತಲಿಲ್ಲ, ಹೊಲ ಹಾಳಾಗಿ ಹೋದವು, ಗೋದಿ ಬೆಳೀಬೇಕಾದ ಭೂಮಿಯಾಗ ಹುಲ್ಲು ಬೆಳೀತು. ಎಲ್ಲವೂ ಬೆಂಗಾಡು ಮತ್ತ ಹೇಗೋ ಧೈರ್ಯ ಮಾಡ್ದೆ, ಹೊಲ ಹರಗಿ ತಯ್ಯಾರ ಮಾಡ್ದೆ. ಮಳೆ ಆತು. ಭೂಮಿ ನೀರು ಕುಡ್ದು ಸಿಹಿ ಆತು. ಮತ್ತ ಹೊಲ ಹಸನ ಮಾಡಿ ಹೊಸ ಬೀಜ ಹಾಕ್ದೆ.

ಸಂತೀ: ಹಂಗಾರ ಈ ಸಲ ಬೆಳಿ ಛಲೋ ಇರಬೇಕು.

ಗಜ್ಜಣ: ಹಾಂ! ಒಳ್ಳೇ ಬೆಳೀ ಆಶಾ ಅದ.

ಸಂತೀ: ಆ ದಿನ ನಿನಗ ಬಹಳ ಬಿರಸ ಮಾತಾಡಿದೆ, ಇಡೀ ದಿನ ಅವತ್ತು ನನಗ ಸಮಾಧಾನ ಇರಲಿಲ್ಲ. ಮೊದಮೊದಲು ನೀನು ಚಿಲುಮಿಗಾಗಿ ಬೆಂಕಿ ಕೇಳಾಕ ಬರುವಾಗ ನೀನು ನನಗಾಗಿ ಬರ್ತಿ ಅಂತಾ ತಿಳಿದಿದ್ದೆ. ಆಗ ನೀನು ಬಂದಾಗಲೆಲ್ಲ ನನ್ನ ಮನದಲ್ಲಿ ಸಂತಸದ ತೆರೆಗಳು ಏಳ್ತಿದ್ದವು. ಆದರ ಅದನ್ನ ತೋರಗೊಡದೆ ಮ್ಯಾಲ ಮ್ಯಾಲ ನಿನ್ನ ಸಂಗಡ ಬ್ಯಾಸರದಿಂದ ಮಾತಾಡ್ತಿದ್ದೆ. ಆ ನಂತರ ನೀನು ಬರೋದನ್ನ ಬಿಟ್ಟೆ, ಉರಿಯುತ್ತಿದ್ದ ಇದ್ಲಿ ಆರಿಹೋದ್ಹಾಂಗ. ಆಗ ದಿನಗಳೆಲ್ಲ ನೀರಸ, ಖಾಲಿ ಅನಿಸತೊಡಗಿದವು.

ಗಜ್ಜಣ: ಅವ ಮನ್ಯಾಗ ಇಲ್ಲ ಅಂಬೋದು ಗೊತ್ತಾಗಿದ್ರ ಈಗಲೂ ನಾ ಬರ್ತಿದ್ದಿಲ್ಲ. ನೀನು ಹಿಂಗ ಹೇಳಿದ್ದೆಲ್ಲ.

ಸಂತೀ: ನೀನು ಒಂಟಿಯಾಗಿ ಉಳಿದದ್ದಕ್ಕ ನಿನಗ ಎಂದೂ ಪಶ್ಚಾತ್ತಾಪ ಆಗಿಲ್ಲ ?

ಗಜ್ಜಣ: ಇಲ್ಲ. ಈಗ ಹೊಲದಾಗ ಕೆಲಸಮಾಡೋ ಆನಂದ ಅದ. ನಾನು ಅವೆಷ್ಟೋ ಸಂಸಾರ ನೋಡ್ತೀನಿ, ಮಕ್ಕಳು-ಮರಿ ಇದ್ದವರ್ನ ನೋಡ್ತೀನಿ. ಗಂಡ-ಹೆಂಡತಿ ಇಡೀ ಆಯುಷ್ಯ ತುಂಬ ಪರಸ್ಪರರಲ್ಲಿ

ಮನಸ್ತಾಪ, ಸಂಶಯ, ಜಗಳ ಇತ್ಯಾದಿಗಳಿಂದ ಒಂದಿನವೂ ನಗನಗ್ತಾ ಕಾಲ ಕಳೆಯುತ್ತಿಲ್ಲ-ಅಂಬೋದನ್ನ ನೋಡ್ತೀನಿ. ಅವರವರಲ್ಲಿ ಯಾವ ಹೊಂದಾಣಿಕೆಯೂ ಇಲ್ಲ, ಪ್ರೀತಿ-ಪ್ರೇಮ ಇಲ್ಲ, ಸಾಮೀಪ್ಯ ಇಲ್ಲ. ಪ್ರೀತಿಯ ಕಿಡಿಯಿಲ್ಲ, ಮದುವಿಗೆ ಏನ ಅರ್ಥ ಐತಿ, ಹೇಳು ?

**ಸಂತೀ:** ಒಮ್ಮೆ ನನ್ನ ಮದುವಿ ಆಗಿಹೋತು. ಆಗಿನಿಂದ ನಿನ್ನ ಬಗ್ಗೆ ಯೋಚನೆ ಮಾಡೋದು ಪಾಪ ಅಂತಾ ತಿಳಿದೆ. ಈ ಪಾಪದ ಹೆದರಿಕೆ ನನ್ನನ್ನು ಸುಟ್ಟು ಸುಣ್ಣಮಾಡ್ತು. ಮತ್ತ ಮತ್ತ ಈ ಪಾಪ ನನ್ನನ್ನು ಕಚ್ಚಿತು. ಅದೂ ಅಲ್ದ ನನ್ನೆದುರಿಗೆ ಇದು ಬಹಳ ದೊಡ್ಡ ಪ್ರಶ್ನೆಯಾಗಿ, ಭೂತವಾಗಿ ನಿಂತಿತು. ನನಗ ಇದರ ಉತ್ತರ ಸಿಗ್ತಿರಲಿಲ್ಲ, ಮತ್ತ ಬೈಣೋ ಹೊರಟು ಹೋದ್ಲು-ಮತ್ತ ಆಗ ನನ್ನ ಮನಸ್ಸು ಶಾಂತವಾಯ್ತು. ಆ ನಂತರ, ನನಗ ಅದೆಷ್ಟೋ ಸಲ, ನೀನು ನನಗಾಗಿ ಆ ರಾತ್ರಿ ಕೆರಿದಂಡಿ ಮ್ಯಾಲ ಹಾದಿ ಕಾಯ್ತಾ ನಿಂತಿದ್ದು ನೆನಪಾಯ್ತು......

**ಗಜ್ಜಣ:** ಮತ್ತ ನೀನು ಬರಲಿಲ್ಲ.

**ಸಂತೀ:** ನಾನು ಹೆದರುತ್ತಿದ್ದೆ.

**ಗಜ್ಜಣ:** ನಾನು, ನಿನ್ನ ಸಂಗಡ ಸುಖ-ದುಃಖ ಹಂಚಿಕೊಳ್ಳುವ ಕನಸು ಕಾಣ್ತಾಯಿದ್ದೆ. ಕೂಡಿಯೇ ಇಡೀ ಆಯುಷ್ಯ ಕಳೆಯಬೇಕೆಂಬ ಸ್ವಪ್ನ ಕಾಣ್ತಿದ್ದೆ. ಕೊನೆಗೆ ಈ ರೀತಿ ಯೋಚಿಸುವದನ್ನು ಬಿಟ್ಟುಬಿಟ್ಟೆ. ಇದರಲ್ಲಿ ಬರೀ ದುಃಖನs ಇತ್ತು... ಬರೀ ದುಃಖನs ಇತ್ತು.

**ಸಂತೀ:** ನೀನು ಬಹಳ ಬದಲಾಗೀದಿ.

**ಗಜ್ಜಣ:** ಹೌದು! ಎಲ್ಲವೂ ಬದಲಾಗಿವೆ-ಊರಿನ ಮನೆ, ಓಣಿ, ಕೆರೆ, ಅಶ್ವತ್ಥಮರ. ಆದರ ಇವನ ಆತ್ಮ ಮಾತ್ರ ಬದಲಾಗಿಲ್ಲ. ಹೊರಗಿನಿಂದ ವಸ್ತುಗಳು ಬದಲಾಗುತ್ತವೆ, ಆದರ ಒಳಗಿನಿಂದ ಹಾಗೆಯೇ ಇರುತ್ತವೆ. ಈಗಲೂ ನಾನು ನನ್ನ ಹೊಲದಲ್ಲಿ ರಾತ್ರಿಯೆಲ್ಲ ಜಾಗರಣೆ ಮಾಡ್ತೀನಿ, ರಾತ್ರಿಯ ಕತ್ತಲೆಯಲ್ಲಿ ನಿನಗಾಗಿ ಹಾತೊರೆಯುತ್ತೇನೆ, ತಳಮಳಗೊಳ್ಳುತ್ತೇನೆ. ನಾನು ಯಾವುದನ್ನೂ ಮರೆತಿಲ್ಲ. ಅವೆಲ್ಲ ಘಟನೆಗಳು ನನಗ ನಿನ್ನೆ ಮೊನ್ನೆ ನಡದ್ಹಾಂಗ ಅನಸ್ತದ.

**ಸಂತೀ:** ನಾನು, ಆ ದಿನಗಳನ್ನು ನೆನಪು ಮಾಡಿಕೊಂಡಾಗಲೆಲ್ಲಾ ನನ್ನ ಮನಸ್ಸಿನ್ಯಾಗ ಅಲ್ಲೋಲ ಕಲ್ಲೋಲ ಉಂಟಾಗ್ತದ. ಆದೆಷ್ಟೋ ಸಲ ಕುಲುಮೆಯಲ್ಲಿಯ ಬೂದಿ ತಗೀತಿರುವಾಗ ನನ್ನ ಕೈ ನೋಡ್ಕೊತೀನಿ. ಮತ್ತ ನೆನಪು... ನಿನ್ನ ನೆನಪಾಗ್ತದ, ಆಗ ನನ್ನ ಕೈ ಕೆರಿಯ ನೀರಿನಿಂದ ಸ್ವಚ್ಛ ಆಗ್ತದ, ಮತ್ತ ಬೊಗಸ್ಯಾಗ ಬೆಳದಿಂಗಳೂ ಕಾಣಸ್ತದ.

**ಗಜ್ಜಣ:** ನೀನೊಮ್ಮೆ ಬರ್ತೀನಿ ಅಂತ ಹೇಳಿದ್ದಿ.

**ಸಂತೀ:** ಒಂದು ವೇಳೆ ನಾನು ನಿನ್ನ ಹೊಲದಾಗ ಬಂದರ.....

**ಗಜ್ಜಣ:** ನನ್ನ ಸ್ವಪ್ನ ನಿಜ ಆಗ್ತದ. ನನ್ನ ಹೊಲದ ಪೈರಿನ ಭಾಗ್ಯ ತೆರೀತದ.

ಸಂತೀ: ಅದೆಷ್ಟೋ ಸಲ ನಾನು ಯೋಚಿಸ್ತೀನಿ.....
ಗಜ್ಜಣ: ಏನು ?
ಸಂತೀ: ಯಾವಾಗ ರಾತ್ರಿ, ಮಳೆಹನಿ ಸುರುವಾಗ್ತದ, ಮತ್ತ ಕುಲುಮಿ ತ್ಯಾವ ಆಗ್ತದ, ಕೊಟಗ್ಯಾಗ ಆಕಳ ಒದರಾಕ ಹತ್ತದ ಆಗ ನಾನು ನಡಗಾಕ ಹತ್ತೀನಿ. ಆಗ ಯೋಚಿಸ್ತೀನಿ, ನಾನು ಆ ಸಮಯ ಯಾಕ ಕಳಕೊಂಡೆ ಅಂತಾ.
ಗಜ್ಜಣ: ಒಮ್ಮೆ ನೀನ ಹೇಳಿದ್ದಿ ನಿನ್ನ ಹೊಲದಾಗ ಬರ್ತೀನಿ ಅಂತಾ....
ಸಂತೀ: ಹಾಂ! ಮನಸ್ಸು ಇದನ್ನ ಹೇಳ್ತದ ಆದರ ಹ್ಯಾಂಗ ಬರಲಿ ?
ಗಜ್ಜಣ: ನಾನು ನಿನಗಾಗಿ ಕಾಯ್ತೀನಿ.... (ಹೋಗುತ್ತಾನೆ. ಸಂತೀ ಕುಲುಮಿ ಪುಟುವು ಮಾಡ್ತಾಳೆ. ಕಾಕೂ ಬರ್ತಾನೆ.)
ಕಾಕೂ: ಈ ಕಾಳು ತಗೋ. ಗ್ರಾಮಾಧಿಕಾರಿ ಕೊಟ್ಟಾರ. ಕಾಳು ದೊಡ್ಡವು ಅದಾವ. ಕೋಳಿ ಮರಿಗಳಿಗೆ ಬರ್ತಾವ.
ಸಂತೀ: ಛಲೋ ಆತು. ಅವುಗಳ ಕಾಳೂ ಆಗ್ತಾ ಬಂದಿದ್ದವು.
ಕಾಕೂ: ಕುಲುಮಿ ಏನ ಧಗಧಗ ಉರಿಯಾಕ ಹತ್ತೇದಲ್ಲ.
ಸಂತೀ: ಇದ್ದಿ ಹಾಕಿ ಉರಿಮಾಡಿದೆ. ಒಮ್ಮೆಲೇ ಹತ್ತಿಕೊಂಡ್ತು.
ಕಾಕೂ: ಛಲೋ ಮಾಡ್ದಿ. ನಾನು ಕಜ್ಜಣ ಹಾಗೂ ಇದ್ದಿ ಇನ್ನಿಷ್ಟು ತಂದೀನಿ. ದೀಪಾ ಎಲ್ಲಿ ಹೋಗ್ಯಾನ.
ಸಂತೀ: ಆಡಾಕ ಹೋಗ್ಯಾನ.
ಕಾಕೂ: ಇಲ್ಲಿ ಕುಂದ್ರು ಅಂತಾ ಹೇಳಬೇಕಿತ್ತು. ಎಲ್ಲ ಮುಂಜಣ ಮಾಡಿಯೋ ಮಲಗಬೇಕು ಇವತ್ತು. ಮೋಡ ನೋಡಿದ್ರ ಹಬ್ಬಲಿಕ್ಕೆ ಹತ್ತೇದ, ಈ ಮುಂಜಣ ಯಾರ ಇಟ್ಟು ಹೋಗ್ಯಾರ ?
ಸಂತೀ: ಗಜ್ಜಣ !
ಕಾಕೂ: ಯಾಕ ?
ಸಂತೀ: ಇದರ ತುದಿ ಮಂಡ ಆಗೇದ, ಸೊಟ್ಟ ಆಗೇದ ಅಂತಾಯಿದ್ದ. ಸ್ವಲ್ಪ ಬಡ್ದು ಕೊಡಬೇಕಂತ.
ಕಾಕೂ: ಇಲ್ಲಿ ಬರೋ ಕೆಲಸೇನು ಅವಂದು ?
ಸಂತೀ: ಅವ ನಿನಗಾಗಿಯೋ ಬಂದಿದ್ದ.
ಕಾಕೂ: ಅವ ಯಾವುದೋ ನೆಪದಿಂದ ಇಲ್ಲಿ ಬರ್ತಾನ. ಮತ್ತ ಬರಬಾರದ ಯಾಕ ? ನೀನು ಅವಗ ಉತ್ಸಾಹ ನೀಡ್ತಿ, ಪ್ರೋತ್ಸಾಹ ನೀಡ್ತಿ!
ಸಂತೀ: ನೀ ಮನಿಯಾಗ ಇದ್ದಿಯೋ ಇಲ್ಲೋ ಅಂಬೋದು ಅವಗ ಏನಗೊತ್ತು. ಯಾವಾಗಲೂ ಸಂಶಯ.
ಕಾಕೂ: ನಿನ್ನ ಭೆಟ್ಟಿಯಾಗಾಕ ಬಂದಿದ್ದ. ನಿನ್ನ ಜತಿಗೆ ಮಾತಾಡಾಕ ಬಂದಿದ್ದ.
ಸಂತೀ: ಅವನ ಜತಿಗ ನಂದೇನ ಮಾತ. ನಾನಂತೂ ಕುಲುಮಿ ಹಚ್ತಾ ಇದ್ದೆ. ಅವ ಬಂದ, ನಿನ್ನ ಕೇಳಿದ, ಹಾಗೂ ಮುಂಜಣ ಇಟ್ಟು ಹೋದ.
ಕಾಕೂ: ಅವನ ಹೆಸರ ಕೇಳಿದ ಕೂಡಲೇ ನನ್ನೆದೆಯು ಬೆಂಕಿ ಹತ್ತದ. ಯಾವ

ಕಾಲದ್ಹೋ ವೈಮನಸ್ಸು ಮತ್ತ ಜಾಗ್ರತ ಆಗ್ತದ.

**ಸಂತೀ:** ಹೀಂಗ ಯಾವಾಗಲೂ ಬೆಂಕಿ ಕಾರಬ್ಯಾಡ.

**ಕಾಕೂ:** ನಿನ್ನ ಇಂಥ ವರ್ತನೆಯಿಂದಾಗಿಯೇ ಬೈಣೋ ಹಾಳಾದ್ಲು.

**ಸಂತೀ:** ಬೈಣೋನ ವಿಷಯ ಮತ್ತ ಎಂದೂ ಎತ್ತಬ್ಯಾಡ.

**ಕಾಕೂ:** ಯಾಕ ಎತ್ತಬಾರ್ದು? ಬೈಣೋ ನಿನ್ನ ಮಗಳ ಅಲ್ಲೇನು?

**ಸಂತೀ:** ನನ್ನ ಮಗಳ ಹೌದು, ನಿನ್ನ ಮಗಳ ಅಲ್ಲೇನು?

**ಕಾಕೂ:** ನನ್ನ ಮಗಳ ಆಗಿದ್ರ ಹೀಂಗ ಓಡಿ ಹೋಗ್ತಿದ್ದಿಲ್ಲ.

**ಸಂತೀ:** ನಿನ್ನ ನಾಲಗಿ ತೊಗಲಿಂದಲ್ಲ, ಕಬ್ಬಿಣದ್ದು.

**ಕಾಕೂ:** ನೀನು ಆಕಿಗೆ ಸೊಡ್ಲು ಕೊಡದಿದ್ರ ಹೀಂಗ ಆಗ್ತಿದ್ದಿಲ್ಲ, ಓಡೀನೂ ಹೋಗ್ತಿದ್ದಿಲ್ಲ. ಇಡೀ ಊರಮ್ಯಾಲ ಕಳಂಕದ ಚಿಲಕ ಇಟ್ಟು ಹೋದ್ಲು. ಈ ಮನೆಯಲ್ಲಿ ಇಂಥದು ಎಂದೂ ಆಗಿರಲಿಲ್ಲ. ಹೆಂಗಸರು ಯಾವಾಗಲೂ ಅಡಿಗೆ ಮನೆಯಲ್ಲಿದ್ದರು, ಗಂಡಸರು ಕುಲುಮಿಯಲ್ಲಿ. ಇವಳು ಹೀಂಗ ಆಗ್ತಾಳಂತ ಮೊದ್ಲ ಗೊತ್ತಿದ್ರ ಹುಟ್ಟಿದ ಕೂಡಲೇ ಗಂಟ್ಲ ಹಿಚಿಗಿಬಿಡ್ತಿದ್ದೆ.

**ಸಂತೀ:** ಹಾಗಂತ ನಃ ಅವಳು ಓಡಿಹೋದ್ಲು.

**ಕಾಕೂ:** ನನ್ನಿಂದಾಗಿ?

**ಸಂತೀ:** ಮತ್ತ ಯಾರಿಂದಾಗಿ?

**ಕಾಕೂ:** ಆ ರಾತ್ರಿ ನಾ ಅವಳ ಹಿಂಬಾಲ ಹತ್ತಿದೆ. ಹೊಲದ ಬದುವಿನಲ್ಲಿ ಹೋಗಿ ಘೇರಾವ ಹಾಕಿದೆ. ಆಕಿ ಸೆಟೆದು ನಿಂತ್ಲು. ಕೈಯಲ್ಲಿ ಕಲ್ಲು ತಗೊಂಡು ನನಗ ಎಚ್ಚರಿಕಿ ನೀಡಿದ್ಲು. ಕತ್ತಲ್ದಾಗ ಅವಳ ಕಣ್ಣು ಮಿಂಚಿದವು. ಅವಳು ಅದೇ ತನ್ನ ಗೆಳೆಯನ ಭೆಟ್ಟಿಗೆ ಹೊರಟಿದ್ಲು. ಸಿಟ್ಟಿನಲ್ಲಿ ಅವಳ ಹುಬ್ಬು ಏರಿದವು ಮತ್ತ ಅವಳ ಮುಖ ನಿನ್ನಂಗ ಆತು. ನನಗ ಆಗ ಕತ್ಲಲ್ಲಿ ನೀನ ಕಲ್ಲ ತಗೊಂಡು ನಿಂತೀದಿ ಅನಸ್ತು. ನಾನು ನಿಂತಲ್ಲೇ ನಿಂತೆ. ಅವಳ ಕಣ್ಣಲ್ಲಿ ಸೇಡಿನ ಬೆಂಕಿ ಧಗಧಗಿಸುತ್ತಿತ್ತು. ಮಗಳಿಗೆ ತಂದೆಯ ಮೇಲೆ ಸೇಡು, ತನ್ನ ರಕ್ತದೊಂದಿಗೆ ವೈರತ್ವ-ಮತ್ತ ಕತ್ಲದಲ್ಲಿ ಮಾಯ ಆದ್ಲು. ದೂರದಲ್ಲಿ ಕುದುರೆಯೊಂದು ಹೇಕರಿಸಿತು. ದಿನ್ನಿಮ್ಯಾಲ ಕುದುರೆಯೊಂದಿಗೆ ಅವಳ ದಾರಿ ಕಾಯ್ತಿದ್ದ, ಓಡುತ್ತಿರುವ ಕುದುರೆಯ ಖುರಪುಟದ ಸಪ್ಪಳ ಕೇಳಿಸ್ತು. ಅವರಿಬ್ಬರೂ ಕುದುರೆಯ ಮೇಲೆ ಹೋದರು, ಹಾಂ! ಕತ್ಲಲ್ಲಿ ಮಾಯವಾದರು.

**ಸಂತೀ:** ಅವಳು ಇನ್ನೆಂದೂ ತಿರುಗಿ ಬರೋದಿಲ್ಲ. ಎಂದೂ ಇಲ್ಲ. ಒಂದು ವರ್ಷ ಕಳದು ಹೋತು, ಅವಳ್ದು ಯಾವ ಸುದ್ದೀನೂ ಇಲ್ಲ. ಈಗ ಈ ವಿಷಯ ಊರಲ್ಲಿ ಯಾರಿಗೂ ನೆನಪು ಕೂಡ ಇಲ್ಲ.

**ಕಾಕೂ:** ನನ್ನ ರಕ್ತದಾಗ ಆ ಘಟನೆ ಮುಳ್ಳಿನ್ಹಾಂಗ ಒತ್ತತೈತಿ.

**ಸಂತೀ:** ಆದರ ನನ್ನ ರಕ್ತದಾಗ ಅದು ಕೂಡಿ ಹೋಗೇದ.

**ಕಾಕೂ:** ವಿಷದ್ಹಂಗ.

**ಸಂತೀ:** ಇಲ್ಲ, ನನ್ನ ರಕ್ತದ್ಹಾಂಗ.

**ಕಾಕೂ:** ಅದಕ್ಕ ನಿನ್ನ ರಕ್ತ ಅಶುದ್ಧ ಅದ. ಕೆಟ್ಟರಕ್ತ. ಹಂಗಂತ ನಿನ್ನ ಕಣ್ಣಾಗ, ಎದುರಾಳಿಯನ್ನ ಆಹ್ವಾನಿಸುವ ಶಕ್ತಿ ತೋರ್ತದ. ನಿನ್ನ ಬುದ್ಧೀನ ಯಾರೋ ಕೆಡಿಸ್ಯಾರ.

**ಸಂತೀ:** ನಿನಗ ಎಲ್ಲದೂ ತಿರುವು-ಮುರುವು ಕಾಣಸ್ತದ. ಅದಕ್ಕ ನಾನೇನ ಮಾಡ್ಲಿ? ಎಲ್ಲ ಸಮಯದಲ್ಲೂ ರೇಗ್ತಾನ ಇರ್ತಿ. ನಿನ್ನ ಮನಸ್ಸಿನ ಮ್ಯಾಲ ಸಿಟ್ಟಿನ ಕಪ್ಪ ಮೆತ್ತೇದ. ಹಂಗಂತ ನಿನಗ ಏನೂ ಕಾಣಿಸುವುದಿಲ್ಲ.

**ಕಾಕೂ:** ನನಗ ಎಲ್ಲದೂ ಕಾಣಸ್ತದ.

**ಸಂತೀ:** ಕಾದ ಕಬ್ಬಿಣದ ಚೂರುಗಳು ಹಾರಿ-ಹಾರಿ ನಿನ್ನ ಶರೀರದಲ್ಲಿ ಒಂದಾಗಿವೆ. ಹಗಲು-ರಾತ್ರಿ ಕಬ್ಬಿಣ ಬಡ್ದು ಬಡ್ದೂ ನೀನೂ ಕಬ್ಬಿಣ ಆಗೀದಿ. ನಿರ್ದಯಿ ದಯಾಹೀನ-ಹತ್ತೊಂಬತ್ತು ವರುಷ ಸುತ್ತಿಗೆಯ ಆಶ್ರಯ ಹೀನ ಹೊಡೆತಗಳು ನನ್ನ ಮನಸನ್ನೇ ಮುರಿದಿಕ್ಕಿವೆ. ಪೂರ್ಣ ಹತ್ತೊಂಬತ್ತು ವರ್ಷ!

**ಕಾಕೂ:** ಆರಿದ ಕಿಡಿಗಳನ್ನ ಮತ್ಯಾಕ ಕೆದರ್ತಿ?

**ಸಂತೀ:** ಯಾಕ ಕೆದರಬಾರ್ದು? ಈ ಬೆಂಕಿ ಎಂದೂ ತಣ್ಣಗಾಗಿಲ್ಲ, ಇದರ ಕೆಳಗ ಯಾವಾಗಲೂ ಕಿಡಿಗಳು ಬೆಂಕಿ ಉಗುಳುತ್ತಲೇ ಇವೆ. ಬೈಣೋ ಮನೆಯಲ್ಲಿದ್ದಾಗ ಇಬ್ಬರು ಹೆಂಗಸರು ನನ್ನೊಳಗಿರುತ್ತಿದ್ದರು. ಇಬ್ಬರೂ ಒಬ್ಬರಿಗೊಬ್ಬರು ವೈರಿಗಳು. ನನ್ನ ರಕ್ತನ ನನ್ನ ಕಚ್ಚತ್ತಿತ್ತು. ಬೈಣೋ ನನ್ನ ಸವತಿಯಾಗಿದ್ಲು. ಆದ್ರ ಈಗ ನನಗ ಅನಸ್ತದ, ಇದು ನನ್ನ ಹೊಟ್ಟೆಯೊಳಗಿನ ಧ್ವನಿಯಾಗಿತ್ತು ಅಂತಾ. ಅವಳು ಸರಿ ಇದ್ಲು, ನಾನ ತಪ್ಪು ಹಾದಿಯಲ್ಲಿದ್ದೆ. ಅವಳು ನಾನು ಮಾಡದ್ದನ್ನ ಪೂರ್ತಿಮಾಡಿದ್ಲು, ನನ್ನಲ್ಲಿ ಸುಪ್ತವಾಗಿದ್ದ ಭಾಗ್ಯವನ್ನು ಎಚ್ಚರಿಸಿದಾಕೆ. ನಾನು, ನನ್ನ ಮಗಳಿಂದ ನನ್ನಿಂದಾಗದ್ದನ್ನು ಪೂರ್ತಿ ಮಾಡಿಕೊಂಡೆ. ಬೈಣೋ ನನ್ನದೇ ರೂಪವಾಗಿದ್ದಳು.

**ಕಾಕೂ:** ಸೇಡು ತೀರಿಸಿಕೊಳ್ಳುವ ರಕ್ತ. ಲಜ್ಜೆ-ನಾಚಿಕೆಯಿಲ್ಲದ ಮಕ್ಕಳು.

**ಸಂತೀ:** ನೀನು ಆಕೀನ ಹೆದರಿಕೆಯಲ್ಲಿಟ್ಟಿ, ಸಿಟ್ಟುಮಾಡಿ, ಹೆದರಿಕೆ ಹಾಕಿ, ಧಮಕಿ ಹಾಕಿದೆ. ಈ ಯಾತನೆ ಆಕಿ ಸಹಿಸಿಕೊಳ್ಳಲಿಲ್ಲ, ಅಂತಾ ಬಂಡುಗಾರ್ತಿ ಆದ್ಲು. ಅವಳು ನನಗ ಆಹ್ವಾನ ನೀಡಿದ್ಲು. ನಿನ್ನ ಅಹಂಕಾರ ಚೂರು ಚೂರು ಮಾಡಿದ್ಲು. ನೀನು ಅವಳ ಈ ತಪ್ಪನ್ನು ಎಂದೂ ಕ್ಷಮಿಸಲಿಲ್ಲ. ಈಗ ನೀನು, ಆ ಸೇಡು ನನ್ನ ಮ್ಯಾಲ ತೀರಿಸಿಕೊಳ್ತಾಯಿದ್ದಿ. ಆದ್ರ ನಿನ್ನ ಈ ಇಚ್ಛೆ ಎಂದೂ ಪೂರ್ಣವಾಗಲಾರದು. ನನ್ನ ಮ್ಯಾಲ ಕೈಮಾಡಿದ್ರ ನೋಡು, ಎಚ್ಚರಿಕೆ. (ಮಗ್ಗಲ ಮನೆಯಾಕೆ ಬರುತ್ತಾಳೆ.)

**ಮಗ್ಗಲಮನೆಯಾಕೆ:** ನನಗ ಸ್ವಲ್ಪ ಹಾಲು ಬೇಕಾಗಿತ್ತು.

**ಕಾಕೂ:** ಯಾತಕ್ಕಾಗಿ ?

**ಮಗ್ಗಲಮನೆಯಾಕೆ:** ದೊಡ್ಡ ಹುಡುಗಿ ಗಂಡನ ಮನೆಯಿಂದ ಅತಿಥಿಗಳು ಬಂದಾರ.

**ಕಾಕೂ:** ಸಂತೀಗೆ ಕೇಳು. (ದೀಪಾ ಓಡುತ್ತಾ ಬರುತ್ತಾನೆ.) ಎಲ್ಲಿಗೆ ಹೋಗಿದ್ದಲೆ ? ಯಾವಾಗಲೂ ಓಣ್ಯಾಗ ಗುಂಡು, ಗಜಗ, ಕವಡಿ, ಅಖರೋಟ ಆಡ್ತಾ ಇರ್ತೀಯಾ ? ಇಲ್ಲಿ ಕುಂದ್ರು, ಕೆಲಸ ಮಾಡು. ಕೆಲಸ ಕಲಿ, ಇಲ್ದಿದ್ರ ಹೊಡೆತ ತಿಂತಾ ತಿರಗಬೇಕಾದೀತು. ಕೊಡು ತಂಡಾಸ, ತಿದಿ ಜಗ್ಗು.

**ಮಗ್ಗಲಮನೆಯಾಕೆ:** ಹಾಲು ಬೇಕಿತ್ತು, ಮಗ್ಗಲ್ದವರ್ನ ಕೇಳ್ದ ಇನ್ನಾರ್ನ ಕೇಳ್ಲಿ.

**ಸಂತೀ:** ಭಾಂಡೆ ಇಲ್ಲಿಟ್ಟು ಹೋಗು ನಾನು ಹಾಲು ಹಿಂಡಿ ದೀಪಾನ ಜತೆಗೆ ಕಳಿಸ್ತೀನಿ. (ಪಕ್ಕದ ಮನಿಯಾಕೆ ಹೋಗುತ್ತಾಳೆ.)

**ಕಾಕೂ:** ಕತ್ಲ ಆಗೋದರೊಳಗ ರೊಟ್ಟಿ ಮಾಡಿಕೋ. ಮಳೆಗಾಲ. ಮಳಿಹುಳ ಬೆಂಕಿಗೆ ಬಂದ ಬೀಳ್ತಾವ. ನೀನು ಇನ್ನೂವರೆಗೂ ಹಾಲೂ ಹಿಂಡಿ ಕೊಂಡಿಲ್ಲ. ಕೊಟ್ಟಿಗ್ಯಾಗ ಆಕಳ ಒದರಾಕ ಹತ್ತೈತಿ. ಹೋಗು, ಮೊದಲು ಹಾಲು ಹಿಂಡಿಕೊಂಡು ಬಾ. ಜಲ್ದಿ ಬಾ.

**ಸಂತೀ:** ಒಲಿಮ್ಯಾಲ ಬ್ಯಾಳೀಗ ಇಟ್ಟೀನಿ. ಸೌಟ ಆಡಿಸು, ಬ್ಯಾಳಿ ಸುಟ್ಟು ಹೋಗದಿರ್ಲಿ. ಹಾಲು ಹಿಂಡಿಕೊಂಡು ಜಲ್ದಿ ಬರ್ತೀನಿ. (ಸಂತೀ ಹಾಲಿನ ಭಾಂಡೆ ತಗೊಂಡು ಹೋಗುತ್ತಾಳೆ. ಅವಳ ನಡಿಗೆಯಲ್ಲಿ ಹೊಸ ಶಕ್ತಿ, ಹೊಸ ವಿಶ್ವಾಸ ಮೂಡೇದ. ಈಗವಳು ಮೊದಲ ಅಂಕದಲ್ಲಿ ಬೈಣೋ ಹೊದ್ದ ಮೇಲುಹೊದಿಕೆಯನ್ನೇ ಹೊದ್ದಿದ್ದಾಳೆ.)

(ಚಮ್ಮಾರ ಹಾಗೂ ಕಟುಕ ಬರುತ್ತಾರೆ)

**ಕಾಕೂ:** ಕೆಲಸ ಮುಗಿಸಿ ಬಂದರೇನು, ಬರ್ರಿ.

**ಚಮ್ಮಾರ:** ನಿನ್ನ ಜತಿಗೆ ಹುಕ್ಕಾ ಸೇದನ ಅಂತಾ ಬಂದ್ವಿ.

**ಕಾಕೂ:** ಅಲ್ಲೇ ಐತಿ ತಗೊಳ್ರಿ. ನಾನು ಸ್ವಲ್ಪ ಈ ಮುಂಜಣ ಸರಿಮಾಡ್ತೀನಿ.

**ಚಮ್ಮಾರ:** ತಂಬಾಕಿನ ಚೀಲ ಎಲ್ಲೈತಿ ?

**ಕಾಕೂ:** ಅಲ್ಲೆ ಗೂಟಕ್ಕ ಐತಿ. ನೀರು ಬದಲಿಸು, ನಳಿಕಿನ ಸರಿಯಾಗಿ ತೊಳಕೊ. ಕುಲುಮ್ಯಾಗ ಕೆಂಡ ಬೇಕಾದಷ್ಟು.

**ಚಮ್ಮಾರ:** ಭೂಮಿ ನೀರು ಕುಡ್ದು ಕುಡ್ದು ಹಸಿಯಾಗೇದ. ಈ ಸಲ ಪೀಕ ಬಹಳ ಛಲೋ ಬರ್ತದ. ಎಲ್ಲಿ ನೋಡಿದರೂ ಸಜ್ಜೆ ಸಜ್ಜೆ, ಹೊಲದಾಗ ದಂಟು ತೂನೆದಾಡ್ತಾವ.

**ಕಾಕೂ:** ಬಹಳ ಮಳಿ ಈ ಸಲ. ಮೂರುದಿನ ಕುಲುಮಿ ಹಚ್ಚಾಕ ಆಗಲಿಲ್ಲ. ಕುಲುಮಿ ಎಲ್ಲ ಕೆಟ್ಟು ಹೋಗಿತ್ತು. ಮತ್ತ ಸಾರಿಸಿ ಮಾಡಿ ತಯ್ಯಾರ ಮಾಡ್ದೆ. ಆಗ ಕೆಲಸ ಸುರುವಾಯ್ತು. ದೀಪಾ, ತಿದಿ ಜೋರ ಜಗ್ಗು.

ದೀಪಾ: ತಿದಿ ಚರ್ಮ ಹರ್ದದ. ಅಪ್ಪ, ಇದರೊಳಗಿಂದ ಗಾಳಿ ಹೊರಡ್ತದ.

ಕಾಕೂ: ಎಲ್ಲಿ ?

ದೀಪಾ: ಇಲ್ಲಿ ನೋಡು. ಇಲಿ ಕಡ್ಡದ.

ಕಾಕೂ: ಈ ಸಲ ಹೊಸ ತಿದಿ ತಗೋಳ್ಳೋಸಿ, ನಿನ್ನ ಹತ್ರ ಯಾವದರ ಚರ್ಮ ತಯ್ಯಾರ ಅದ ಏನು ? ನಿನ್ನೆ ಆರು ಚರ್ಮ ಸಾಫ ಮಾಡಿದ್ದಿ, ಉಪ್ಪ ಹಚ್ಚಿ ಒಣಗಾಕ ಹಾಕಿದ್ದಿ... ಇತ್ಲಾಗಟ್ಟು ಹುಕ್ಕಾ ತಾ.

ದೀಪಾ: ಅಪ್ಪ, ನಾನು ಈ ತುಂಡು ಹಣ್ಯು ತೋರಸ್ಲಾ ? ಕುಲುಮ್ಯಾಗ ಕಾದು ಕೆಂಪಗ ಆಗೇತಿ.

ಕಾಕೂ: ನನ್ನ ಜಗಾದಾಗ ಕುಂದ್ರು ಮತ್ತ ಇದನ್ನ ಹಣಿ. ನಾನು ತಿದಿ ಜಗ್ಗತೀನಿ. ಹೀಂಗ ಕೆಲಸ ಕಲೀತಾರ. ಎಡಗೈಯಿಂದ ಚಿಮಿಟಗಿ ಹಿಡಿ, ಬಲಗೈಯಿಂದ ಸುತ್ತಿಗಿ ತಕೊಂಡು ಏಟು ಹಾಕು. ಹಾಂ! ಹಾಂಗ....

(ದೀಪಾ ಸ್ಥಳ ಬದಲಿಸುತ್ತಾನೆ.)

ದೀಪಾ: ನಾನು ಇದನ್ನ ಹಣದು, ಈಗಲೇ ಸೀದಾ ಮಾಡಿ ಬಿಡ್ತೀನಿ.

ಚಮ್ಮಾರ: ಪ್ರತಿಯೊಂದು ವಸ್ತು ದುಬಾರಿಯಾಯ್ತು. ಕಬ್ಬಿಣಕ್ಕೂ ಬಂಗಾರದ ಧಾರಣೆ ಆಯ್ತು. ಮೊದಲಿನಂತ ಮಳಿ ಸಹಿತ ಸಿಗೋದಿಲ್ಲ.

ಕಾಕೂ: ಮೊದಲು ಏನಿತ್ತು ? ಬೆಳಗಿನಿಂದ ಹಿಡ್ದು ಸಂಜೆಯುವರಿಗೂ ಕಬ್ಬಿಣ ಹಣದರೂ ಎರಡು ಹೊತ್ತಿನ ಕೂಳು ಸಿಗ್ತಿರಲಿಲ್ಲ. ಆದ್ರ ಈಗ....

ಚಮ್ಮಾರ: ಆದ್ರ ಈಗ, ಸಾಮಾನುಗಳ ಬೆಲೆ ಏರ್ತಾ ಇದೆಯಲ್ಲ.

ಕಾಕೂ: ಹಣ ಹತ್ರ ಇದ್ರ ಪ್ರತಿಯೊಂದು ವಸ್ತುನೂ ಸಸ್ತಾನ. ಮೊದಲು ಕೂಲಿಯುರ ಏಟಿತ್ತು ? ಈಗ ಏನು, ಸಿಸ್ತಾಗಿ ಕೂಲಿ ತಗೊಂತಾರ.

ಕಟುಕ: ನಾನು ನನ್ನ ಮಗನ್ನ ಓದಾಕ-ಗೀದಾಕ ಕಳಸೋದಿಲ್ಲ. ಓದಿನಾಗ ಏನ ಇಟ್ಟೈತಿ ? ಹಿಂಗ ಬುದ್ಧಿಯಲ್ಲ ಹಾಳಾಗಿ ಹೋಗತೈತಿ. ಇತ್ಲಾಗೂ ಅಲ್ಲ, ಅತ್ಲಾಗೂ ಅಲ್ಲ. ಈಗಿನಿಂದಲೇ ನನ್ನೊಂದಿಗೆ ಕೆಲಸಕ್ಕ ಕರಕೊಂಡೀನಿ.

ಕಾಕೂ: ದೀಪಾನೂ ಮೂರು-ನಾಲ್ಕು ವರ್ಷದೊಳಗ ಪೂರ್ಣ ಕೆಲಸ ಕಲಕೋತಾನ. ಓ! ದೀಪಾ ? ಒಳಗಿನಿಂದ ಸಣ್ಣಪಾತ್ರಿ ತಗೊಂಡು ಬಾ, ಇಲ್ಲೇ ಕುಲುಮ್ಯಾಗ ಚಹಾಕ್ಕ ಇಡು.

(ದೀಪಾ ಪಾತ್ರೆಯೊಳಗ ನೀರು ತುಂಬಿಕೊಂಡು ಬಂದು ಕುಲುಮಿಯೊಳಗ ಬೆಂಕಿ ಮೇಲೆ ಇಡುತ್ತಾನೆ. ಇಟ್ಟನಂತರ ಕುಳಿತುಕೊಳ್ಳುತ್ತಾನೆ.)

ಕಟುಕ: ಚಹಾ ಕಡಿಮಿ ಕುಡಿ. ಚಹಾ ಕುಡ್ದು ಕುಡ್ದು ಒಳಗ ನಿನ್ನ ಹೊಟ್ಟೆಯಲ್ಲ ಕರ್‍ರಗ ಆಗಿರಬೇಕು. ನಿನ್ನ ಹುಂಜ ಎಲ್ಲಿ ?

ಕಾಕೂ: ಪುಟ್ಟಿಯೊಳಗ ಮಲಗೇದ.

ಚಮ್ಮಾರ: ಬೈಣೋ ಎಲ್ಲಿ ಅದಾಳ, ಏನಾರ ಗೊತ್ತಾತೇನು ?

**ಕಾಕೂ:** ಇಲ್ಲ.

**ಚಮ್ಮಾರ:** ಹೆಣ್ಣಿನ ನಲಿನ ಸಿಗೋದಿಲ್ಲ.

**ಕಾಕೂ:** ನಾವು ಕಬ್ಬಿಣ ಕರಗಿಸಿ ಮೆತ್ತಗ ಮಾಡ್ತೀವಿ. ಹ್ಯಾಂಗ ಬೇಕ ಹಾಂಗ ಮನಸ್ಸಿಗೆ ಬಂದ್ಹಾಂಗ ತಿರುವುತೀವಿ. ಆದ್ರ ಹೆಣ್ಣಿನ ಮನಸ್ಸನ್ನ ಯಾರಿಗೂ ಕರಗಿಸಲಿಕ್ಕ ಆಗೋದಿಲ್ಲ. ಅದು ಯಾವಾಗ, ಎತ್ಲಾಗ ಹೊಳ್ಳತದ, ಅಂಬೋದ ಗೊತ್ತಾಗೋದಿಲ್ಲ. ಹೆಣ್ಣಿನ ಮನಸ್ಸು ಯಾವ ಕಬ್ಬಿಣದಿಂದ ಆಗೇದ ಏನ!

**ದೀಪಾ:** ಅಪ್ಪ ಚಹಾ ಆತು.

**ಕಾಕೂ:** ಎಲ್ಲರಿಗೂ ಗ್ಲಾಸನ್ಯಾಗ ಹಾಕಿಕೊಡು.
(ಮೂವರೂ ಚಹಾ ಕುಡಿಯುತ್ತಾರೆ.)

**ಕಾಕೂ:** ಮಗು, ದೀಪಾ ಮುದಸು ಕತ್ಲಾಗಾಕ ಹತ್ತೇದ.
(ಮಗ್ಗಲಮನೆಯಾಕೆ ಬರುತ್ತಾಳೆ.)

**ಮಗ್ಗಲಮನೆಯಾಕೆ:** ಪೂರ್ವದಿಂದ ಮೋಡ ಒತ್ತರಿಸಿ ಬರಾಕ ಹತ್ಯಾವ. ಕಪ್ಪ ಮೋಡ.

**ಕಟುಕ:** ಪ್ಲುಂ ಹನೀನೂ ಉದರಾಕ ಹತ್ಯಾವ. ನಾನು ಚರ್ಮ ಹೊರಗ ಹಾಕಿ ಬಂದೀನಿ. ಮತ್ತ ತೊಯ್ಯಬಾರದು.
(ಕಟುಕ ಮತ್ತು ಚಮ್ಮಾರ ಹೋಗುತ್ತಾರೆ.)

**ಕಾಕೂ:** ಎಲ್ಲಿಂದ ಬಂದಿ? ಇಷ್ಟಾಕ ಉಸಿರಬಿಡಾಕ ಹತ್ತೀದಿ, ಒಂದೇ ಸವನ ತೇಕಾಕ... ತೇಕಾಕ ಹತ್ತೀದಿ.

**ಮಗ್ಗಲಮನೆಯಾಕೆ:** ಪ್ಯಾಟಿಗೆ ಹೋಗಿದ್ದೆ. ಕರಕ್ಕ ಕಾಳು ತಂದೆ. ಉಪಾಸ ಇತ್ತು. ನನ್ನ ಭಾಂಡೆದಾಗ ಹಾಲು ಹಾಕ್ಲಿ?

**ಕಾಕೂ:** ಇನ್ನು ಸಂತೀ ಹಾಲು ಹಿಂಡಿಕೊಂಡು ಬಂದಿಲ್ಲ. ಬಹಳ ಹೊತ್ತು ಆತು ಆಕಿ ಹೋಗಿ, ನೀನು ಹೋಗ್ತಾ ಕಳಿಸು.

**ಮಗ್ಗಲಮನೆಯಾಕೆ:** ಎಲ್ಲಿಂದ?

**ಕಾಕೂ:** ಕೊಟಿಗ್ಯಾಗಿಸಿಂದ.

**ಮಗ್ಗಲಮನೆಯಾಕೆ:** ಆಕಿ ಅಲ್ಲಿಲ್ಲ.

**ಕಾಕೂ:** ಅಲ್ಲೇ ಹೋಗ್ಯಾಳ ಹಾಲು ಹಿಂಡ್ಲಾಕ.

**ಮಗ್ಗಲಮನೆಯಾಕೆ:** ನಾನು, ಅಶ್ವತ್ಥಮರದ ಕೆರಿಪತ್ರ ಆಕಿ ಹೋಗೋದನ್ನ ನೋಡ್ದೆ.

**ಕಾಕೂ:** ಏನು?

**ಮಗ್ಗಲಮನೆಯಾಕೆ:** ಆಕಿ ಜಲ್ದಿ-ಜಲ್ದಿ ಹೊಂಟದ್ದು. ನನ್ನ ತಲೀಮ್ಯಾಲ ಕಾಳಿನ ಗಂಟ ಇತ್ತು. ಆಕಿ ಹೋಗೋದನ್ನ ನೋಡ್ದೆ. ಆಕಿ ಸಜ್ಜಿ ಹೊಲ್ದಾಗ ಹೋಗಿ ಮರಿ ಆದ್ಲು.

**ಕಾಕೂ:** ಸುಳ್ಳು..... ಆಕಿ ಕೊಟಿಗ್ಯಾಗ ಹಾಲು ಹಿಂಡಾಕ ಹೋಗ್ಯಾಳ.

**ದೀಪಾ:** ಆಕಳ ಹಿಂಡಾಕ ಹೋಗ್ತೀನಿ ಅಂತಾ, ಆಕಿ ಅಂದಿದ್ಲು. ಇಲ್ಲಿವರೆಗೂ ಬೈಕೋ ನನ್ನ ಕೆಲಸ ಮಾಡತಿದ್ಲು, ಇವತ್ತ ನಾ ಬೈಕೋನ ಕೆಲಸ ಮಾಡಾಕ ಹೋಗ್ತೀನಿ-ಅಂತಾನು ಹೇಳಿದ್ಲು.

**ಕಾಕೂ:** ಬೈಕೋನ ಕೆಲಸ... ನಾನು ಹೋಗಿ ಕರಕೊಂಡು ಬರ್ತೀನಿ ಅವಳ್ನ.

**ದೀಪಾ:** ಅಪ್ಪ, ಕಬ್ಬಿಣ ಕಾದದ.

**ಕಾಕೂ:** ಹೋಗ್ತೀನಿ, ಅವಳ್ನ ಕರಕೊಂಡು ಬರ್ತೀನಿ. (ಹೊರಗೆ ಹೋಗುತ್ತಾನೆ.)

**ದೀಪಾ:** ದೊಡ್ಡವನಾದ ಮೇಲೆ ದೊಡ್ಡ ದೊಡ್ಡ ಕತೆ ಮಾಡ್ತೀನಿ. ಒಂದ್ಸಲ ತಮಾಷೆ ನೋಡಿದ್ದ. ದೊಡ್ಡ ಸಳಿಯೊಳಗ ಚೂರಿ, ಚಾಕು ಸುತ್ತರ್ದ ಇದ್ದವು. ಆಟಗಾರನ ಮಗ ಅದರೊಳಗಿಂದ ಹಾರಿ ಹೊರಗ ಬಂದ.

**ಮಗ್ಗಲಮನೆಯಾಕೆ:** ನೀನೂ ನಿನ್ನಪ್ಪನ ಹಂಗ ಕೆಲಸಗಾರನಾಗ್ತಿ. ನಿನಗ, ಹುಟ್ಟಿದಾಗ ನಾನಃಘುಟ್ಟಿ ಕುಡಸಿದ್ನಿ. ಈ ಊರಿನ ಗಂಡಸರು ರಂಟಿ ಕುಂಟಿ ಹೊಡೀತಾರ, ಕಬ್ಬಣ ಹಣಿತಾ ಇರ್ತಾರ, ಹೆಂಗಸರ ಎದಿಮ್ಯಾಲ ಬೆಂಕಿ ಉರಿತದ ಮತ್ತ ಅವರು ಇದ ಬೆಂಕ್ಯಾಗ ಸುಟ್ಟು ಹೋಗ್ತಾರ.

(ಕಾಕೂ ಬರುತ್ತಾನೆ.)

**ಕಾಕೂ:** ಕೊಟಿಗ್ಯಾಗ ಇದ್ದಿಲ್ಲ ಆಕಿ, ಮತ್ತ ಗಜ್ಜಣನೂ ತನ್ನ ಮನಿಯಾಗಿಲ್ಲ.

**ಮಗ್ಗಲಮನೆಯಾಕೆ:** ಆಕಿ ಹೋದ್ಲು ಹಂಗಾರ. (ಹೋಗುತ್ತಾಳೆ.)

**ದೀಪಾ:** ಅಪ್ಪ ಕುಲುಮಿ ಬೆಂಕಿ ಆರಿಹೋತು.

**ಕಾಕೂ:** ಅವಳು ಗಜ್ಜಣನೊಂದಿಗೆ ಹೋದ್ಲು. ಮ್ಯಾಲೆ ಕತ್ಲ ಆತು. ಅವಳೂ ಬೈಕೋನ ಕೆಲಸ ಮಾಡಾಕ ಹೋಗ್ಯಾಳ. (ಚೀರುತ್ತ) ಬೈಕೋ..... ನಾಚಿಗ್ಗೇಡಿ. ಹಲ್ಕಟ್ಟ, ಕೆಟ್ಟರಕ್ತ. ನಾನು ಅವಳ ಹಿಂದೆ ಹೋಗೋದಿಲ್ಲ. ಬಾಗಿಲಹಾಕಿ, ಚಿಲಕ ಹಾಕಿಬಿಡು ದೀಪಾ.

**ದೀಪಾ:** ಚಿಲಕ ಹಾಕಾಕ ಬರುವಲ್ದು.

**ಕಾಕೂ:** ಹಂಗಾರ ನಾನು ಹಾಕ್ತೀನಿ (ಚಿಲಕ ಹಾಕುತ್ತಾನೆ.)

**ದೀಪಾ:** ಅಪ್ಪ. ಅಡಿಗಲ್ಲ ಮ್ಯಾಲ ಇಟ್ಟ ಕಬ್ಬಿಣ ಥಣ್ಣಗಾತು.

**ಕಾಕೂ:** ನಾನು ಹಣಿತೀನಿ ಇದನ್ನ. ಅರೆ ಥಣ್ಣಗಾಗೇದ ಇದು.... ಹಣಿಯಾಕ ಆಗೋದಿಲ್ಲ. (ಬಾಗಿಲ ಬಡಿದ ಶಬ್ದ)
ಯಾರವರು ?

**ಧ್ವನಿ:** ನಾನು

**ಕಾಕೂ:** ಗಜ್ಜಣ ?

**ಧ್ವನಿ:** ಅಲ್ಲ. ನಿನ್ನ ಗೆಳೆಯ, ಚಮ್ಮಾರ.

**ಕಾಕೂ:** ಇಲ್ಲ, ಇಲ್ಲ, ನಾನು ಕಬ್ಬಿಣ ಹಣಿಯಾಕ ಹತ್ತೀನಿ. ಕೆಲಸಾ ಮಾಡಾಕ ಹತ್ತೀನಿ.

**ಚಮ್ಮಾರ:** ಚಿಲಕ ತಗಿ.

**ಕಾಕೂ:** ನೀನು ಹೋಗು, ನಾನೀಗ ಕೆಲಸ್ದಾಗ ಅದೀನಿ. ನನಗ ಈಗ ಮಾತಾಡೋದು ಬ್ಯಾಡ. ಬಾ ದೀಪಾ, ನನ್ನ ಹತ್ರ ಕೂಡು.
(ದೀಪಾ ತಿದಿ ಜಗ್ಗುತ್ತಾನೆ. ಮತ್ತು ಕಾಕೂ ಕೆಂಪು ಕತ್ತಲಲ್ಲಿ ಕಬ್ಬಿಣ ಹಣಿಯುತ್ತಾನೆ.)

**–ಪರದೆ–**

## ಪಾತ್ರಗಳು

ಚೇತನ
ದಮಯಂತಿ
ಶೇಖರ
ರೋಮಾ
ಆಯಾ
ರಾಮು
ಕೈಲಾಶ
ಕಮಲಾ
ಪ್ರೇಮ
ಹುಸನಾ
ಡಾಕ್ಟರ

## ಪ್ರಥಮ ದೃಶ್ಯ

ಒಂದು ದೊಡ್ಡ ಮನೆ. ದಿವಾನಖಾನೆಯ ಬಾಗಿಲು ಮುಚ್ಚಿದೆ. ಹೊರಗಿನ ಪಡಸಾಲೆಯಲ್ಲಿ ಉಪ್ಪರಿಗೆಯ ಮೇಲೆ ಹೋಗಲು ಮೆಟ್ಟಲುಗಳಿವೆ. ಕೆಳಗಿನ ಕೋಣೆಗಳ ಗೋಡೆಗಳಲ್ಲಿ ಎದುರಿಗೆ ಮತ್ತು ಎಡ-ಬಲಕ್ಕೆ ಬಾಗಿಲುಗಳಿವೆ. ಮುಚ್ಚಿರುವ ದಿವಾನಖಾನೆ ಅಮೂಲ್ಯವಾದ ರತ್ನಗಂಬಳಿಗಳಿಂದ ಬೆಲೆಯುಳ್ಳ ಸೋಫಾಗಳಿಂದ ಸುಸಜ್ಜಿತವಾಗಿದೆ. ಒಂದು ರೀತಿಯ ದುಂಡುಕೋಣೆಯಿದ್ದ ಹಾಗಿದೆ. ವಾಸ್ತವವಾಗಿ ನೋಡಿದರೆ ದುಂಡಾಗಿರುವ ಕೋಣೆ ಇನ್ನೂ ಒಳಗಿದೆ. ಅದರ ಬಾಗಿಲು ಈ ದಿವಾನ್‌ಖಾನೆಯ ಎದುರಿಗಿನ ಗೋಡೆಯಲ್ಲಿದೆ. ಈ ಮುಚ್ಚಿದ ದಿವಾನ್‌ಖಾನೆಯಲ್ಲಿ ಒಂದೆಡೆ ಪಿಯಾನೋ ಇರಿಸಲಾಗಿದೆ. ಒಂದು ಶೆಲ್ಫ್‌ದಲ್ಲಿ ಪುಸ್ತಕಗಳಿವೆ. ಇನ್ನೊಂದೆಡೆ ಮಗುವಿನ ಆಟಿಕೆಗಳಿವೆ.

(ತೆರೆ ಎತ್ತಿದ ಕೂಡಲೇ ಏಳು-ಎಂಟು ವರ್ಷದ ಓರ್ವ ಬಾಲಕ ದೂರವಾಣಿ ಡಾಯಲ್ ತಿರುಗಿಸುತ್ತ ಯಾವುದೋ ಸಂಖ್ಯೆಯನ್ನು ಕೂಡಿಸುತ್ತಿದ್ದಾನೆ.)

**ಚೇತನ:** (ಸಂಖ್ಯೆ ಕೂಡಿದ ಕೂಡಲೇ) ಹೆಲೋ ರೋಮಾ.... ಇದು ನನ್ನದೇ ಟೆಲಿಫೋನ್ ಎಂಬುದು ನಿನಗೆ ಹೇಗೆ ತಿಳಿಯಿತು ? ಸರಿ, ಈಗ ಜಲ್ದಿ ಹೊರಟು ಬಾ. ಓ! ನೀನೆಷ್ಟು ಹೊತ್ತು ಮಾಡಿಬಿಟ್ಟೆ! ನಿನ್ನ ಆಯಾಳನ್ನು ಜೊತೆಗೆ ಕರೆದುಕೊಂಡು ಬರಬೇಕು; ಅವಳು ನಮ್ಮ ನೌಕರನೊಂದಿಗೆ ಮಾತನಾಡುತ್ತಿರುತ್ತಾಳೆ. ನಾವು ಪ್ರತ್ಯೇಕವಾಗಿ ಕುಳಿತು ಆಟವಾಡೋಣ.... ಏನು ? ನಾನೋ... ನನ್ನದೇನು, ಈಗಲೇ ಸಿದ್ಧವಾಗುತ್ತೇನೆ.... ನನಗೇನು ತಲೆ ಬಾಚಿಕೊಂಡು ರಿಬ್ಬನ್ ಕಟ್ಟಿಕೊಳ್ಳಬೇಕಾಗಿಲ್ಲವಲ್ಲ ? ರೋಮಾ ನೀನಿಂದು ಯಾವ ಫ್ರಾಕ್ ತೊಟ್ಟಿರುವೆ ಹೇಳು ?

(ಇದ್ದಕ್ಕಿದ್ದ ಹಾಗೆ ಮೇಲಿನ ಬಾಗಿಲು ತೆರೆದಾಕ್ಷಣ ಚೇತನ ಗಾಬರಿಯಾಗಿ ಟೆಲಿಫೋನ್ ಇಟ್ಟುಬಿಡುತ್ತಾನೆ ಹಾಗೂ ದೂರ ಒಂದು ಮೂಲೆಯಲ್ಲಿರುವ ಕಟ್ಟಿಗೆಯ ಕುದುರೆಯ ಮೇಲೆ ಪತ್ತಿ ಜೇಕವಾಡುತ್ತಾನೆ. ಇಷ್ಟರಲ್ಲಿ ದಮಯಂತಿ, ಮಗುವಿನ ತಾಯಿ, ಮೂವತ್ತೈದು-ನಲವತ್ತು ವರ್ಷದವಳು, ಶೃಂಗರಿಸಿಕೊಂಡ, ಮೆಲ್ಲ

ಮೆಲ್ಲಗೆ ಮೆಟ್ಟಲು ಇಳಿದು ಬರುತ್ತಾಳೆ.)

**ದಮಯಂತಿ:** ಹೆಲೋ ಮಗು

**ಚೇತನ:** ಹೆಲೋ ಮಮ್ಮಿ

**ದಮಯಂತಿ:** ಮಮ್ಮಿಯ ಹತ್ತಿರ ಬಂದು ನಿನ್ನ ಮಮ್ಮಿಗೆ ಪ್ರೀತಿ ಮಾಡುವುದಿಲ್ಲವೇ ಮಗೂ ?

**ಚೇತನ:** ಇಲ್ಲ, ಮಮ್ಮಿಯ ಸೀರೆ ಕೆಟ್ಟುಹೋಗುತ್ತದೆ, ನಾನೋ, ಇನ್ನೂ ಸ್ನಾನ ಮಾಡಿಲ್ಲ, ಬಟ್ಟೆಗಳನ್ನು ಬದಲಿಸಿಲ್ಲ.

**ದಮಯಂತಿ:** ನಿನಗೆ ನನ್ನ ಸೀರೆಯ ಚಿಂತೆ ಇಷ್ಟೇಕೆ ?

**ಚೇತನ:** ಆ ದಿನ ನನಗೆ ಸಿಟ್ಟು ಮಾಡಿದ್ದೆಯಲ್ಲ.... ಅಂದು ನಾನು ಸ್ಕೂಲಿನಿಂದ ಬಂದವನೇ ನಿನ್ನನ್ನು ಅಪ್ಪಿಕೊಂಡಿದ್ದೆನಲ್ಲ....

**ದಮಯಂತಿ:** (ನಾಟಕೀಯ ನಗು ನಗುತ್ತ) ಅದು ಯಾವಾಗ ಮಗು ?

**ಚೇತನ:** ಆ ದಿನ, ಟೆಲಿಫೋನಿನ ಹತ್ತಿರವಿರುವ ಕುರ್ಚಿಯ ಮೇಲೆ ಕುಳಿತು ಪ್ರೇಮ ಅಂಕಲ್‌ಗಾಗಿ ನೀನು ಕಾಯುತ್ತಿರುವಾಗ....

**ದಮಯಂತಿ:** (ಸ್ವಗತ) ಅಯ್ಯೋ, ನಾನು ಸತ್ತುಹೋದೆ.... ಇವನೂ ಪ್ರೇಮನ ಬಗ್ಗೆಯೇ ಮಾತನಾಡುತ್ತಾನೆ, (ಚೇತನನನ್ನು ಕುರಿತು) ಮಗು, ಪ್ರೇಮ ಅಂಕಲ್ ತುಂಬ ಒಳ್ಳೆಯವರು, ನಿನಗಾಗಿ ಅವರೆಷ್ಟು ಸಾಮಾನು ತಂದಿದ್ದಾರೆ ಗೊತ್ತೇ ? ಟಾಫೀ ಚಾಕಲೇಟ್, ಆಟಿಕೆಗಳು, ಪುಸ್ತಕ....

**ಚೇತನ:** ನನ್ನ ಡ್ಯಾಡಿ ತಂದುಕೊಟ್ಟಿರುವ ಈ ಕುದುರೆಯೇ ನನ್ನ ಅಚ್ಚು ಮೆಚ್ಚಿನದು.

**ದಮಯಂತಿ:** ಸರಿ, ಹಾಗಾದರೆ ನೀನು ಈ ಕುದುರೆಯ ಮೇಲೆಯೇ ಸವಾರಿ ಮಾಡು ಕಟ್ಟಿಗೆಯ ಕುದುರೆ ಮೇಲೆ.... (ಟೆಲಿಫೋನ್ ರಿಸೀವರ ಎತ್ತಿ ಡಾಯಲ್ ಮಾಡಬಯಸುತ್ತಾಳೆ)

**ಚೇತನ:** ಮಮ್ಮಿ ನೀನು ಯಾರಿಗೆ ಫೋನ್ ಮಾಡುತ್ತಿರುವೆ ?

**ದಮಯಂತಿ:** ಯಾರಿಗೂ ಇಲ್ಲ, ನೀನು ನಿನ್ನ ಕೆಲಸ ಮಾಡು.

**ಚೇತನ:** ಮಮ್ಮಿ ನೀನು ಪ್ರೇಮ ಅಂಕಲ್‌ಗೆ ಫೋನ್ ಮಾಡುತ್ತಿರುವೆಯಾ ?

**ದಮಯಂತಿ:** ಇಲ್ಲ.

**ಚೇತನ:** ಹಾಗಾದರೆ ಇನ್ನಾರಿಗೆ ? (ದಮಯಂತಿ ಸುಮ್ಮನಾಗುತ್ತಾಳೆ.) ಮಮ್ಮಿ ಈಗ ತಾನೇ ಮುಸನಾ ಆಂಟಿಯ ಫೋನ್ ಬಂದಿತ್ತು, ಆಕೆ ಡ್ಯಾಡಿಯನ್ನು ಕೇಳುತ್ತಿದ್ದಳು.

**ದಮಯಂತಿ:** ಮತ್ತೆ ನೀನೇನು ಹೇಳಿದೆ ?

**ಚೇತನ:** ಡ್ಯಾಡಿ ಮತ್ತು ಮಮ್ಮಿ ಮೇಲೆ ಮಲಗಿದ್ದಾರೆ ಎಂದು ಹೇಳಿದೆ.

**ದಮಯಂತಿ:** ಡ್ರಾಯವರ ಬಂದನೋ ಹೇಗೋ ನೋಡಿ ಬಾ ಮಗು.

**ಚೇತನ:** ಆಗಲಿ ಮಮ್ಮಿ ಮಮ್ಮಿ ನಾನು ಡ್ರಾಯವರನನ್ನು ನೋಡಲು ಹೋದಾಗ ನೀನು ಪ್ರೇಮ ಅಂಕಲ್‌ಗೆ ಫೋನ್ ಮಾಡುತ್ತಿಯಾ ? (ತುಂಟತನದಿಂದ ತಾಯಿಯ ಕಡೆ ನೋಡುತ್ತಾನೆ.)

**ದಮಯಂತಿ:** ಬೊಗಳಬೇಡ; ಹೇಳಿದಷ್ಟನ್ನು ಮಾಡು... ಅದೆಷ್ಟು ವಾಚಾಳಿಯಾಗಿದ್ದಾನೆ ಇವನು!

**ಚೇತನ:** ಆಗಲಿ ಮಮ್ಮಿ ಆಗಲಿ. (ಹೋಗುತ್ತಾನೆ.)

**ದಮಯಂತಿ:** (ಬಹುಬೇಗ ಟೆಲಿಫೋನಿನ ನಂಬರ ಕೂಡಿಸಿ) ಹಲೋ. ಶೀಶಮಹಲ ಹೋಟೆಲ? ನನಗೆ ರೂಮ ನಂಬರ ಹತ್ತು ಬೇಕು... ಹಲೋ... ರೂಮ ನಂಬರ ಹತ್ತೇನು... ಹಾಂ! ನಾನು ಮಮ್ಮಿ ಕೈಲಾಶ್.... ಇಂದು ಸಾಯಂಕಾಲ ನಿನ್ನ ಪ್ರೋಗ್ರಾಮ್ ಏನು!..,. ಏನು, ಅಂಥ ವಿಶೇಷ ಕಾರ್ಯಕ್ರಮ ಏನೂ ಇಲ್ಲ.... ಹಾಗಾದರೆ ನೀನು ಕ್ಲಬ್ಬಿಗೆ ಹೋಗುವೆಯಾ?....ಏನು? ಇಲ್ಲ ಇಲ್ಲ, ನೀನು ಇಂದು ಸಾಯಂಕಾಲ ಅವಶ್ಯ ಕ್ಲಬ್ಬಿಗೆ ಹೋಗು... ಸಾಯಂಕಾಲ ನಿನ್ನ ರೂಮಿನ ಅವಶ್ಯಕತೆಯಿದೆ ನನಗೆ.... ಹಾಂ! ಏನಂದೆ?... ನನ್ನ ಫ್ರೆಂಡ್ ಒಬ್ಬರನ್ನು ಅಲ್ಲಿಗೆ ಕರೆದುಕೊಂಡು ಬರುವೆ... ನಾವಿಂದು ಅವಶ್ಯವಾದ ಒಂದು ನಿರ್ಣಯಕ್ಕೆ ಬರಬೇಕಾಗಿದೆ. ಇದಕ್ಕಾಗಿ ಹೊರಗಲ್ಲಿ ಅಲೆಯೋಣ.... ನಿನ್ನ ಕೋಣೆ ನಮ್ಮ ಮಾತುಕತೆಗೆ ಸರಿಯಾಗಿದೆಯೆಂದು ಅದನ್ನೇ ಆರಿಸಿದೆ.... ಸರಿ ಹಾಗಾದರೆ.... ನಿನ್ನ ರೂಮಿನ ಕೀಲಿ ಕೆಳಗಡೆ ರಿಶೆಪ್ಶನ್-ಕ್ಲಾರ್ಕನ ಹತ್ತಿರವೇ ಇರುತ್ತದೆ ತಾನೇ? ಓ! ತುಂಬ ಥ್ಯಾಂಕ್ಸ್.... ತುಂಬ ತುಂಬ.... ಧನ್ಯವಾದ ಕೈಲಾಶ್... (ಟೆಲಿಫೋನ್ ಬಂದ ಮಾಡಿ ಮೈ ಮುರಿಯುತ್ತಾಳೆ.)

**ಚೇತನ:** (ಬರುತ್ತ) ಡ್ರಾಯವರ ಬಂದಿದ್ದಾನೆ ಮಮ್ಮಿ.

**ದಮಯಂತಿ:** ನಾನು ಹೊರಗೆ ಹೋಗುತ್ತಿದ್ದೇನೆ ಮಗು, ನೀನು ನೌಕರನೊಂದಿಗೆ ತಿರುಗಾಡಲು ಹೋಗು.

**ಚೇತನ:** ನನ್ನನ್ನು ಕಾಣಲು ರೋಮಾ ಬರಲಿದ್ದಾಳೆ....

**ದಮಯಂತಿ:** ಏನು, ಇತ್ತೀಚೆಗೆ ರೋಮಾಳೊಂದಿಗೆ ತುಂಬಾ ದೋಸ್ತಿ ನಡೆದಿದೆ?....

**ಚೇತನ:** ಮಮ್ಮಿ ರೋಮಾ ನನಗೆ ತುಂಬ ಚೆನ್ನಾಗಿ ಕಾಣಿಸುತ್ತಾಳೆ.

**ದಮಯಂತಿ:** ನನಗೆ ಅವಳ ತಾಯಿಯೆಂದರೆ ಎಳ್ಳಷ್ಟೂ ಆಗುವುದಿಲ್ಲ, ತನ್ನನ್ನು ಸತಿ ಸಾವಿತ್ರಿ ಎಂದು ತಿಳಿದುಕೊಂಡಿದ್ದಾಳೆ, ಎಲ್ಲರ ಚಾರಿತ್ರ್ಯದ ಗುತ್ತಿಗೆ ಅವಳೇ ಹಿಡಿದಿದ್ದಾಳೆ.

**ಚೇತನ:** ಆದರೆ ಮಮ್ಮಿ ರೋಮಾನ ತಾಯಿ ರೋಮಾಳೊಬ್ಬಳನ್ನೇ ಬಿಟ್ಟು ಎಲ್ಲೂ ಹೋಗುವುದಿಲ್ಲ.

**ದಮಯಂತಿ:** ನೀನಾದರೂ ಒಬ್ಬನೇ ಎಲ್ಲಿರುವೆ? ನಿನ್ನ ಹತ್ತಿರ ರಾಮೂ ಇದ್ದಾನೆ, ಆಳು ಇದ್ದಾನೆ. ನಾನು ಡ್ರಾಯವರನನ್ನೂ ಬಿಟ್ಟು ಹೋಗುತ್ತಿರುವೆ. ಅದೂ ಅಲ್ಲದೆ ಇನ್ನೂ ನಿನ್ನ ಡ್ಯಾಡಿಯೂ ಮನೆಯಲ್ಲಿಯೇ ಇದ್ದಾರೆ.

**ಚೇತನ:** ರೋಮಾಳ ತಾಯಿ ಸ್ವತಃ ಕೂಡ ಎಲ್ಲೂ ಒಬ್ಬಳೇ ಹೋಗುವುದಿಲ್ಲವಲ್ಲ?

**ದಮಯಂತಿ:** ಅನಾವಶ್ಯಕವಾದ ಮಾತುಗಳನ್ನಾಡಬಾರದು ತಿಳಿಯಿತೇ ?

**ಚೇತನ:** ಮಮ್ಮಿ, ನೀನು ತಿರುಗಿ ಬರುವುದು ಯಾವಾಗ ?

**ದಮಯಂತಿ:** ಬಂದು ಬಿಡುತ್ತೇನೆ.... ದಿನವೂ ಬಂದ ಹಾಗೆ.

**ಚೇತನ:** ಮಮ್ಮಿ, ನನಗೇನು ತರುತ್ತಿ ? ಪ್ರೇಮ ಅಂಕಲನನ್ನು ತರಬೇಡ.

**ದಮಯಂತಿ:** (ಕಾಂತಿಹೀನ ನಗೆ ನಗುತ್ತ) ನೀನು ತುಂಬ ಶೈತಾನ ಆಗಿರುವೆ. ಸರಿ, ಸಣ್ಣ ಕಾರು ಹೊರತರಲು ಡ್ರಾಯವರನಿಗೆ ಹೇಳು, ನನಗೆ ತಡವಾಗುತ್ತಲಿದೆ.

**ಚೇತನ:** ಆಗಲಿ ಮಮ್ಮಿ (ಹೊರಹೋಗುತ್ತಾನೆ.)

**ದಮಯಂತಿ:** ಪ್ರೇಮ ಅಂಕಲ್, (ಒಂದು ಪ್ರಕಾರದ ಉನ್ಮಾದದಿಂದ ಅವಳ ಮುಖ ಅರಳುತ್ತದೆ) ಪ್ರೇಮ ಅಂಕಲನನ್ನು ಇಲ್ಲಿಗೆ ತರುವುದಿಲ್ಲ, ನಾನು ಸ್ವತಃ ಅವನಿದ್ದಲ್ಲಿಗೆ ಹೊರಟು ಹೋಗುತ್ತೇನೆ ಇಂದು, ಇಂದು ನಾವು ನಿರ್ಣಯ ಮಾಡಿಕೊಳ್ಳುತ್ತೇವೆ. ಆಹ! ಈ ಸಂಸಾರ ಅದೆಷ್ಟು ಸುಂದರವಾಗಿದೆ! ನಾನು ಮತ್ತೆ ಮಧುವಣಗಿತ್ತಿಯಾಗಬೇಕು. ಮತ್ತೆ ನನ್ನ ಕೈಯಲ್ಲಿ ಮದರಂಗಿಯು ರಂಗು ರಂಗು.... ಕಾಲು ಕೂಡ ಬಣ್ಣದಿಂದ ಕಂಗೊಳಿಸುತ್ತವೆ.... ಮತ್ತೊಮ್ಮೆ ಕೈತುಂಬ ಬಳೆಯು ಝಣಝಣ ಸಪ್ಪಳ.... ನಾನು ನಿಂತಲ್ಲಿ ಹಾಗೂ ಕುಳಿತಲ್ಲಿ ಮತ್ತೆ ಬಳೆಯ ಸಪ್ಪಳ.... ಮತ್ತೆ ಹೊಸ ಹೊಸದಾಗುವುದು.... ಬದುಕಲು ಯಾರಿಗಾದರೂ ಎರಡು ಜೀವನ ಸಿಕ್ಕ ಹಾಗೆ... ಓಹ್! ಈ ಸಂಸಾರ ಅದೆಷ್ಟು ಮಧುರವಾಗಿದೆ. (ಟೆಲಿಫೋನಿನ ಗಂಟೆ ಬಾರಿಸುತ್ತದೆ) ಹಲೋ!...ಪ್ರೇಮ ?...ನಾನು, ನಾನು ಇನ್ನೇನು ಬಂದುಬಿಟ್ಟೆ.... ಪ್ರೇಮ...ಶೀಶಮಹಲ ಹೋಟೆಲ, ರೂಮ ನಂಬರ ಹತ್ತು....ಹಾಂ...ಹಾಂ... ನಂಬರ ಹತ್ತು... ಕೆಟ್ಟಿದ್ದೇನಲ್ಲ... ಹತ್ತು ಕೆಟ್ಟ ನಂಬರೇನಲ್ಲವಲ್ಲ....(ನಗುತ್ತ) ಹಾಂ!...ಇಲ್ಲಿ ಕೇಳು ಪ್ರೇಮ.... ಒಂದುವೇಳೆ ನೀನು ಇಂದೂ ಬುಶ್-ಶರ್ಟ ಹಾಕಿಕೊಂಡು ಬಂದರೆ....ಇಲ್ಲಿ ಕೇಳು....ನಾನು ನಿಜ ಹೇಳುತ್ತಿರುವೆ... ಬಂದಂತೆಯೇ ಮರಳಿ ಬಿಡುತ್ತೇನೆ....ಹಾಂ! ತಿಳಿಯಿತೇ ?...ಸರಿ... ನಾನು ಈಗಲೇ ಬರುತ್ತೇನೆ....ಏನು ?....ನಾನು ನಿನ್ನನ್ನು ದಾರಿಯಲ್ಲಿಯೇ ಪಿಕಪ್ ಮಾಡಲೇ ? ....ಸರಿ, ಸರಿ....ಪ್ರೇಮ....ಸರಿ.... (ಟೆಲಿಫೋನ್ ಇಡುತ್ತಾಳೆ).

**ಚೇತನ:** (ಬರುತ್ತ) ಮಮ್ಮಿ, ಕಾರು ಬಂದಿದೆ.

**ದಮಯಂತಿ:** ಒಳ್ಳೆಯದು, ಮಗು, ನೀನು ಕೋಕೋ ಕುಡಿ.

**ಚೇತನ:** ಆಗಲಿ ಮಮ್ಮಿ (ಮುಂದೆ ಹೋಗಿ ತಾಯಿಯ ಮುತ್ತಿಗಾಗಿ ತನ್ನ ಮುಖ ಮೇಲಕ್ಕೆತ್ತುತ್ತಾನೆ) ಮಮ್ಮಿ.....!

**ದಮಯಂತಿ:** ಓ! ಮಗನೇ, ನಿನಗೆ ಮುತ್ತು ಕೊಡಲಾ ? ನಿನ್ನ ಮುಖ ಅದೆಷ್ಟು ಹೊಲಸಾಗಿದೆಯಲ್ಲ. (ಮಗುವಿನ ಹಣೆಯ ಮೇಲೆ ಒಂದು

ಮುತ್ತನಿತ್ತು ಮತ್ತೆ ತನ್ನ ಬ್ಯಾಗಿನಿಂದ ಚಿಕ್ಕದಾದ ಕನ್ನಡಿ ತೆಗೆದು, ತನ್ನ ತುಟಿಯ ಬಣ್ಣ ನೋಡಿಕೊಂಡು ಹೊರಡುತ್ತಾಳೆ.)

**ಚೇತನ:** ಟಾ....ಟಾ...ಟಾ...ಮಮ್ಮಿ....

**ದಮಯಂತಿ:** ಟಾ....ಟಾ....ಟಾ....ಮಗು (ತಾಯಿ ಹೊರಗೆ ಹೋದನಂತರ ಮತ್ತೆ ಟೆಲಿಫೋನಿನ ಡಾಯಿಲ ತಿರುಗಿಸುತ್ತಾನೆ).

**ಚೇತನ:** ರೋಮಾ, ನೀನು ಈವರೆಗೂ ಬರಲಿಲ್ಲ ? ಬೇಗ ಬಾ ರೋಮಾ.... ಏನು ?... ಬರುವುದಿಲ್ಲ ? ಅದೇಕೆ ? ಇಲ್ಲ ರೋಮಾ ನೀನು ಅವಶ್ಯ ಬರಲೇ ಬೇಕು.... ನಿನ್ನನ್ನು ಕುದುರೆ ಮೇಲೆ ಕೂಡಿಸುತ್ತೇನೆ, ಹೊಡೆಯಲು ಸೈಕಲ್ ಕೊಡುತ್ತೇನೆ; ಜೀಕವಾಡಲು ಜೋಕಾಲಿ ಕೊಡುತ್ತೇನೆ; ಚಿವುಯಿಂಗಮ್ ಕೊಡುತ್ತೇನೆ.... ಮತ್ತೆ...ಮತ್ತೆ ಕೋಕಾ ಕೋಲಾ ಕುಡಿಸುತ್ತೇನೆ....ಆಂ!....ನೀನು ಅಲ್ಲಿಂದ ಯಾವಾಗ ಹೊರಡುವೆ ?

(ಇಷ್ಟರಲ್ಲಿ ಮೇಲಿನ ಬಾಗಿಲು ತೆಗೆವ ಸಪ್ಪಳ ಬರುತ್ತದೆ, ಹುಡುಗ ಹೆದರಿಕೊಂಡು ಟೆಲಿಫೋನ ಇಡುತ್ತಾನೆ ಮತ್ತು ಕಟ್ಟಿಗೆಯ ಕುದುರೆಯ ಸವಾರಿ ಮಾಡಿಕೊಂಡು ಪುನಃ ಜೀಕ ಹೊಡೆಯಲಾರಂಭಿಸುತ್ತಾನೆ. ಹುಡುಗನ ತಂದೆ ಶೇಖರ ನಲವತ್ತು-ನಲವತ್ತೆರಡು ವರ್ಷದವ, ತುಂಬ ಟ್ರಿಮ್ ಆಗಿ ಮೆಲ್ಲ-ಮೆಲ್ಲನೆ ಇಳಿದು ಬರುತ್ತಾನೆ.)

**ಶೇಖರ:** ಹಲೋ ಮಗು !

**ಚೇತನ:** ಹಲೋ !

**ಶೇಖರ:** ಟೆಲಿಫೋನ್ ಮಾಡುತ್ತಿದ್ದವರು ಯಾರು ?

**ಚೇತನ:** ನಾನು.

**ಶೇಖರ:** ನೀನಾರಿಗೆ ಟೆಲಿಫೋನ್ ಮಾಡುತ್ತಿದ್ದೆ ? ರೋಮಾಗೇನು ?

**ಚೇತನ:** ಹೌದು !

**ಶೇಖರ:** ಹುಡುಗರು ಯಾವಾಗಲೂ ಟೆಲಿಫೋನಿಗೆ ಈ ರೀತಿ ಅಂಟಿಕೊಂಡಿರಬಾರದು.

**ಚೇತನ:** ಸರಿ.

**ಶೇಖರ:** ಏನು ನಿನ್ನ ತಾಯಿ ಹೋದಳೇನು ?

**ಚೇತನ:** ಹಾಂ !

**ಶೇಖರ:** ಡ್ರಾಯಿವರ್ ಜೊತೆಯಲ್ಲಿ ಹೋಗಿದ್ದಾನೇನು ?

**ಚೇತನ:** ಇಲ್ಲ.

**ಶೇಖರ:** ನಿನ್ನ ಮಮ್ಮಿ ಯಾವಾಗ ಬರುತ್ತಾಳೆ ? ಏನಾದರೂ ಹೇಳಿ ಹೋಗಿದ್ದಾಳೇನು ?

**ಚೇತನ:** ಏನೂ ಇಲ್ಲ.

**ಶೇಖರ:** ಊಟ ಮನೆಯಲ್ಲಿಯೋ ಮಾಡುತ್ತಾಳೇನು ?

**ಚೇತನ:** ಇಲ್ಲ.

**ಶೇಖರ:** ಯಾವುದಾದರೂ ಟೆಲಿಫೋನ್ ಬಂದಿತ್ತೇನು ?

**ಚೇತನ:** ಹಾಂ !

**ಶೇಖರ:** ಹುಸನಾ ಆಂಟಿಯ ಟೆಲಿಫೋನ್ ಬಂದಿತ್ತೇನು ?

**ಚೇತನ:** ಹೌದು, ಬಂದಿತ್ತು.

**ಶೇಖರ:** ಹಾಗಾದರೆ ನೀನು ಮೊದಲೇ ನನಗೇಕೆ ಹೇಳಲಿಲ್ಲ ? ನನ್ನನ್ನು ಎಬ್ಬಿಸಲಿಲ್ಲವೇಕೆ ? (ಚೇತನ ಸುಮ್ಮನಿದ್ದಾನೆ) ಯಾರದಾದರೂ ಫೋನ ಬಂದಾಗ ಅದನ್ನು ಹೇಳಬೇಕು ಮಗು.

**ಚೇತನ:** ಆಗಲಿ.

**ಶೇಖರ:** ನಿನ್ನ ಅವಸ್ಥೆ ಹೀಗೇಕೆ ಮಾಡಿಕೊಂಡಿರುವೆ ? ಹೋಗು, ಹೋಗಿ ಬಟ್ಟೆ ಬದಲಿಸಿಕೊಂಡು ಬಾ. (ಚೇತನ ಹೋಗುತ್ತಾನೆ.)

**ಶೇಖರ:** ಹುಸನಾ ಆಂಟಿ ಫೋನ ಮಾಡಿದ್ದಳು ! (ಒಂದು ರೀತಿಯ ಮತ್ತತೆಯಲ್ಲಿ) ಓ ! ಹುಸನಾ ಅದೆಷ್ಟು ಚೆಲುವೆ ! ಅದೆಷ್ಟು ಮುಗ್ಧತೆ, ಅದೆಂಥ ಕೋಮಲತೆ ಅವಳದು ! ಏನೆಂಥ ಮಾಧುರ್ಯಮಯ... ಅನಾಘ್ರಾತ ಪುಷ್ಪದೊಲು.... ಪ್ರಥಮ ಪ್ರೇಮದ ಉಗ್ರತೆ...ಓ ! ಈ ತೀವ್ರತೆ... ಈ ವ್ಯಾಕುಲತೆ... ಇದೆಲ್ಲ ಹೀಗೆ ಹೇಗಾಗುತ್ತದೆ...ನಾನು ಹೇಳಿದ್ದೆ... ಟೆಲಿಫೋನ್ ನಾನೇ ಮಾಡುವೆನೆಂದು.... ಆದರೆ ಅವಳಿಂದ ಸಹಿಸಲಾಗಿಲ್ಲ...ಈ ಪ್ರೇಮ ಏನು ? ಓ !...ಧರ್ಮದ ಬಂಧನದಿಂದ ಮುಕ್ತವಾದುದು, ಜಾತಿಯ ಪ್ರತಿಬಂಧಗಳಿಂದ ಹೊರತಾದುದು, ವಯಸ್ಸಿನ ಸೀಮೆಯಿಂದ ಮೀರಿದುದು.... ಇಂದಿನ ಸಾಯಂಕಾಲ ನಿರ್ಣಯವಾಗುತ್ತದೆ... ಹಾಂ !.... ಇಂದಿನ ಸಾಯಂಕಾಲ ನಿರ್ಣಯ ವಾಗುತ್ತದೆ.... ಇನ್ನು ಹೆಚ್ಚು ಕಾಲ ಕಾಯಬೇಕಾಗಿಲ್ಲ....ಇಂದಿನ ಸಾಯಂಕಾಲ... (ಒಮ್ಮೆಲೇ ಅವನಿಗೆ ಯಾವುದೋ ಮಾತು ನೆನಪಿಗೆ ಬರುತ್ತದೆ) ಓಹ್!.... ಇಂದಿನ ಸಾಯಂಕಾಲದ ಬಗ್ಗೆ ವ್ಯವಸ್ಥೆ ಮಾಡಬೇಕಲ್ಲ.... ಇಂದಿನ ಸಂಜೆಯನ್ನು ಎಲ್ಲಿ ಕಳೆಯುವುದು ? (ಯೋಚನೆಯೊಂದಿಗೇನೇ ಟೆಲಿಫೋನ ಮಾಡುತ್ತಾನೆ) ಹಲೋ... ಶೀಶಮಹಲ ಹೋಟಲ್ಲೇನು ? ನನಗೆ ರೂಮ ನಂಬರ ಹತ್ತು ಬೇಕು....ಹಲೋ, ರೂಮ ನಂಬರ ಹತ್ತು...ಹಲೋ.... ರೂಮ ನಂಬರ ಹತ್ತೇನು ?....ಯಾರು....ಕೈಲಾಶ.... ? ಹಲೋ. ನಾನು.... ಶೇಖರ ಮಾತಾಡುತ್ತಿದ್ದೇನೆ.ಈ ಸಂಜೆ ನಿನ್ನ ಪ್ರೋಗ್ರಾಮಯೇನು ? ಹ್ಞಾ.... ಏನಂದೆ ? ಕ್ಲಬ್‌ಗೆ ಹೋಗುತ್ತಿರುವೆಯಾ ?.... ಹಾಗಾದರೆ ಸರಿ... ನನಗೆ ಮತ್ತೆ ಇಂದು ನಿನ್ನ ರೂಮಿನ ಅವಶ್ಯಕತೆ ಇದೆ... ನೀನು ಅವಶ್ಯ ಕ್ಲಬ್‌ಗೆ ಹೋಗು... ಮಹಾರಾಯ, ನನ್ನೋರ್ವ ಗೆಳೆಯನನ್ನು ಅಲ್ಲಿಗೆ ಕರೆತರುವುದಿದೆ.... ನಮಗೆ ಅವಶ್ಯಕ ಮಾತುಗಳನ್ನು ಆಡುವುದಿದೆ... ಹೊರಗೆ ಇನ್ನೆಲ್ಲೂ ಹೋಗಲು ಆಗುವುದಿಲ್ಲ... ಕೈಲಾಶ ನಿನ್ನ ಯಾವ ಮಾತನ್ನೂ ನಾನು ಕೇಳಲು ಸಿದ್ಧನಾಗಿಲ್ಲ...

ಕೀಲಿ ಕೈ ಕೆಳಗೆ ಕೊಟ್ಟು ಹೋಗಿರು.... ಇನ್ನೇನು ನಾನು ಇಷ್ಟರಲ್ಲಿಯೇ ಹೊರಡುವೆ.. ನಾನು ಹೇಳಲಿಲ್ಲವೆ ಕೈಲಾಶ... ಏನನ್ನು ಕೇಳಲೂ ಸಿದ್ಧನಿಲ್ಲವೆಂದು.... ಸರಿ... ನೀನು ಕೆಳಗೆ ಕೌಂಟರದಲ್ಲಿ ಕೀಲಿ ಕೈ ಇರಿಸಿ ಹೋಗು. (ಕೈಲಾಶ ಇನ್ನೂ ಮಾತನಾಡುತ್ತಿರುವಂತೆಯೇ, ಶೇಖರ ಟೆಲಿಫೋನ ಕೆಳಗಿರಿಸಿ ಬಿಡುತ್ತಾನೆ.)

**ಚೇತನ:** (ಬರುತ್ತ) ಹುಂ.... ಹುಂ... (ತಾನು ಬರುತ್ತಿರುವುದನ್ನು ಸೂಚಿಸಲು ಕೆಮ್ಮುತ್ತ ಬರುತ್ತಿದ್ದಾನೆ.)

**ಶೇಖರ:** ಸರಿ, ನೀನು ಸಿದ್ಧವಾಗಿ ಬಂದುಬಿಟ್ಟೆಯಾ ಮಗು ?

**ಚೇತನ:** ಹ್ಞಂ !....

**ಶೇಖರ:** ಇಂದು ಸಂಜೆ ನಿನ್ನ ಪ್ರೋಗ್ರಾಮ ಏನು ? ಮನೆಯಲ್ಲಿಯೇ ಇರುತ್ತಿಯಾ ?

**ಚೇತನ:** ಹಾಂ !.... (ಟೆಲಿಫೋನಿನ ಗಂಟೆ ಬಾರಿಸುತ್ತದೆ.)

**ಶೇಖರ:** ಹಲೋ...ಹಾಂ !..., ಕೈಲಾಶ... ಮತ್ತೇನು ?.... ಅದೆಲ್ಲ ಆಗೋದಿಲ್ಲ ಕೈಲಾಶ.. ನಾನು ಏನನ್ನೂ ಕೇಳಲು ಸಿದ್ಧನಿಲ್ಲ... ನೀನು ಕೆಳಗೆ ಕೌಂಟರಿನಲ್ಲಿ ಕೀಲಿಕೈ ಇಟ್ಟುಹೋಗು...ನಾನು ಇನ್ನೇನು ಬಂದುಬಿಟ್ಟೆ... ನಿನ್ನ ಯಾವ ಮಾತನ್ನು ಈಗ ನಾನು ಕೇಳುವ ಸ್ಥಿತಿಯಲ್ಲಿಲ್ಲ.... (ಕೈಲಾಶ ಏನನ್ನೋ ಹೇಳಬಯಸುತ್ತಾನೆ. ಆದರೆ ಶೇಖರ ಟೆಲಿಫೋನ ಬಂದುಮಾಡುತ್ತಾನೆ. ಚೇತನ ಮತ್ತೆ ಕಟ್ಟಿಗೆಯ ಕುದುರೆಯ ಮೇಲೆ ಕೂಡುತ್ತಾನೆ.)

**ಶೇಖರ:** ನಿನಗೆ ಈ ಕಟ್ಟಿಗೆಯ ಕುದುರೆ, ತುಂಬ ಇಷ್ಟ ಅಲ್ಲವೇ ಮಗು ? (ಚೇತನ ಸುಮ್ಮನಿದ್ದಾನೆ)
(ಟೆಲಿಫೋನಿನ ಗಂಟೆ ಬಾರಿಸುತ್ತದೆ, ಬಾರಿಸುತ್ತಲೇ ಇರುತ್ತದೆ, ಕೆಲ ಹೊತ್ತು ಯಾರೂ ರಿಸೀವರ ಎತ್ತುವುದಿಲ್ಲ.)

**ಶೇಖರ:** ಮಗು, ರಿಸೀವರ ಎತ್ತಿ ಯಾರು ಕೇಳು. ಒಂದು ವೇಳೆ ಕೈಲಾಶ ಅಂಕಲ ಆದರೆ ಡ್ಯಾಡಿ ಆಗಲೇ ಹೋಗಿದ್ದಾರೆಂದು ಹೇಳಿಬಿಡು.

**ಚೇತನ:** (ಟೆಲಿಫೋನಿನಲ್ಲಿ) ಹಲೊ....

**ಶೇಖರ:** ಯಾರದು ಟೆಲಿಫೋನ, ಕೈಲಾಶ ಅಂಕಲದೇನು, ಮಗು ?

**ಚೇತನ:** ಅಲ್ಲ.

**ಶೇಖರ:** ಹುಸನಾ ಆಂಟಿ ಏನು ?

**ಚೇತನ:** ಹೌದು.

**ಶೇಖರ:** ಮಗು, ಡ್ರಾಯಿವರನಿಗೆ ನನ್ನ ಗಾಡಿ ಹೊರತರಲು ಹೇಳು.

**ಚೇತನ:** ಆಗಲಿ (ಹೋಗುತ್ತಾನೆ)

**ಶೇಖರ:** (ಟೆಲಿಫೋನಿನಲ್ಲಿ ಮಾತ ...ತುತ್ರ) ಹಲೋ ಹುಸನಾ, ನಾನು ಇನ್ನೇನು ಹೊರಟೆ... ಹಾಂ ! ನಾನು ಈ ಸಂಜೆಯ ವ್ಯವಸ್ಥೆ ಮಾಡಿರುವೆ. ಶೀಶಮಹಲ ಹೋಟಲ್.... ಹತ್ತನೆಯ ನಂಬರಿನ ಕೋಣೆ... ಹಾಂ !

ನಂಬರ ಪತ್ತು...ನಾನು ಈಗಲೇ ಹೊರಡುತ್ತಿದ್ದೇನೆ... ಮೋಟರ ಹೊರಗೆ ಸಿದ್ಧವಾಗಿದೆ... ಏನಂದೆ?... ನಾನು ನಿನ್ನನ್ನು ದಾರಿಯಲ್ಲಿಯೇ..... ಸರಿ...... ಅಲ್ಲಿಯೇ ಇರು...ನಾನು ಬರುತ್ತೇನೆ..... ಅಲ್ಲಿಂದ ಕೂಡಿಕೊಂಡು ಶೀಶಮಹಲ್‌ಗೆ ಹೋಗೋಣ.... ಸರಿ... ಸರಿ.... ಹಾಂ! ಅಂದಹಾಗೆ ನೀನಿಂದು ಯಾವ ಸೀರೆ ಉಟ್ಟುಕೊಂಡಿರುವೆ?...ಓ! ತುಂಬ ಥ್ಯಾಂಕ್ಸ್....ಸರಿ.... ಹಾಗಾದರೆ....ಬಾಯ್...ಬಾಯ್....(ಟೆಲಿಫೋನ್ ಇಡುತ್ತಾನೆ)

**ಚೇತನ:** (ಬರುತ್ತ) ಡ್ಯಾಡಿ.

**ಶೇಖರ:** ಗಾಡಿ ಬಂತಾ ಮಗು?

**ಚೇತನ:** ಹೌದು ಡ್ಯಾಡಿ.

**ಶೇಖರ:** ಸರಿ. ನಾನು ಹೊರಡುತ್ತೇನೆ ಚೇತನ, ನಿನಗೆ ಬೇಕೆನಿಸಿದರೆ ನೌಕರನೊಂದಿಗೆ ತಿರುಗಾಡಲು ಹೋಗು.

**ಚೇತನ:** ಸರಿ.

**ಶೇಖರ:** ನಿನಗೆ ಪಾಪಿನ್ ಕೊಂಡು ಕೊಡಲು, ಅವನಿಗೆ ಹೇಳು.

**ಚೇತನ:** ಆಗಲಿ. (ಮತ್ತೆ ಟೆಲಿಫೋನಿನ ಗಂಟೆ ಬಾರಿಸುತ್ತದೆ)

**ಶೇಖರ:** ಮಗು, ಟೆಲಿಫೋನ ಯಾರದು ನೋಡು, ಕೈಲಾಶ ಅಂಕಲನದಾಗಿದ್ದರೆ ಡ್ಯಾಡಿ ಹೋದರೆಂದು ಹೇಳಿಬಿಡು, (ಹೋಗುತ್ತಾನೆ).

**ಚೇತನ:** (ರಿಸೀವರ ಎತ್ತಿ) ಹಲೋ.... ಹಾಂ! ಅಂಕಲ...ಡ್ಯಾಡಿನೂ ಹೋದರು... ಮಮ್ಮಿ ಕೂಡ ಹೋಗಿದ್ದಾರೆ.... ಮಮ್ಮಿ ತಮ್ಮ ಗಾಡಿಯಲ್ಲಿ... ಡ್ಯಾಡಿ ತಮ್ಮ ಗಾಡಿಯಲ್ಲಿ ಬೇರೆ ಬೇರೆಯೇ ಹೋಗಿದ್ದಾರೆ. (ಚೇತನ ಹೊರಗಿನಿಂದ ಬರುತ್ತಿರುವ ರೋಮಾಳನ್ನು ನೋಡುತ್ತಾನೆ ಹಾಗೂ ಕೈ ಅಲುಗಾಡಿಸಿ ಅವಳನ್ನು ಸ್ವಾಗತಿಸುತ್ತಾನೆ. ಅವಳು ಬಂದುದರಿಂದ ಜಲ್ದಿ ಜಲ್ದಿ ಮಾತನಾಡಿ ಟೆಲಿಫೋನ ಕೆಳಗಿಡ ಬಯಸುತ್ತಾನೆ) ಹಾಂ! ಅಂಕಲ.... ಇಲ್ಲ ಅಂಕಲ... ಸರಿ....ಅಚ್ಛಾ.... ಅಂಕಲ.... ಅಚ್ಛಾ.... (ಟೆಲಿಫೋನ ಇಡುತ್ತಾನೆ).

**ರೋಮಾ:** (ಶೃಂಗರಿಸಿಕೊಂಡು ಬಂದಿದ್ದಾಳೆ...ರೋಮಾಳ ವಯಸ್ಸು ಸುಮಾರು ಆರೇಳು ವರ್ಷವಿರಬಹುದು.) ಹಲೋ...

**ಚೇತನ:** ಹಲೋ, ರೋಮಾ!

**ರೋಮಾ:** (ನಗುತ್ತ) ನಾನು ನೀಲಿಯ ಫ್ರಾಕ ತೊಟ್ಟಿರುವೆ. ನೀನು ನೀಲಿ ಬುಶ್ ಶರ್ಟ ತೊಟ್ಟಿರುವೆ. ಇದು ಹೀಗೇಕೆ ಆಯಿತು?

**ಚೇತನ:** ಹಾಂ! ರೋಮಾ

**ರೋಮಾ:** ನನಗೆ ಈ ನೀಲಿ ಫ್ರಾಕ್ ಅಂದರೆ ತುಂಬ ಇಷ್ಟ.

**ಚೇತನ:** ನಿನ್ನ ಆಯಾ ಎಲ್ಲಿ?

**ರೋಮಾ:** ಹೊರಗೆ ನಿಮ್ಮ ನೌಕರನೊಂದಿಗೆ ಮಾತನಾಡುತ್ತಿದ್ದಾಳೆ.

**ಚೇತನ:** ರಾಮುನೊಂದಿಗೆ?

**ರೋಮಾ:** ಹಾಂ, ರಾಮುನೊಂದಿಗೆ ನಮ್ಮ ಆಯಾ ಬಹಳ ಮಾತನಾಡುತ್ತಾಳೆ. ಕೆಲವೊಮ್ಮೆ ರಾಮು ನಮ್ಮಲ್ಲಿಗೆ ಬರುತ್ತಾನೆ, ಮತ್ತೆ ಕೆಲವು ಸಲ ಆಯಾ ನಿಮ್ಮಲ್ಲಿಗೆ ಬರುತ್ತಿರುತ್ತಾಳೆ.

**ಚೇತನ:** ರಾಮು ಹೆಂಡತಿ ಆ ದಿನ ತುಂಬ ತರಾಟೆಗೆ ತೆಗೆದುಕೊಂಡಿದ್ದಳು.

**ರೋಮಾ:** ಯಾರನ್ನು ?

**ಚೇತನ:** ರಾಮುನನ್ನು, ಇನ್ನಾರನ್ನು ?

**ರೋಮಾ:** ಏತಕ್ಕಾಗಿ ?

**ಚೇತನ:** ನನಗೇನು ಗೊತ್ತು ? ನಿಮ್ಮ ಆಯಾ ಹಾಗೂ ರಾಮು ತೋಟದಲ್ಲಿ ಕುಳಿತು ಮಾತನಾಡುತ್ತಿದ್ದರು. ಅತ್ತ ಕಡೆಯಿಂದ ರಾಮುನ ಹೆಂಡತಿ ಬಂದಳು. ಮೊದಲು ಅವಳು ಆಯಾಳ ಕೂದಲು ಹಿಡಿದು ಎಳೆದಳು. ಆಮೇಲೆ ರಾಮುಗೆ ಕೆರಪಿನಿಂದ ಹೊಡೆಯುತ್ತ ಅವನನ್ನು ತನ್ನ ಮನೆಗೆ ಕರೆದೊಯ್ದಳು.

**ರೋಮಾ:** ನಿಜಾನ.... (ನಗುತ್ತಾಳೆ)

**ಚೇತನ:** ಈಗ ಅವನ ಹೆಂಡತಿ ಮುನಿಸುಗೊಂಡು ತವರಿಗೆ ಹೋಗಿದ್ದಾಳೆ.

**ರೋಮಾ:** ಹೌದೇನು ! (ನಗುತ್ತಾಳೆ)

**ಚೇತನ:** ಅಲ್ಲಿಂದ ಆಕೆಯ ಅಣ್ಣಂದಿರು ರಾಮುಗೆ ಬೆದರಿಕೆ ಹಾಕಿದ್ದಾರೆ... ನಿಮ್ಮ ಆಯಾನೊಂದಿಗೆ ಮತ್ತೆ ಅವನು ಮಾತನಾಡಿದರೆ ಕೊಂದು ಹಾಕುತ್ತೇವೆ-ಎಂದು ಅವರು ತಿಳಿಸಿದ್ದಾರೆ.

**ರೋಮಾ:** ಓ ! ನಿಜ ಏನು ?

**ಚೇತನ:** ಹೌದು. ಈಗೀಗ ರಾಮು ಥರ-ಥರ ನಡುಗುತ್ತಾನೆ. (ಇಬ್ಬರೂ ನಗುತ್ತಾರೆ)

**ರೋಮಾ:** ನೋಡು, ಇತ್ತಲೇ ಬರುತ್ತಿದ್ದಾರೆ.

**ಚೇತನ:** ಹಾಂ !, ಕೇಳಿಲ್ಲಿ ರೋಮಾ, ನಾವಿಬ್ಬರೂ ಪಿಯಾನೋದ ಹಿಂದೆ ಅಡಗಿ ಇವರ ಮಾತುಗಳನ್ನು ಕೇಳೋಣ.

**ರೋಮಾ:** (ನಗುತ್ತ) ಬಾ ಹಾಗಾದರೆ. (ಇಬ್ಬರೂ ಪಿಯಾನೋದ ಹಿಂದೆ ಅಡಗಿಕೊಳ್ಳುತ್ತಾರೆ. ಅಷ್ಟರಲ್ಲಿ ರಾಮು ಹಾಗೂ ಆಯಾ ಬರುತ್ತಾರೆ)

**ಆಯಾ:** ಈ ಹುಡುಗರು ಎಲ್ಲಿ ಹೋದರು ?

**ರಾಮು:** ಇಲ್ಲೇ ಎಲ್ಲಿಯಾದರೂ ಇರಬೇಕು. ಈಗಿನ ಹುಡುಗರು ಹಿರಿಯರ ಮಾತುಗಳನ್ನು ಕದ್ದು ಕೇಳುತ್ತಿರುತ್ತಾರೆ.

**ಆಯಾ:** ಆ ಮಾತು ಎತ್ತಬೇಡ. ಆ ದಿನ ನಿನ್ನ ಮನೆಯಾಕೆ, ನನ್ನ ಮೂಗು ಹಾಗೂ ಕಿವಿ ಕತ್ತರಿಸುವುದಾಗಿ ಹೇಳುತ್ತಿದ್ದಳು.

**ರಾಮು:** ಹೌದು ಸಂತಿಯ ಸಿಟ್ಟು ತುಂಬ ಕೆಟ್ಟದ್ದು.

**ಆಯಾ:** ಅವಳಿಗೆ ನೀನೇಕೆ ಹೆದರುತ್ತಿರುವೆ ರಾಮು ?

**ರಾಮು:** (ಒಮ್ಮೆಲೇ ದನಿ ಬದಲಿಸುತ್ತ) ಯಾರು ಹೆದರುತ್ತಾರೆ ? ಅವಳಿಗೆ ? ನಾನು ಅವಳಿಗೆ ಹೆದರುವುದಿಲ್ಲ.

ಆಯಾ: ಹೆದರದಿದ್ದರೆ ನಿನ್ನ ಕೈಗಳೇಕೆ ನಡುಗುತ್ತಿವೆ ?
ರಾಮು: ಓ! ಅದು... ನನಗೆ ಛಳಿಯಾಗುತ್ತಲಿದೆ.
ಆಯಾ: ಏನಂದೆ ? ನಿನಗೆ ಬೇಸಿಗೆಯಲ್ಲೂ ಛಳಿಯಾಗುತ್ತದೆಯೇ ?
ರಾಮು: ಇಲ್ಲ... ಈ ಫ್ಯಾನ್ ಇದೆಯಲ್ಲ.... ಅದಕ್ಕಾಗಿ.
ಆಯಾ: ನೀನು ಒಪ್ಪು ಬಿಡು, ನೀನು ಮಾತ್ರ ಸಂತಿಗೆ ಹೆದರುವುದು ಸುಳ್ಳಲ್ಲ.
ರಾಮು: ಅಲ್ಲೇ, ತನ್ನ ಮಕ್ಕಳ ತಾಯಿಗೆ ಎಲ್ಲ ಗಂಡಂದಿರೂ ಸ್ವಲ್ಪ ಸ್ವಲ್ಪ ಹೆದರೇ ಹೆದರುತ್ತಾರೆ.
ಆಯಾ: (ಸಿಟ್ಟಾಗುತ್ತ) ಹಾಗಿದ್ದರೆ ನನ್ನೇಕೆ ಮುಳ್ಳಿನಲ್ಲಿ ಎಳೆಯುತ್ತಿರುವೆ ?
ರಾಮು: ಏ, ನೀನು ರೇಗಿಬಿಟ್ಟೇನು ಇಷ್ಟಕ್ಕೆ, ಪ್ರೀತೊ, ನೀನು... ನೀನಂದರೆ ನನಗೆ ಬಹಳ ಪ್ರೀತಿ....
ಆಯಾ: ನಾನಂದರೆ ನಿನಗೆ ಬಲು ಪ್ರೀತಿ... ಆದರೆ ಹೆದರುವುದು ಮಾತ್ರ ಸಂತಿಗೆ. ನಿನ್ನ ಈ ವರ್ತನೆ ನನಗೆ ಸರಿ ಬರುವುದಿಲ್ಲ. ನಾನಂತೂ ಹೋಗುತ್ತೇನೆ ಮಹಾರಾಯ....
ರಾಮು: ಎಲ್ಲಿಗೆ ಪ್ರೀತೋ ? ನೀನೆಲ್ಲಿಗೆ ಹೋಗುವೆ ? ನೀನು ಇಲ್ಲಿ ಈ ಸೋಫಾದ ಮೇಲೆ ಕೂಡು. ಇದು ನಮ್ಮ ಮನೆಯೇ! (ರಾಮು ತನ್ನೊಂದಿಗೆ ಸೋಫಾದ ಮೇಲೆ ಆಯಾಳನ್ನು ಕೂಡಿಸಿಕೊಳ್ಳುತ್ತಾನೆ).
ಆಯಾ: ಇನ್ನೇನು ಹುಡುಗರು ಬಂದುಬಿಟ್ಟಾರು....
ರಾಮು: ನೀನು ನನ್ನ ಬುದ್ಧಿ ತಿಳಿದಿಲ್ಲ... ನಾನು ಕುಳಿತಲ್ಲಿಂದ ಎಲ್ಲವೂ ಕಾಣಿಸುತ್ತದೆ, ಹೊರಗಿನಿಂದ ಬರುವವರು, ಒಳಗಿನಿಂದ ಹೊರಗೆ ಹೋಗುವವರು-ಎಲ್ಲರೂ ಇಲ್ಲಿಂದ ಕಾಣಿಸುತ್ತಾರೆ.
ಆಯಾ: ಹುಡುಗರಂತೂ ಮನೆಯಲ್ಲಿಯೇ ಇದ್ದಾರೆ.
ರಾಮು: ಇರಲಿಕ್ಕಿಲ್ಲ... ಗಾರ್ಡನ್‌ದಲ್ಲಿ ಆಡುತ್ತಿರಬೇಕು.
ಆಯಾ: ನಮ್ಮ ರೋಮಾ ನಿಮ್ಮ ಚೇತನನನ್ನು ಯಾವಾಗಲೂ ನೆನಸುತ್ತಿರುತ್ತಾಳೆ.
ರಾಮು: ನಮ್ಮ ಚೇತನ ಅವಳಿಗೆ ಯಾವಾಗಲೂ ಟೆಲಿಫೋನ್ ಮಾಡುತ್ತಿರುತ್ತಾನೆ.
ಆಯಾ: ಇಬ್ಬರ ಜೋಡಿ ಬಹಳ ಛಂದ ಅದ.
ರಾಮು: ನಮ್ಮ ಜೋಡಿಯಾದರೂ ಕೆಟ್ಟಿಲ್ಲ.
ಆಯಾ: ನಿನ್ನ ಜೋಡಿ ಸಂತಿಯೊಂದಿಗೆ, ನನ್ನ ಜೊತೆ ಏಕೆ ?
ರಾಮು: ನೀನು ಈ ಮಾತು ಹೇಳಬಾರದು ಪ್ರೀತೊ, ನೀನೆಂದರೆ ನನಗೆ ಪಂಚಪ್ರಾಣ.
ಆಯಾ: ಮತ್ತೆ ಸಂತಿ ?
ರಾಮು: ಅವಳು ನನ್ನ ಮಕ್ಕಳ ತಾಯಿ.
ಆಯಾ: ನೀನು ಸಂತಿಯನ್ನು ಈಗ ತವರಿನಿಂದ ಕರೆಯಿಸಿದರೆ, ನಿನ್ನ ಮುಖವನ್ನು ಎಂದೂ ನೋಡುವುದಿಲ್ಲ.

ರಾಮು: ಓಗೆ ಅನ್ನಬೇಡ ಪ್ರೀತೊ.
ಆಯಾ: ಆ ದಿನ ಅವಳು ನನ್ನ ಕೂದಲು ಕೀಳುವ ಹಾಗೆ ಎಳೆದಿದ್ದಳು.
ರಾಮು: ಏನಾಯ್ತು? ನನಗೂ ಕೂಡ....
ಆಯಾ: ಹಾಂ! ನಿನಗೂ ಚಪ್ಪಲಿಯ ಏಟು ಬಿದ್ದಿದ್ದವು.
ರಾಮು: ನನ್ನನ್ನು ಹೊಡೆಯುವವರು ಯಾರು? ಅವರ ಮುಖದ ಅಂದವನ್ನೇ ಕೆಡಿಸೇನು?
ಆಯಾ: ನಾನು ಹೋದ ಮೇಲೆ ಅವಳು ನಿನ್ನ ಸ್ಥಿತಿ ಏನು ಮಾಡಿದ್ದಳು?
ರಾಮು: ಓ! ಸಂತಿಯ ಮಾತು ಬೇರೆ... ನಾನು ಅವಳ ಅಧಿಕಾರವನ್ನೇ ಹೊಡೆದಿದ್ದೆ....
ಆಯಾ: ಅವಳು ನಿನ್ನನ್ನು ಚಪ್ಪಲಿಯಿಂದ ಹೊಡೆದಳು, ಈಗ ಎಲ್ಲ ಸರಿಹೋಯಿತೇನು?
ರಾಮು: ಪ್ರೀತೋ, ನಾನು ನಿನಗೆ ಹೇಳಿದೆನಲ್ಲ, ಸಂತಿಯ ಮಾತು ಬೇರೆ ಅಂತಾ.... ಅವಳು ನನ್ನ ಮಗ ನಿಕ್ಕುನ ತಾಯಿ....
ಆಯಾ: ಹೋಗು ಹಾಗಾದರೆ ಹಾಳಾಗಿ...ಚಪ್ಪಲಿ ಏಟು ತಿನ್ನು...(ಮುಖ ಉಬ್ಬಿಸಿ) ನಿಕ್ಕುನ ತಾಯಿಯ ಮಾತು ಬೇರೆ ಅಂತೆ...ಹ್ಞಂ!... ಹಾಗಿದ್ದರೆ ನನ್ನ ಜೊತೆ ಏಕೆ ಈ ಪ್ರೀತಿಯ ಮಾತು?...ನಾನಂತೂ ಹೊಂಟೆ ಮಹಾರಾಯ...(ಏಳುತ್ತ ಕೂಗುತ್ತಾಳೆ) ಬೇಬಿ, ಓ! ಬೇಬಿ... ನೀನು ಎಲ್ಲಿರುವೆ?
ರೋಮಾ: (ಪಿಯಾನೋದ ಹಿಂದಿನಿಂದ ಹೊರಬರುತ್ತ) ಬಂದೆ.
ಆಯಾ: ನೀನು ಇಲ್ಲಿ ಅಡಗಿರುವೆ ಏನು?
ಚೇತನ: (ಹೊರಗೆ ಬರುತ್ತ) ಹಾಂ! ನಾವು ಇಲ್ಲಿ ಅಡಗಿದ್ದೆವು. (ಹುಡುಗರಿಬ್ಬರೂ ನಗುತ್ತಾರೆ).
ಆಯಾ: (ನಾಚಿಕೆಯಿಂದ) ನಾನು ಹೇಳಿರಲಿಲ್ಲವೆ, ಇಂದಿನ ಹುಡುಗರು ಹಿರಿಯರ ಮಾತುಗಳನ್ನು ಕದ್ದು ಕೇಳುತ್ತಾರೆಂದು?
ರಾಮು: (ಥರ ಥರ ನಡುಗುತ್ತ) ನನಗಂತೂ ನನ್ನ ಜೀವಾನ ಮುಗಿದ್ಹಂಗ ಅನಸಾಕ ಹತ್ತೇದ.... ನಾನು ಸೋಫಾದ ಮೇಲೆ ಕೂತದ್ದು ಯಜಮಾನತಿಗೆ ಗೊತ್ತಾದರೆ, ನನ್ನ ಗತಿ ಏನಾದೀತು? (ಇಬ್ಬರೂ ಹೊರಟು ಹೋಗುತ್ತಾರೆ. ಹುಡುಗರಿಬ್ಬರು ಈಗಲೂ ನಗುತ್ತಿದ್ದಾರೆ).
ಚೇತನ: (ನಗು-ನಗುತ್ತ ಸೋಫಾದ ಮೇಲೆ ಹೋಗಿ ಕೂಡುತ್ತಾನೆ. ರೋಮಾಳ ಕಡೆ ಸನ್ನೆ ಮಾಡಿ) ಓ! ಪ್ರೀತೊ, ನೀನು ಇಲ್ಲಿ, ನನ್ನ ಹತ್ತಿರ ಬಂದು ಕೂತುಕೊ.
ರೋಮಾ: ಏ ರಾಮು. ನಾನೇಕೆ ನಿನ್ನ ಹತ್ತಿರ ಕೂಡಲಿ?
ಚೇತನ: ಏ ಪ್ರೀತೊ, ಕೂತುಕೊ, ಇಲ್ಲಿ ಯಾರೂ ನೋಡುವುದಿಲ್ಲ.
ರೋಮಾ: (ಕುಳಿತುಕೊಳ್ಳುತ್ತ) ಏ, ರಾಮು, ನಿನ್ನ ಮನೆಯವಳು, ರಾಕ್ಷಸಿ, ಆ ದಿನ ನನ್ನನ್ನು ಹೇಗೆ ಥಳಿಸಿದಳು.... ಬೇಡ ಮಹಾರಾಯ ಅಂದಿನ ನನ್ನ ಸ್ಥಿತಿ....

**ಚೇತನ:** ಪ್ರೀತೊ, ಹೋಗಲಿ ಬಿಡು ಅವಳ ವಿಷಯ, ಅವಳಂತೂ ನನ್ನ ಮಕ್ಕಳ ತಾಯಿ.

**ರೋಮಾ:** ಏ, ರಾಮು, ನಿನ್ನ ಆ ರಾಕ್ಷಸಿ ಅಂದು ನನ್ನ ಕೂದಲು ಹಿಡಿದೆಳೆದಿದ್ದಳು.

**ಚೇತನ:** ಏ, ಪ್ರೀತೋ, ಅವಳ ಮಾತು ಬಿಡು, ಅವಳಂತೂ ನನ್ನ ಮಗ ನಿಕ್ಕುನ ತಾಯಿ... (ಇಬ್ಬರೂ ಗಟ್ಟಿಯಾಗಿ ನಗುತ್ತಾರೆ, ನಗುತ್ತಿರುತ್ತಾರೆ.)

**ರೋಮಾ:** ಅರೆ, ಇದೇನು ಟ್ಯಾಕ್ಸಿಯಲ್ಲಿ ಯಾರು ಬಂದರು ?

**ಚೇತನ:** ಕೈಲಾಶ ಅಂಕಲ್, ಓ ! ಜೊತೆಗೆ ಕಮಲಾ ಆಂಟಿ, ನಮ್ಮ ಟೀಚರ.

**ರೋಮಾ:** ಹಾಗಾದರೆ ನಾನು ಹೋಗುತ್ತೇನೆ, ನಾನಿನ್ನೂ ಪಾಠಾನೇ ಮಾಡಿಲ್ಲ. (ಇಬ್ಬರೂ ಜಲ್ದಿ-ಜಲ್ದಿ ಬಲಗಡೆಯ ಬಾಗಿಲಿನಿಂದ ಹೊರಗೆ ಹೊರಟು ಹೋಗುತ್ತಾರೆ)

**ಕೈಲಾಶ:** (ನಗುತ್ತ) ಮನೆ ಖಾಲಿ! ಫೋನ ಮಾಡೋ ಅವಶ್ಯಕತೆ ಇಲ್ಲ, ಬಾಗಿಲು ಬಡಿಯುವ ಅವಶ್ಯಕತೆಯೂ ಇಲ್ಲ. ನಾನು ಯೋಚಿಸಿದ ಹಾಗೆಯೇ, ಮನೆ ಸಂಪೂರ್ಣ ಖಾಲಿ.

**ಕಮಲಾ:** ನೀವು ಹೀಗೇಕೆ ನಗುತ್ತಿದ್ದೀರಿ ?

**ಕೈಲಾಶ:** ನಗುವ ಮಾತೇ ಇದೆ, ಕಮಲಾ.

**ಕಮಲಾ:** ನನಗೆ ನಿಮ್ಮ ಮಾತು ತಿಳಿಯದು. ನಾನು ಯೋಚಿಸಿದ್ದೆ, ಈ ಸಂಜೆ....

**ಕೈಲಾಶ:** ಯಾವುದಾದರೂ ಏಕಾಂತವಾದ ಸ್ಥಳದಲ್ಲಿ ಕಳೆಯಬಹುದೆಂದು.... ತಿಳಿದಿದ್ದೆ ಅಲ್ಲವೆ ?

**ಕಮಲಾ:** ನೀವೋ, ಇಲ್ಲಿಗೆ ಕರೆತಂದಿರಿ. ಇನ್ನು ಇಲ್ಲಿ ಅದೆಷ್ಟು ಹೊತ್ತು ಕುಳಿತುಕೊಳ್ಳುವುದಿದೆ ?

**ಕೈಲಾಶ:** ಕಮಲಾ, ಈ ಸಂಜೆ ಈ ಮನೆ, ಈ ನಗರದಲ್ಲಿಯೇ ಎಲ್ಲಕ್ಕಿಂತ ಹೆಚ್ಚು ಏಕಾಂತ ಸ್ಥಾನವಾಗಿದೆ. (ಮತ್ತೆ ನಗುತ್ತಾನೆ.)

**ಕಮಲಾ:** ನನಗೆ ನಿಮ್ಮ ಯಾವ ಮಾತೂ ತಿಳಿಯುತ್ತಿಲ್ಲ.

**ಕೈಲಾಶ:** ಹಾಂ, ಕಮಲಾ, ಈ ಮಾತುಗಳನ್ನು ಮನುಷ್ಯ ಎಲ್ಲಿಯವರೆಗೆ ತಿಳಿಯಲಾರನೋ, ಅಲ್ಲಿಯ ವರೆಗೂ ಅವನು ಸುಖಿಯಾಗಿರುತ್ತಾನೆ.

**ಕಮಲಾ:** ಹಾಂ ! ಒಂದು ಸುಖ ಕತ್ತಲದ್ದೂ ಇರುತ್ತದೆ.

**ಕೈಲಾಶ:** ಇನ್ನೊಂದು ಸುಖ ಪ್ರಕಾಶದ್ದಾಗಿರುತ್ತದೆ.

**ಕಮಲಾ:** ಮಗುದೊಂದು ಸುಖವೂ ಇರುತ್ತದೆ, ಕಣ್ಣು ತೆರೆದರೂ ರೆಪ್ಪೆ ಮುಚ್ಚಿಕೊಂಡು ತನ್ನ ಸುತ್ತಲಿನ ಜಗತ್ತಿನಿಂದ ನಿರ್ಲಿಪ್ತತೆ ಹೊಂದುವುದು.

**ಕೈಲಾಶ:** ಕಟು ಯಥಾರ್ಥವನ್ನು ಎದುರಿಸಬಾರದು ಹಾಗೂ ಕಷ್ಟಗಳನ್ನು ಕಾಲಕ್ಕೆ ಬಿಟ್ಟುಬಿಡುವುದು.

**ಕಮಲಾ:** ಆದರೆ, ಅದೆಷ್ಟೋ ಸಲ ಇಂಥ ಬೇಜವಾಬ್ದಾರಿಯಿಂದ ಚುಚ್ಚಿದ ಒಂದು ಮುಳ್ಳಿನ ನೋವು, ಘಾತಕವಾಗಬಹುದು, ಜೀವನದ ತುಂಬ ಅದು ದುಃಖ ನೀಡಬಹುದು.

**ಕೈಲಾಶ:** ಹಾಗಾದರೆ ನೀನು ನಿನ್ನ ಕಷ್ಟಗಳನ್ನು ದೂರ ಮಾಡಲು ಏನು ಯೋಚನೆ ಮಾಡಿರುವೆ ?

**ಕಮಲಾ:** ನಾನು ಯೋಚಿಸುವುದು ಹೀಗೆ, ಜೀವನದಲ್ಲಿ ಒಂದು ಸಮನ್ವಯತೆ ಬೇಕು, ಒಳ್ಳೆಯ ಮಾತು ಸಿಕ್ಕರೆ ಅದನ್ನು ಅನುಸರಿಸಿ ಸಾಗುವುದನ್ನು ಕಲಿಯಬೇಕು.

**ಕೈಲಾಶ:** ಹಿರಿಯರ ಅಪಾರ ಅನುಭವದ ಮಾತುಗಳ ಸಹಾಯದಿಂದ, ಅದೆಷ್ಟೋ ಸಲ ನವಜೀವನದ ನೌಕೆಯನ್ನು ನಾಲ್ಕು ಹೆಜ್ಜೆ ಕೂಡ ಮುಂದಕ್ಕೆ ತಳ್ಳಲಾಗುವುದಿಲ್ಲ.

**ಕಮಲಾ:** ಆದರೆ, ಜೀವನದ ಆಧಾರಭೂತ ಮೌಲ್ಯಗಳು ಅಚಲವಾಗಿರುತ್ತವೆ; ಅವು ಎಂದೂ ಬದಲಾವಣೆ ಹೊಂದುವುದಿಲ್ಲ, ಹೇಗೆಂದರೆ ಎರಡು ಮತ್ತು ಎರಡು ಯಾವಾಗಲೂ ನಾಲ್ಕೇ ಇದೆ, ಮುಂದೆಯೂ ಇರುತ್ತದೆ.

**ಕೈಲಾಶ:** ನಾನು ಕೇಳಿದ್ದು, ನೀನು ನಿನ್ನ ಸಮಸ್ಯೆಯ ಪರಿಹಾರಕ್ಕೆ ಏನು ಯೋಚಿಸಿರುವೆ ಎಂದು !

**ಕಮಲಾ:** ನನ್ನ ಯೋಚನೆ ಹೀಗಿದೆ, ಕೈಲಾಶ, ನಾವು ಯೋಚಿಸುತ್ತಿರುವುದನ್ನು ಯಾರಾದರೂ, ನಮ್ಮ ತಾಯಿ-ತಂದೆಯವರ ಮನದವರೆಗೂ ತಲುಪಿಸಬೇಕು.

**ಕೈಲಾಶ:** ಮತ್ತೆ ಒಂದು ಮನೆಯಿಂದ ಇನ್ನೊಂದು ಮನೆಗೆ ಸಂದೇಶ, ಹೋಗಬೇಕು. ನಮ್ಮಲ್ಲಿಂದಲೇ ಆರಂಭವಾಗಲಿ. ಆ ನಂತರ ನಿಮ್ಮವರು ನಮ್ಮ ಮನೆಗೆ ನನ್ನನ್ನು ನೋಡಲು ಬರಲಿ, ಆಮೇಲೆ ನಮ್ಮ ಜನ ನಿಮ್ಮ ಮನೆಗೆ ನಿನ್ನನ್ನು ನೋಡಲು ಬರುತ್ತಾರೆ. ಇದೆಲ್ಲ ಆದ ಮೇಲೆ ಕುಂಡಲಿ ನೋಡುವುದು ನಡೆಯಲಿ, ಅದು ಹೊಂದಿದ ನಂತರ, ಅರಿಶಿಣ ಹಚ್ಚುವುದು, ಮದುಮಕ್ಕಳಾಗುವುದು, ಬಾಜಾಬಜಂತ್ರಿ ಊದಲಿ, ಎಲ್ಲ ಕಡೆಯಿಂದ ಬಂಧು ಬಾಂಧವರು ಸೇರಿರಲಿ ಬಂದು, ಅವರೆಲ್ಲರ ಎದುರಿನಲ್ಲಿ, ಅವರನ್ನು ಸಾಕ್ಷಿಯಾಗಿಸಿ ಕಮಲಾ ಮತ್ತು ಕೈಲಾಶ, ಕೈಲಾಶ ಮತ್ತು ಕಮಲಾ....
(ಇಬ್ಬರೂ ನಗುತ್ತಾರೆ)

**ಕಮಲಾ:** ಏನು, ಇದರಲ್ಲಿ ಯಾವ ಆನಂದವೂ ಇಲ್ಲವೇ ?

**ಕೈಲಾಶ:** ಹಾಂ ! ಜೀವನದಲ್ಲಿ ಥಳಕು ಹೊಳಪು ಬೇಕು. ಜೀವನದಲ್ಲಿ ರಂಗು ರಂಗಿನ ಸಮಯವೂ ಬೇಕು. ಆದರೆ ಈ ರಂಗು ಬಹಳ ಸಲ ಅಧಿಕವಾಗುತ್ತದೆ, ಹಾಗೂ ಶಾಶ್ವತವೂ ಆಗುತ್ತದೆ. ಬಿಳಿಯದೂ ಒಂದು ಬಣ್ಣವೇ ಆಗಿದೆಯಲ್ಲ.

**ಕಮಲಾ:** ಬಿಳಿಯ ಬಣ್ಣದ, ಯಾವಾಗಲೂ ಇರುವ ಬಿಳಿಪಿನಿಂದಾಗಿ ಯಾರದಾದರೂ ಮನಸ್ಸು ರೋಸಿ ಹೋಗುವುದಿಲ್ಲವೇ ?

**ಕೈಲಾಶ:** ಬಿಳಿಯದರಲ್ಲಿ ಎಲ್ಲ ಬಣ್ಣಗಳೂ ಅಡಗಿರುತ್ತವೆ, ಬಿಳಿಯದರಿಂದ

ಯಾರೂ ರೋಸಿ ಹೋಗಲಾರರು.

**ಕಮಲಾ:** ಸತ್ಯ ಅಚಲವಾಗಿರುವ ಹಾಗೆ.

**ಕೈಲಾಶ:** ಅದೂ ಅಲ್ಲದೆ ಬಿಳಿಯ ಬಣ್ಣಕ್ಕೂ ಅದೆಷ್ಟೋ ರೂಪಗಳಿರುತ್ತವೆ.

**ಕಮಲಾ:** ಬಿಳಿಯದು ಒಳ್ಳೆಯದು, ಆದರೆ ಬಿಳಿಯದರೊಂದಿಗೆ ಇನ್ನಾವುದಾದರೂ ಬಣ್ಣ ಇರಿಸಿದರೆ ಬಿಳಿಯದರ ಬಿಳುಪು ಇನ್ನೂ ಹೆಚ್ಚು ಎದ್ದು ಕಾಣುತ್ತದೆ.

**ಕೈಲಾಶ:** ಜೀವನ ಸಂಪೂರ್ಣ ಒಂದು ಕಠಿಣವಾದ ಪರೀಕ್ಷೆ, ಪ್ರತಿಯೊಂದು ಹೆಜ್ಜೆಗೂ ಯಾವುದಾದರೊಂದು ಗಂಟನ್ನು ಬಿಚ್ಚಲೇ ಬೇಕಾಗುತ್ತದೆ.

**ಕಮಲಾ:** ಅವೆಷ್ಟೋ ಗಂಟುಗಳನ್ನು ಬಿಚ್ಚುವ ರೀತಿ ಹಳೆಯವೆ, ಅವಲ್ಲ ಪರೀಕ್ಷೆ ಮಾಡಿದವುಗಳೇ, ಎಲ್ಲೋ ಒಂದಕ್ಕೆ ಹೊಸ ರೀತಿಯನ್ನು ಕಂಡು ಹಿಡಿಯಬೇಕಾಗುತ್ತದೆ, ಅಷ್ಟೆ.

**ಕೈಲಾಶ:** ಇದರ ಸಾರಾಂಶ ಇಷ್ಟೆ, ಮನುಷ್ಯ ಬುದ್ಧಿಗೆ ಜಂಗು ಹತ್ತದಿರಲಿ-ಎಂಬುದು.

**ಚೇತನ:** (ಬರುತ್ತ) ಹಲೋ ಅಂಕಲ, ಹಲೋ ಆಂಟಿ.

**ಕಮಲಾ:** ಹಲೋ ಚೇತನ.

**ಕೈಲಾಶ:** ಹೇಗಿದ್ದಿಯಾ ಮಗು ?

**ಚೇತನ:** ರೋಮಾಳ ಮನೆಗೆ ಫೋನ ಮಾಡಬೇಕಾಗಿದೆ.

**ಕೈಲಾಶ:** ಏಕೆ, ಏನಾಯ್ತು ?

**ಚೇತನ:** ನಾನು, ರೋಮಾ ಆಡುತ್ತಿದ್ದೆವು. ನಾನು ಕೃಷ್ಣನಾಗಿದ್ದೆ, ರೋಮಾ ರಾಧಾ ಆಗಿದ್ದಳು. ನಾನು ಸುಳ್ಳು ಸುಳ್ಳೇ ಆಕಳು ಕಾಯಲು ಹೋದೆ, ಅವಳು ಸುಳ್ಳು ಸುಳ್ಳೇ ಬೆಣ್ಣೆ ತೆಗೆದುಕೊಂಡು ಬಂದಳು. ತೋಟದಲ್ಲಿ ನಾವು ಸುಳ್ಳ-ಪಳ್ಳ ಮಾತನಾಡುತ್ತಿದ್ದೆವು, ಮಾತಾಡುತ್ತಾಡುತ್ತ ಮಲಗಿದೆವು, ಸುಳ್ಳೇ ಮಲಗಿದರೂ ರೋಮಾಗೆ ನಿದ್ರೆ ಬಂದೇಬಿಟ್ಟಿತು. ಈಗ ಅವಳು ಏಳುತ್ತಲೇ ಇಲ್ಲ, ಎಬ್ಬಿಸಿ ಎಬ್ಬಿಸಿ ನನಗೆ ಸಾಕಾಯಿತು.

**ಕಮಲಾ:** ಎಲ್ಲಿಯಾದರೂ ನಿನ್ನ ರೋಮಾಗೆ ಹಾವು ಕಚ್ಚಲಿಲ್ಲ ತಾನೇ ?

**ಕೈಲಾಶ:** ನಡೆ, ನಾವು ನಿನ್ನ ರಾಧಾಳನ್ನು ನೋಡುತ್ತೇವೆ.
(ಮೂವರೂ ನಗುತ್ತ ಹೊರಗೆ ಹೋಗುತ್ತಾರೆ. ಇನ್ನೂ ಅವರು ಹೊರ ಹೊರಟಿದ್ದರು. ಅಷ್ಟರಲ್ಲಿ ರಾಮು ಮತ್ತು ಆಯಾ ನಗುತ್ತ ಬಲಗಡೆಯ ಬಾಗಿಲಿನಿಂದ ಪ್ರವೇಶ ಮಾಡುತ್ತಾರೆ.)

**ರಾಮು:** (ನಗುತ್ತ) ನಮ್ಮ ಮಾತುಗಳನ್ನು ಹುಡುಗರು ಕೇಳಿದರು, ನಾವು ಸಾಹೇಬರ ಮಾತುಗಳನ್ನು ಕೇಳಿದೆವು.

**ಆಯಾ:** ಪರದೆಯ ಹಿಂದೆ ನನ್ನ ಎದೆ ಢೋಲಿನ ಹಾಗೆ ಬಡಿದುಕೊಳ್ಳುತ್ತಲಿತ್ತು.

**ರಾಮು:** ಅವರು ಏನು ಮಾತನಾಡುತ್ತಿದ್ದರೆಂಬುದು, ನಿನಗೇನಾದರೂ ತಿಳಿಯಿತೇನು ?

**ಆಯಾ:** ನನಗಂತೂ ಏನೂ ತಿಳಿಯಲಿಲ್ಲ, ಆದರೆ ನೀನು ನನ್ನೊಂದಿಗೆ ಮಾತನಾಡುತ್ತಿರುವ ಮಾತಿನ ಹಾಗೆಯೇ, ಅವರೂ ಮಾತನಾಡುತ್ತಿದ್ದರು ಅನ್ನಿಸಿತು.

**ರಾಮು:** ಕೈಲಾಶಬಾಬು ಇನ್ನೂ ಕುಮಾರ.

**ಆಯಾ:** ಕಮಲಾನೂ ಕುಮಾರಿಯ ಹಾಗೆಯೇ ಕಾಣಿಸುತ್ತಾಳೆ.

**ರಾಮು:** ಈಗಿನ ಹುಡುಗಿಯರದೇ ತಿಳಿಯುವುದಿಲ್ಲ, ಕುಮಾರಿಯರು ವಿವಾಹಿತರ ಹಾಗೆ ತೋರುತ್ತಾರೆ, ವಿವಾಹಿತರು ಕುಮಾರಿಯರ ಹಾಗೆ (ನಗುತ್ತಾನೆ).

**ಆಯಾ:** ಎಷ್ಟಾದರೂ ಗಂಡಸರ ಜಾತಿ, ಹೆಂಗಸರ ಬಗ್ಗೆ ಹೀಗೆಲ್ಲ ಮಾತನಾಡ್ತೀರಾ, ಆದರೆ ಹೆಂಗಸರಿಲ್ಲದೆ ನಿಮ್ಮ ಜೀವನವೇ ಸಾಗುವ ಹಾಗಿಲ್ಲ.

**ರಾಮು:** ನೋಡಲ್ಲಿ, ನಮ್ಮ ತೋಟದಲ್ಲಿ ಪಕ್ಕದವರ ದನಗಳು ನುಗ್ಗುತ್ತಿವೆ, ನಾನು ಅವನ್ನು ಆಚೆಗೆ ಹೊಡೆದು ಬರುತ್ತೇನೆ. (ಹೋಗುತ್ತಾನೆ)

**ಆಯಾ:** ಮನೆಯ ಬಾಗಿಲು ತೆರೆದಿದ್ದರೆ ಹಾದಿಹೋಕನೂ ಸಹ ಹಣಿಕಿ ಹಾಕುತ್ತಾನೆ (ಒಂದು ಕ್ಷಣ ಆಯಾ ವಿಚಾರದಲ್ಲಿ ಮಗ್ನಳಾಗುತ್ತಾಳೆ; ಇದ್ದಕ್ಕಿದ್ದಂತೆ ಅವಳ ಕಣ್ಣಲ್ಲಿ ಕಣ್ಣೀರು ಬರುತ್ತವೆ) ಅಯ್ಯೋ, ನನ್ನ ಮೊದಲಿನ ಯಜಮಾನ ಈ ರೀತಿ ನನ್ನನ್ನು ಬಿಟ್ಟುಹೋಗಿರದಿದ್ದರೆ, ಇಂದು ಇಂಥ ಸ್ಥಿತಿ ನನಗೆ ಬರುತ್ತಿರಲಿಲ್ಲ; ನಿರ್ಜನವಾದ ವಾಡೆ ಇದ್ದ ಹಾಗೆ, ಬಂದವರೆಲ್ಲ ತಮಗೇನು ಬೇಕೋ ಅದನ್ನು ತೆಗೆದುಕೊಂಡು ಹೋಗುವ ಹಾಗೆ.

**ರೋಮಾ:** (ಬರುತ್ತ) ಆಯಾ, ಆಯಾ, ನನಗೆ ಮನೆಗೆ ಹೋಗಬೇಕು.

**ಚೇತನ:** ನಾನೂ ರೋಮಾಳೊಂದಿಗೆ ಬರುತ್ತೇನೆ.

**ಆಯಾ:** ಹಾಂ ! ನಡೆ, ನಡೆ, ಆದರೆ ಆ ಅತಿಥಿಗಳು ಎಲ್ಲಿ ?

**ಚೇತನ:** ಅಂಕಲ, ಆಂಟಿ ತೋಟದಲ್ಲಿಯೇ ಇದ್ದಾರೆ.

**ಆಯಾ:** ಅಲ್ಲೇನು ಮಾಡುತ್ತಿದ್ದಾರೆ ?

**ಚೇತನ:** ಮೊದಲು ನಾನು ಕೃಷ್ಣನಾಗಿದ್ದೆ, ರೋಮಾ ರಾಧಾ ಆಗಿದ್ದಳು. ಈಗ ಅಂಕಲ ಕೃಷ್ಣನಾಗಿದ್ದಾನೆ. ಆಂಟಿ ರಾಧಾ ಆಗಿದ್ದಾಳೆ.

**ರೋಮಾ:** ಅಂಕಲನ ರಾಧಾ ಎಲ್ಲೋ ಮಾಯವಾಗಿದ್ದಾಳೆ, ಅಂಕಲ ಈಗ ರಾಧಾಳನ್ನು ಹುಡುಕುತ್ತಿದ್ದಾನೆ, ತೋಟದಲ್ಲಿ (ಹೊರಗೆ ಮೋಟರಿನ ಸಪ್ಪಳ)

**ಚೇತನ:** ಡ್ಯಾಡಿ ಬಂದರು.

**ರೋಮಾ:** ಕಾರನ್ನು ಗ್ಯಾರೇಜಿನಲ್ಲಿ ಬಿಡಲು ಹೋಗಿರಬಹುದು.

**ಚೇತನ:** ಹಾಂ ! ಡ್ರಾಯಿವರ ಗ್ಯಾರೇಜನಿಂದ ಗಾಡಿ ಹೊರಗೆ ತೆಗೆಯುತ್ತಾನೆ, ಆದರೆ ಒಳಗೆ ಬಿಡಲು ಮಾತ್ರ ಯಾವಾಗಲೂ ನನ್ನ ಡ್ಯಾಡಿಯೇ ಹೋಗುತ್ತಾರೆ.

**ರೋಮಾ:** ಒಂದು ರಾತ್ರಿ ನಾವು ಊಟ ಮಾಡಲು ಎಲ್ಲಿಯೋ ಹೋಗಿದ್ದೆವು. ಬರುವಾಗ ನಾನು ಮಲಗಿಬಿಟ್ಟಿದ್ದೆ. ನನ್ನ ಡ್ಯಾಡಿ ಮತ್ತು ಮಮ್ಮಿ ಮುಂದಿನ ಸೀಟಿನಲ್ಲಿ ಕುಳಿತಿದ್ದರು, ಡ್ಯಾಡಿ ಮೋಟಾರನ್ನು ಗ್ಯಾರೇಜ ಒಳಗಡೆ ಒಯ್ದು ನಿಲ್ಲಿಸಿದರು ಹಾಗೂ ಗ್ಯಾರೇಜಿನ ಬಾಗಿಲು ಹಾಕಿಕೊಂಡು ತಾವು ಮನೆಯೊಳಗೆ ಹೋಗಿ ಮಲಗಿಬಿಟ್ಟರು. ನಾನೋ ಇಡೀ ರಾತ್ರಿ ಮೋಟಾರದಲ್ಲಿಯೇ ಇದ್ದೆ.

**ಆಯಾ:** ಇಂದಿನ ತಾಯಿ-ತಂದೆಗಳ ಸ್ಥಿತಿ ಇದು.
(ಶೇಖರ ಕ್ರೋಧದಿಂದಲೇ ಬರುತ್ತಾನೆ, ಮಕ್ಕಳೆಡೆಗೆ ನೋಡದೆ ಜೋರಾಗಿ ಮೆಟ್ಟಲು ಹತ್ತಿ ಮೇಲೆ ಹೋಗುತ್ತಾನೆ.)

**ಚೇತನ:** ಡ್ಯಾಡಿ !

**ರೋಮಾ:** ನಿಮ್ಮ ತಂದೆ ಬಹುಶಃ ಸಿಟ್ಟಿನಲ್ಲಿದ್ದಾರೆ.

**ಆಯಾ:** ಹಾಂ! ಸಾಹೇಬರು ಸಿಟ್ಟಿನಲ್ಲಿದ್ದಾರೆ. ನಡಿ ರೋಮಾ, ಹೋಗೋಣ ಇನ್ನು.

**ಚೇತನ:** ರೋಮಾ, ನಾನೂ ನಿನ್ನೊಂದಿಗೆ ಬರುತ್ತೇನೆ.

**ರೋಮಾ:** ಆಯಾ, ಚೇತನನೂ ಬರಲಲ್ಲ ?

**ಆಯಾ:** ನಿನ್ನ ಇಚ್ಛೆ ಮಗು, ನಡೆ ಇನ್ನು ಹೋಗೋಣ.
(ಮಕ್ಕಳು ಮತ್ತು ಆಯಾ ಹೋಗುತ್ತಾರೆ, ಅಷ್ಟರಲ್ಲಿಯೇ ಫೋನಿನ ಗಂಟೆ ಬಾರಿಸುತ್ತದೆ. ಗಂಟೆ ಬಾರಿಸುತ್ತಲೇ ಇರುತ್ತದೆ. ರಾಮು ಓಡುತ್ತ ಬರುತ್ತಾನೆ.)

**ರಾಮು:** (ರಿಸೀವರ ಎತ್ತಿ) ಏನ್ರೀ, ಸಾಹೇಬರು ಹೊರಗೆ ಹೋಗ್ಯಾರ... ಹೌದರಿ... ಏನಂದ್ರಿ... ಬಾಯಿಯವರು.... ಅವರೂ ಹೊರಗೆ ಹೋಗ್ಯಾರ್ರಿ.... ಆಂ.... ಏನಂದ್ರಿ.... ಇಲ್ಲ...ಇಲ್ಲ....ಇಬ್ಬರೂ ಬೇರೆ ಬೇರೆ ಹೋಗಿದ್ದಾರೆ.... ಹೌದು.... ತಮ್ಮ ತಮ್ಮ ಕಾರಿನಲ್ಲಿ ಹೋಗ್ಯಾರ್ರಿ.... ಏನಂದ್ರಿ... ಯಾವಾಗ ಬರ್ತಾರೇನೋ ಗೊತ್ತಿಲ್ಲರಿ,.... ಆಗಲ್ರಿ... ನಾನು ಹೇಳ್ತೀನ್ರಿ.... (ಫೋನ ಇಡುತ್ತಿರುವಂತೆಯೇ ಹೊರಗೆ ಕಾರು ಬರುತ್ತದೆ, ಅದರಲ್ಲಿಂದ ದಮಯಂತಿ ಇಳಿಯುತ್ತಾಳೆ.)

**ರಾಮು:** ಮೇಮಸಾಹೇಬ... !
(ದಮಯಂತಿ ಸುಮ್ಮನಿದ್ದಾಳೆ, ಕ್ರೋಧದಿಂದಾಗಿ ಮುಖ ಕೆಂಪಾಗಿದೆ.)

**ರಾಮು:** ಮೇಮಸಾಹೇಬ ನಿಮಗೆ ಫೋನ್ ಬಂದಿತ್ತು.
(ರಾಮುನಿಗೆ ಉತ್ತರ ಕೊಡದೆ ದಮಯಂತಿ ಜಲ್ದಿ ಜಲ್ದಿ ಮೆಟ್ಟಲು ಹತ್ತುತ್ತಾಳೆ, ಮೇಲೆ ಬಾಗಿಲು ಹಾಕಿಕೊಂಡ ಸಪ್ಪಳ ಕೇಳಿಸುತ್ತದೆ.)

**ರಾಮು:** ಅಬ್ಬಾ! ಈಕೆಯಂತೂ ವಿಪರೀತ ಸಿಟ್ಟ್ಯಾಗ ಅದಾಳ. ಸಿಟ್ಟಿನಲ್ಲಿರುವ ಹೆಣ್ಣನ್ನ ನೋಡಿದ್ರ ಸಾಕು ನನ್ನ ಕೈಕಾಲು ಥರಗುಟ್ಟಿ ನಡಗ್ತಾವ.

**ಕೈಲಾಶ:** (ತೋಟದೊಳಗಿಂದ ಕಮಲಾಳೊಂದಿಗೆ ಬರುತ್ತ) ಏನು ರಾಮು, ನಿನ್ನ

ಸಾಹೇಬರು ಬಂದರೇನು ?

**ರಾಮು:** ಸಾಹೇಬರು ಬಂದಿಲ್ಲ, ಮೇಮಸಾಹೇಬರು ಬಂದಿದ್ದಾರೆ. (ಇಷ್ಟರಲ್ಲಿ ಮೇಲಿನ ಕೋಣೆಯಿಂದ ಶೇಖರ ಮತ್ತು ದಮಯಂತಿಯ ಧ್ವನಿ ಕೇಳಿ ಬರುತ್ತದೆ. ಅವರಿಬ್ಬರೂ ಜೋರಾಗಿ ಮಾತನಾಡುತ್ತಿದ್ದರು.)

**ಕಮಲಾ:** ಶೇಖರ ಮೇಲಿದ್ದಾರಲ್ಲ.

**ಕೈಲಾಶ:** ಹಾಂ! ಇಬ್ಬರೂ ಮೇಲಿದ್ದಾರೆ.

**ರಾಮು:** ಸಾಹೇಬರು ಬಂದಿದ್ದನ್ನು ನಾನಂತೂ ನೋಡಲಿಲ್ಲ. (ಗುದ್ದಾಡುತ್ತಿರುವುದು ಈಗ ನಿಚ್ಚಳವಾಗಿ ಕೇಳಿಸುತ್ತಲಿದೆ. ಚೀನಿಮಣ್ಣಿನ ಪಾತ್ರೆಗಳು ಒಡೆಯುತ್ತಿರುವ ಸಪ್ಪಳ ಕೇಳಿಸುತ್ತದೆ, ಇದರೊಂದಿಗೆ ದಮಯಂತಿಯ ಚೀತ್ಕಾರ.)

**ಕೈಲಾಶ:** ನಡೆ, ಇಲ್ಲಿಂದ ಹೋಗೋಣ. ಇನ್ನೊಬ್ಬರ ಮನೆಯ ವಿಷಯದಲ್ಲಿ ನಾವು ಕೈಹಾಕುವುದು ಸರಿಯಲ್ಲ, ಸಾಧುವೂ ಅಲ್ಲ.

**ಕಮಲಾ:** ಒಳ್ಳೆಯ ಏಕಾಂತದ ಸ್ಥಳ ಹುಡುಕಿದ್ದಿರಿ ನೀವು, ಬಿರುಗಾಳಿಯ ಮುನ್ನ ಇರುವ ಮೌನದ ಹಾಗಿದೆ ಇದು.

**ಕೈಲಾಶ:** (ಹೋಗುತ್ತ) ಬೆಂಕಿ ತಿಂದವರು ಕಿಡಿ ಉಗಳಲೇ ಬೇಕಾಗುತ್ತದೆ. (ಕೈಲಾಶ ಮತ್ತು ಕಮಲಾ ಹೋಗುತ್ತಾರೆ. ಮೇಲೆ ಗುದ್ದಾಟ ಹಾಗೂ ಸಾಮಾನುಗಳು ಒಡೆಯುವ ಸಪ್ಪಳ ಇನ್ನೂ ಜೋರಾಗಿ ಕೇಳಿ ಬರುತ್ತದೆ, ಧ್ವನಿ ಜೋರಾದಂತೆ ಕೆಳಗೆ ಇರುವ ರಾಮು ಭಯದಿಂದ ನಡುಗಲಾರಂಭಿಸುತ್ತಾನೆ. ರಾಮು ಇನ್ನೂ ನಡುಗುತ್ತಲೇ ಇರುತ್ತಾನೆ; ಆಗಲೇ ಪರದೆ ಬೀಳುತ್ತದೆ.)

# ದ್ವಿತೀಯ ದೃಶ್ಯ

(ಸುಮಾರು ಮೂರು ತಿಂಗಳ ನಂತರ; ದೃಶ್ಯ ಅದೇ ಮುಚ್ಚಿದ ದಿವಾನಖಾನೆಯದು. ಎದುರಿಗಿರುವ ಸೋಫಾದ ಮೇಲೆ ದಮಯಂತಿ ಹಾಗೂ ಪ್ರೇಮ ಕುಳಿತಿದ್ದಾರೆ, ಪ್ರಥಮ ದೃಶ್ಯದಲ್ಲಿ ರಾಮು ಹಾಗೂ ಆಯಾ ಕುಳಿತ ಹಾಗೆ. ಅವರು ಕುಳಿತಲ್ಲಿಂದ ಹೊರಗೆ ಬರು-ಹೋಗುವವರೆಲ್ಲ ಕಾಣಿಸುತ್ತಾರೆ.

ಪ್ರೇಮನ ವಯಸ್ಸು ಸುಮಾರು ಇಪ್ಪತ್ತೈದು ಇರಬಹುದು. ಪರದೆ ಎತ್ತಿದಾಗ ಪ್ರೇಮನ ತುಟಿಯಲ್ಲಿ ಸಿಗರೇಟ ಇದೆ, ದಮಯಂತಿ ಕಡ್ಡಿ ಕೊರೆದು ಸಿಗರೇಟಿಗೆ ಹಚ್ಚುತ್ತಿದ್ದಾಳೆ.)

**ಪ್ರೇಮ:** (ಸಿಗರೇಟಿನ ಜುರುಕಿ ಎಳೆಯುತ್ತ) ನನಗ ಸಿಗರೇಟ ಸೇದಿಸಿದರ ನಿಮಗ ಸಿಗುವ ಮಜಾ ಏನು ?

**ದಮಯಂತಿ:** ಸ್ವಂತಾಗಿ ಮಾಡಲಾರದ್ದನ್ನು, ಇನ್ನೊಬ್ಬರಿಂದ ಮಾಡಿಸಿ ಮನುಷ್ಯ ಸಂತೋಷಪಡುತ್ತಾನೆ.

**ಪ್ರೇಮ:** ನಿಮಗ ಸಿಗರೇಟ ಸೇದುವಿಕೆಯಿಂದ ತಡೆಯುವವರು ಯಾರು ?

**ದಮಯಂತಿ:** ತಡೆಯುವವರು ಯಾರೂ ಇಲ್ಲ, ಆದರೆ ಹೆಂಗಸರು ಸಿಗರೇಟು ಸೇದುವುದು ನನಗೇ ವಿಚಿತ್ರವಾಗಿ ತೋರುತ್ತದೆ.

**ಪ್ರೇಮ:** ನಾನೂ ಸಿಗರೇಟ ಸೇದುತ್ತೇನೆ, ಆದರೆ ಕೇವಲ ನಿಮ್ಮ ಎದುರಿಗೆ ಮಾತ್ರ. ನಿಮ್ಮ ಹತ್ತಿರ ಹತ್ತು ನಿಮಿಷ ಕುಳಿತರೆ ಸಾಕು, ನನಗೆ ಸಿಗರೇಟು ಸೇದುವ ಇಚ್ಛೆಯಾಗುತ್ತದೆ. ಹಾಗ ನೋಡಿದರೆ ನಮ್ಮ ಆಫೀಸಿನಲ್ಲಿ ಇಡೀ ದಿನ ಅಲ್ಲಿ ದುಡಿಯುವವರೆಲ್ಲ ಸಿಗರೇಟು ಸೇದುತ್ತಲೇ ಇರುತ್ತಾರೆ. ಆದರ ನಾನು ಒಮ್ಮೆಯೂ ಸೇದುವುದಿಲ್ಲ.

**ದಮಯಂತಿ:** ಆದರ ನನಗ, ನೀನು ಸಿಗರೇಟು ಸೇದುತ್ತಿದ್ದರೆ ತುಂಬ ಪ್ರಿಯನಾಗಿ ತೋರುವೆ, ಪ್ರೇಮ.

**ಪ್ರೇಮ:** ನನಗ, ಹೆಂಗಸರು ಸಿಗರೇಟು ಸೇದುವುದು ತುಂಬ ಇಷ್ಟ. ಚೆಲುವೆ ಹೆಂಗಸು ತನ್ನ ತುಟಿಯಲ್ಲಿ ಉರಿಯುತ್ತಿರುವ ಸಿಗರೇಟ ಇಟ್ಟುಕೊಂಡು ಸೇದುತ್ತ ಹೊಗೆ ಬಿಡುತ್ತಿದ್ದರೆ, ಚಂದಿರನ ಎದುರಿನಲ್ಲಿ ಹಗುರಾದ ಮೋಡ ಚಲಿಸಿದ ಹಾಗೆ ಭಾಸವಾಗುತ್ತದೆ, ನನಗೆ. ಮತ್ತೆ ಅವಳು ಸಿಗರೇಟಿನ ಜುರುಕಿ ಎಳೆದು ಆ ಅಮಲಿನಲ್ಲಿ ಒಮ್ಮೆ ರೆಪ್ಪೆ ಮುಚ್ಚಿ ಮತ್ತೆ ತೆರೆಯುವ ದೃಶ್ಯ.... ಓ!... ನೀವೊಮ್ಮೆ ಸಿಗರೇಟ ಸೇದಿ ನೋಡಿ.

**ದಮಯಂತಿ:** (ಚೇಷ್ಟೆ ಮಾಡುತ್ತ) ನಾನೇನು ಚೆಲುವೆಯೇನಲ್ಲವಲ್ಲ!

**ಪ್ರೇಮ:** ಕುರೂಪಿ ಹೆಂಗಸರೂ ಸಿಗರೇಟ ಸೇದುತ್ತಾರೆ.

**ದಮಯಂತಿ:** ಸಿಗರೇಟಿನ ವಿಷಯದಲ್ಲಿ, ನನ್ನೊಳಗೆ ನನ್ನ ತಾಯಿಯ ಸಂಸ್ಕಾರ ಪ್ರಬಲವಾಗಿದೆ.

**ಪ್ರೇಮ:** ಅದಿರಲಿ, ಒಮ್ಮೆ ಸೇದಿಯಾದರೂ ನೋಡಿ.

**ದಮಯಂತಿ:** ಬೇಡ ಪ್ರೇಮ, ನೀನು ಸಿಗರೇಟು ಸೇದುತ್ತಿದ್ದರೆ,-ಯಾವುಳೋ ಚೆಲುವೆ ಸಿಗರೇಟಿನ ಜುರಕಿ ಎಳೆಯುತ್ತಿದ್ದರೆ ಅವಳು ನಿನಗೆಷ್ಟು ಸುಂದರಳಾಗಿ ಕಾಣುವಳೋ-ನನಗೆ ನೀನು ಅಷ್ಟೇ ಸುಂದರನಾಗಿ ಕಾಣುವೆ.

**ಪ್ರೇಮ:** ಅಂತೆಯೇ ನನಗೆ ಯಾವಾಗಲೂ ಸಿಗರೇಟ ಸೇದಿಸಲಾಗುತ್ತಿದೆ. ಅಲ್ಲವೆ?

**ದಮಯಂತಿ:** ನನ್ನ ಬ್ಯಾಗಿನಲ್ಲಿ, ನಿನಗಾಗಿ ಯಾವಾಗಲೂ ಸಿಗರೇಟ ಇದ್ದೇ ಇರುತ್ತವೆ. ನನ್ನ ಮನೆಯಲ್ಲಿ ಸಿಗರೇಟ, ನಿನ್ನ ಬರುವ ದಾರಿಯನ್ನೇ ಕಾಯುತ್ತಿರುತ್ತವೆ.

**ಪ್ರೇಮ:** ಹಾಂ! ಶೇಖರಂತೂ ಸಿಗರೇಟ ಸೇದುವುದಿಲ್ಲ.

**ದಮಯಂತಿ:** ನಾನೂ ಸೇದುವುದಿಲ್ಲ, ಶೇಖರನೂ ಸೇದುವುದಿಲ್ಲ, ಈ ಮನೆಯಲ್ಲಿ ಕೇವಲ ನೀನು ಮಾತ್ರ ಸೇದುವೆ.

**ಪ್ರೇಮ:** ನಾನು ಕೂಡ, ಈ ಮನೆಯಾಕೆಯ ಜೊತೆಗಿದ್ದಾಗ ಮಾತ್ರ ಸೇದುತ್ತೇನೆ.

**ಚೇತನ:** (ಎಡಗಡೆಯ ಕೋಣೆಯಿಂದ) ಮಮ್ಮಿ!

**ದಮಯಂತಿ:** ಬಂದೆ ಮಗು.

**ಪ್ರೇಮ:** ಚೇತನ ಈಗ ಹೇಗಿದ್ದಾನೆ?

**ದಮಯಂತಿ:** ಇನ್ನೂ ಅಷ್ಟು ಚೆನ್ನಾಗಿಲ್ಲ, ಜ್ವರ ಇಳಿಯುತ್ತಲೇ ಇಲ್ಲ, ಒಂದೊಮ್ಮೆ ಹೆಚ್ಚಾಗುತ್ತವೆ, ಕೆಲವೊಮ್ಮೆ ಕಡಿಮೆಯಾಗುತ್ತವೆ. ಪಾಪ, ಮಗುವಿನ ಬಣ್ಣ ಕೂಡ ಹಳದಿಯಾಗಿ ಹೋಗಿದೆ. ನಿನ್ನೆ ರಾತ್ರಿ ಮೂರ್ಛೆಯಲ್ಲಿ ಬಡಬಡಿಸತೊಡಗಿದ್ದ-ಮಮ್ಮಿ ಎಲ್ಲಿ, ನನ್ನ ಮಮ್ಮಿ ಎಲ್ಲಿ-ಎಂದು. ನಾನೋ ಅವನ ಹತ್ತಿರವೇ ಕುಳಿತಿದ್ದೆ. ಅತ್ತು-ಅತ್ತು ನನ್ನ ಸ್ಥಿತಿ ಚಿಂತಾಜನಕವಾಗಿತ್ತು, ಆದರೆ ಅವನ ತಂದೆಯ ಕಣ್ಣಲ್ಲಿ ಒಂದು ಹನಿ ಕಣ್ಣೀರು ಕೂಡ ಇರಲಿಲ್ಲ.

**ಪ್ರೇಮ:** ಮನುಷ್ಯ, ಕಣ್ಣೀರು ಹಾಕಿಯೇ ತನ್ನ ಅನುಕಂಪ ತೋರಿಸುವುದು ಅವಶ್ಯವಿದೆ ಏನು?

**ದಮಯಂತಿ:** ನೀನು ಯಾವಾಗಲೂ ಶೇಖರನ ಪಕ್ಷವನ್ನೇ ಏಕೆ ವಹಿಸುತ್ತಿ? ಎಷ್ಟಾದರೂ ಗಂಡಸರ ಜಾತಿ, ನೀವು ಎಂದೂ ಹೆಣ್ಣಿನ ಪಕ್ಷ ವಹಿಸುವುದೇ ಇಲ್ಲ. ನಿಮ್ಮವಳಾಗಲು ಅವಳು ಲಕ್ಷ ಸಲ ತನ್ನನ್ನು ಕಳೆದುಕೊಂಡರೂ ಸಹ! (ಕಣ್ಣಲ್ಲಿ ನೀರು ಬರುತ್ತವೆ).

**ಪ್ರೇಮ:** ನನ್ನ ಉದ್ದೇಶ ಇದಲ್ಲ, ದಮ್ಮಿ. ನಾನು ಸುಮ್ಮನೆ ಅಂದೆ, ಅಷ್ಟೆ.

**ಚೇತನ:** (ಒಳಗಿನಿಂದ) ಮಮ್ಮಿ!

**ದಮಯಂತಿ:** ಬಂದೆ ಮಗು.

**ಪ್ರೇಮ:** ನಿಜ ಅಂದರೆ, ಮಗುವಿನ ಅನಾರೋಗ್ಯದಿಂದಾಗಿ ನೀವು ಹೆದರಿಕೊಂಡಿದ್ದೀರಿ. ಅದರ ಸಿಟ್ಟನ್ನು ನನ್ನ ಮೇಲೆ ಹಾಕುತ್ತಿರುವಿರಿ.

**ದಮಯಂತಿ:** (ಕಣ್ಣೀರಿನಿಂದ ತುಂಬಿದ ಕಣ್ಣಿನಿಂದ ನಗತೊಡಗುತ್ತಾಳೆ) ಪ್ರೇಮ, ನೀನು ತುಂಬ ಕೆಟ್ಟವ. ನಾನು ಏನೇ ಮಾತನಾಡಿದರೂ, ಮನೋವಿಜ್ಞಾನದ ಯಾವುದೋ ಒಂದು ಅಸ್ತ್ರದಿಂದ ಅದನ್ನು ಚೂರು-ಚೂರು ಮಾಡಿ ಮಣ್ಣುಗೂಡಿಸಿಬಿಡುವೆ.

**ಪ್ರೇಮ:** ಹದಿನಾರು ವರ್ಷದ ಶಿಕ್ಷಣದಿಂದ ಇನ್ನೇನಾಗದಿದ್ದರೂ ಇದೊಂದು ಲಾಭ ನಾನು ಪಡೆದಿರುವೆ.

**ದಮಯಂತಿ:** ಇಂದಿನ ವಾತಾವರಣ ಅದೆಷ್ಟು ಸೊಗಸಾಗಿದೆ; ಪ್ರೀತಿ ಉಕ್ಕಿಸುವ ಹಾಗಿದೆ. ಶೀತಲಸಮೀರ ಚಲಿಸುತಿದೆ! ಮೋಡಗಳು ಒತ್ತಿ ಒತ್ತಿ ಬರುತ್ತಲಿವೆ; ಮುಂದೆ ಮುಂದೆ ಅವು ಹೋಗುತ್ತಿದ್ದರ ಚಲಿಸಿದ ಹಾಗೆ ಭಾಸವಾಗುತ್ತಲಿದೆ. ನಾನಂತೂ ಯೋಚಿಸುತ್ತಿದ್ದೇನೆ.... (ಹೇಳುತ್ತಿದ್ದಂತೆಯೇ ಸುಮ್ಮನಾಗುತ್ತಾಳೆ, ಯಾವುದೋ ಒಂದು ಮತ್ತತೆಯಿಂದ ಉನ್ಮತ್ತಳಾದ ಹಾಗೆ.)

**ಪ್ರೇಮ:** ಏನು ಯೋಚಿಸುತ್ತಿದ್ದೀರಿ ?

**ದಮಯಂತಿ:** ಚೇತನನಿಗೂ ಈಗಲೇ ಅನಾರೋಗ್ಯವಾಗಬೇಕಿತ್ತೆ ?

**ಪ್ರೇಮ:** ಆದರೇನಾಯಿತು ? ನೆಟ್ಟಗಾಗುತ್ತಾನೆ. ತಾಯಿಗೆ, ತನ್ನ ವಾತ್ಸಲ್ಯ ತೋರಲು ಮಗ ಅವಕಾಶ ನೀಡುತ್ತಿದ್ದಾನೆ.

**ದಮಯಂತಿ:** ಓ ! ಈಗಂತೂ ಶ್ರಾವಣ... ಮಳೆ ಬೀಳಲು ತವಕಿಸುತ್ತಿರುವ ಕಪ್ಪು ಮೋಡಗಳು... ದೂರ ದೂರದಿಂದ ಬೀಸುವ ಈ ತಂಪು ಗಾಳಿ.... ದೂರ ದೂರಕ್ಕೂ ಹೋಗುವ ಈ ಕುಳಿರ್ಗಾಳಿ, ಗಾಳಿಯಲ್ಲಿ ಸೂಸುವ ಈ ಸುಗಂಧ, ನಿನ್ನ ಉಸುರಿನ ಹಾಗಿರುವ ಸುಗಂಧದ ತರಹ !...ಓ !....

(ಕವಿತೆ ಬಹುಶಃ ಇಬ್ಬರಿಗೂ ಸೇರಿತೆಂದು ತೋರುತ್ತದೆ. ಅವರಿಬ್ಬರೂ ಮೌನರಾಗುತ್ತಾರೆ.)

**ಪ್ರೇಮ:** ಇನ್ನೂ ಶೇಖರ ಬರಲಿಲ್ಲ.

**ದಮಯಂತಿ:** ಬರುತ್ತಿರಬೇಕು, ಮಗನ ಹತ್ತಿರ ಕೂಡುವ ನನ್ನ ಡ್ಯೂಟಿ ಇನ್ನೇನು ಮುಗಿಯುತ್ತ ಬಂದಿದೆ, ಉಳಿದ ದಿನವೆಲ್ಲ ಶೇಖರ ಕೂಡುತ್ತಾನೆ, ಮತ್ತೆ ಅರ್ಧ ರಾತ್ರಿಯವರೆಗೂ ನಾನು ಕೂಡುತ್ತೇನೆ, ಇನ್ನರ್ದ ರಾತ್ರಿ ಶೇಖರ ಕೂಡುತ್ತಾನೆ.

**ಪ್ರೇಮ:** ನೀವು ಜೀವನವನ್ನು ಮಿಷನ್‌ದ ಹಾಗೆ ಮಾಡಿಕೊಂಡಿದ್ದೀರಿ, ನನಗಂತೂ ಕೆಲವೊಮ್ಮೆ ನಿಮ್ಮನ್ನು ಕಂಡರೆ ಭಯವೆನ್ನಿಸುತ್ತದೆ.

**ದಮಯಂತಿ:** ಇದರಲ್ಲಿ ಭಯವೇನು ಬಂತು ? ಪ್ರತಿ ದಿನವೂ ಮಾನಸಿಕ ಯಾತನೆ, ಪ್ರತಿದಿನವೂ ಒದರಾಟ, ನಿತ್ಯವೂ ಜಗಳ-ಇವೆಲ್ಲವುಗಳಿಗಿಂತ ಒಂದು ತಿಳುವಳಿಕೆಗೆ ಬರುವುದು ಒಳ್ಳೆಯದಲ್ಲವೇ ?

**ಪ್ರೇಮ:** ನಿಮ್ಮ ಈ 'ಶಾಂತಿ ತಿಳಿವಳಿಕೆ'ಯ ಕರಾರುಗಳೇನು ?

**ದಮಯಂತಿ:** ವಿದ್ಯಾವಂತ ಹಾಗೂ ಹೊಸ ವಿಚಾರಧಾರೆಯುಳ್ಳ ಜನರಂತೆ, ತನಗೆ ಬೇಕಾದಂತೆ ಬದುಕುವ ಹಕ್ಕು ಗಂಡಸಿಗೆ ಎಷ್ಟಿದೆಯೋ ಅಷ್ಟೇ ಹಕ್ಕು ಹೆಂಗಸಿಗೂ ಇದೆ-ಎಂದು ನಾವು ಕೂಡ ತೀರ್ಮಾನ ಮಾಡಿದ್ದೇವೆ.

**ಪ್ರೇಮ:** ಒಂದು ವೇಳೆ ಗಂಡಸು ತಪ್ಪು ಮಾಡಿದರೆ ಹೆಂಗಸು ಕೂಡ ಗಂಡಿನಷ್ಟೇ ಪ್ರಮಾಣದಲ್ಲಿ ತಪ್ಪು ಮಾಡಬೇಕು ಎನ್ನುತ್ತೀರಾ ?

**ದಮಯಂತಿ:** ಒಂದು ರೀತಿಯಲ್ಲಿ ಹೀಗೆಂದೂ ಅರ್ಥವಾಗುತ್ತದೆ; ಆದರೆ ನಮ್ಮ ನಿರ್ಣಯ ಇರುವುದು ಹೀಗೆ: ಅವರಿಗೆ ಬೇಕಾದ ಹಾಗೆ ತಮ್ಮ ಜೀವನ ನಡೆಸಬಹುದು, ನನಗೆ ಬೇಕಾದ ಹಾಗೆ ನನ್ನ ಮನಸ್ಸನ್ನು ಸಂತೋಷಪಡಿಸಿಕೊಳ್ಳಬಹುದು. ನನ್ನ ವೈಯಕ್ತಿಕ ಜೀವನದಲ್ಲಿ ಅವರ ಸಂಬಂಧ ಎಳ್ಳಷ್ಟೂ ಇಲ್ಲ, ಅದರಂತೆ ಅವರ ವ್ಯಕ್ತಿಗತ ಜೀವನದಲ್ಲಿ ನಾನು ಕೈಹಾಕುವುದಿಲ್ಲ.

**ಪ್ರೇಮ:** ಸರಿ, ಸರಿಯಾಗಿದೆ. ನನಗೆ ಬಹಳಷ್ಟು ಇನ್ನೂ ಕಲಿಯುವುದಿದೆ-ಎಂದೆನಿಸುತ್ತಲಿದೆ.

**ದಮಯಂತಿ:** ಈ ತಿಳಿವಳಿಕೆಯ ಲಾಭವೇನೆಂದರೆ ಈಗ ಈ ಮನೆಯಲ್ಲಿ ಪಾತ್ರೆ-ಪಗಡೆಗಳು ಸುರಕ್ಷಿತವಾಗಿವೆ. ಯಾರೂ ಯಾರ ಕಡೆಯೂ ಕಣ್ಣು ಕೆಂಪಗೆ ಮಾಡಿಕೊಂಡು ನೋಡುವ ಹಾಗಿಲ್ಲ, ಆಗಿದು ಆಗಿದು ಯಾರ ಮನಸ್ಸಿನಲ್ಲೂ ಹೋಗುವ ಪ್ರಯತ್ನ ಈಗ ನಡೆಯುವುದಿಲ್ಲ. ಇತ್ತೀಚೆ, ಈ ಮನೆಯಿಂದ ಜೋರಾಗಿ ಮಾತನಾಡುವುದನ್ನು ಯಾರೂ ಕೇಳಿಲ್ಲ.

**ಪ್ರೇಮ:** ಒಂದು ಮೌನ, ಸ್ಮಶಾನ ಮೌನವಿದ್ದ ಹಾಗೆ.

**ದಮಯಂತಿ:** ಅಲ್ಲ, ಈ ಮೌನ, ರಾತ್ರಿಯ ಮೌನವಾಗಿದೆ.

**ಪ್ರೇಮ:** ರಾತ್ರಿಯ ಕತ್ತಲೆಯ ಮೌನ !

**ದಮಯಂತಿ:** ಅಲ್ಲ, ರಾತ್ರಿಯ ಪರದೆಯ ಮೌನ, ಆದರ ಮರೆಯಲ್ಲಿ ಅಗಲಿದ ಆತ್ಮಗಳು ಕೂಡುತ್ತವೆ, ಹೃದಯದ ಲಕ್ಷ ಲಕ್ಷ ಆಶೆಗಳು ಚಿಗುರುತ್ತವೆ.

**ಪ್ರೇಮ:** ದರೋಡೆಕೋರರ ರೂಪದಲ್ಲಿ, ಕಳ್ಳತನದ ರೂಪದಲ್ಲಿ.

**ದಮಯಂತಿ:** ಇಂದು ನೀನು ಹೀಗೇಕೆ ಮಾತನಾಡುತ್ತಿರುವೆ, ಪ್ರೇಮ ?

**ಪ್ರೇಮ:** (ನಗುತ್ತ) ಗಂಡಸು ಹೆಣ್ಣಿನೊಂದಿಗೆ ಮಾತನಾಡಿದ ಹಾಗೆ.

**ದಮಯಂತಿ:** ಗುಲಾಮಳಾದ ಹೆಣ್ಣಿನೊಂದಿಗೆ.

**ಪ್ರೇಮ:** ತನ್ನ ಪ್ರೇಯಸಿಯೊಂದಿಗೆ, ತನ್ನ ಪತ್ನಿಯೊಂದಿಗೆ, ತನ್ನ ಮಕ್ಕಳ ತಾಯಿಯೊಂದಿಗೆ.

**ದಮಯಂತಿ:** ಪ್ರೇಮ, ನಿನ್ನಂಥವನು ಮಾಲಿಕನಾಗುವುದಾದರೆ ನಾನು

ಗುಲಾಮಳಾಗಲೂ ಸಿದ್ಧಳಾಗಿದ್ದೇನೆ. ಹಾಯ್, ಆ ದಿನ ಎಂದು ಬರುವುದೋ!

**ಪ್ರೇಮ:** ಅದೆಷ್ಟೋ ಸಲ ಸ್ವಪ್ನ ಲೋಕವೊಂದು ಕೇವಲ ಒಂದು ಕೈ ಅಳತೆಯ ದೂರದಲ್ಲಿರುತ್ತದೆ, ಆದರೆ ಯಾರೂ ಕೈಚಾಚಿ ಅದನ್ನು ಪಡೆಯಲು ಪ್ರಯತ್ನಿಸುವುದಿಲ್ಲ. (ಸಿಗರೇಟಿನ ಮೇಲೆ ಸಿಗರೇಟ ಸೇದುತ್ತಲಿರುತ್ತಾನೆ.)

**ದಮಯಂತಿ:** ಓ! ನನ್ನ ತಾಪತ್ರಯಗಳೇ! ಉಪಾಯಗಾಣದವಳಾಗಿದ್ದೇನೆ.

**ಪ್ರೇಮ:** ಶೇಖರನೊಂದಿಗೆ ನಿಮ್ಮ ಸಂಧಾನವಾಗಿದೆ, ಇಡೀ ಪಟ್ಟಣಕ್ಕೇ ನಮ್ಮ ಪ್ರೇಮದ ಸುದ್ದಿ ಗೊತ್ತಿದೆ, ಶೇಖರ ಮತ್ತು ಹುಸನಾರ ಸಂಬಂಧವೂ ಈ ಪಟ್ಟಣಕ್ಕೆ ಗೊತ್ತಿದೆ; ಈಗ ಇನ್ಯಾವ ನಿರುಪಾಯತೆ ನಿಮ್ಮನ್ನು ಕಾಡುತ್ತಲಿದೆ?

**ದಮಯಂತಿ:** ನನ್ನ ಮಗನ ವಿಷಯದಲ್ಲಿ ನಾನು ತುಂಬ ವಿವಶಳಾಗಿದ್ದೇನೆ; ಮಗನಿಂದ ಅವನ ತಂದೆಯನ್ನು ದೂರವಿಡುವ ಅಧಿಕಾರ ನನಗಿಲ್ಲ. ಒಂದು ವೇಳೆ, ಎಂದಾದರೂ ಅವನು ನಿನ್ನಲ್ಲಿ ತನ್ನ ತಂದೆಯನ್ನು ಕಾಣಲು ಸಾಧ್ಯವಾದರೆ! (ಚೇತನ ಅಶಕ್ತತೆಯಿಂದಾಗಿ ಜೋಲಿ ಹೊಡೆಯುತ್ತ ಹೊರಗೆ ಬರುತ್ತಾನೆ.)

**ಚೇತನ:** ಮಮ್ಮಿ

**ದಮಯಂತಿ:** (ಒಮ್ಮೆಲೇ ಗಾಬರಿಯಾಗಿ) ಅಯ್ಯೋ ಮಗು, ನೀನು ಪಲ್ಲಂಗದ ಮೇಲಿಂದ ಏಕೆ ಎದ್ದು ಬಂದೆ? (ಚೇತನನನ್ನು ಎತ್ತಿಕೊಳ್ಳುತ್ತಾಳೆ. ಪ್ರೇಮ ಎದುರಿಗೆ ಸೋಫಾದ ಮೇಲೆ ಕುಳಿತುಕೊಳ್ಳುತ್ತಾನೆ.)

**ಪ್ರೇಮ:** ಇವನು ಹೀಗೆ ಹೊರಗೆ ಬರಬಾರದಿತ್ತು.

**ದಮಯಂತಿ:** ಪರವಾಗಿಲ್ಲ.

**ಪ್ರೇಮ:** ತುಂಬ ಜ್ವರವಿದ್ದಾಗ ಹಾಸಿಗೆಯಿಂದ ಎದ್ದು ಓಡಾಡಬಾರದೆಂದು ಕೇಳಿದ್ದೇನೆ.

**ದಮಯಂತಿ:** ಅಯ್ಯೋ, ಈ ಡಾಕ್ಟರುಗಳ ಮಾತೋ! ಕೆಲವೊಮ್ಮೆ ಇಂಥ ಜ್ವರದಲ್ಲಿ ಏನೂ ತಿನ್ನಬಾರದೆಂದು ಹೇಳುತ್ತಿದ್ದರು, ಈಗ ರೋಗಿ ಬಯಸಿದರೆ ರೊಟ್ಟಿಯನ್ನೂ ತಿನ್ನಬಹುದೆಂದು ಹೇಳುತ್ತಾರೆ.

**ಪ್ರೇಮ:** (ಮಗುವಿನತ್ತ ನೋಡುತ್ತ) ತೋಳ ಮೇಲೆ ಮಲಗುತ್ತಲೇ ನಿದ್ರೆ ಹೋದ.

**ದಮಯಂತಿ:** (ಮಗುವಿನತ್ತ ಪ್ರೇಮಮಯ ದೃಷ್ಟಿ ಬೀರುತ್ತ) ಇದು ನನ್ನ ಪ್ರಾಣವಾಗಿದೆ. ಈ ಮಗುವಿನೊಂದಿಗೆ ನನ್ನ ಇಡೀ ಜೀವ ಬಂಧನಕ್ಕೊಳಗಾಗಿದೆ. ಒಂದು ವೇಳೆ ಇವನಿರದಿದ್ದರೆ ಪ್ರೇಮ, ನಾನು ಪಕ್ಷಿಯ ಹಾಗೆ ನಿನ್ನೊಂದಿಗೆ ಹಾರಿ ಹೋಗುತ್ತಿದ್ದೆ.

**ಪ್ರೇಮ:** ಹೇಗೆ ಮಲಗಿದ್ದಾನೆ ನೋಡಿ. ಎಲ್ಲಿಯಾದರೂ ಇವನಿಗೆ ಜ್ವರ ಹೆಚ್ಚಾಗಿಲ್ಲ ತಾನೇ? ತಾಯಿಯ ತಂಪು ಹೃದಯಕ್ಕೆ ಬಹಳ ಸಲ

ಮಗುವಿನ ಜ್ವರದ ತಾಪ ತಿಳಿಯದೆ ಹೋಗುತ್ತದೆ.

**ದಮಯಂತಿ:** ಪ್ರೇಮ, ನನ್ನ ಹಾಗೂ ಶೇಖರನ ನಡುವೆ ಒಂದು ವೇಳೆ ಚೇತನ ಇರದಿದ್ದರೆ ನಮ್ಮ ನಡುವಿನ ಸಂಬಂಧವೇ ಉಳಿಯುತ್ತಿರಲಿಲ್ಲ. ಹಾಂ! ಒಂದು ತಿಳುವಳಿಕೆ, ಅದನ್ನು ರೆಪ್ಪೆ ಬಡೆಯುವುದರೊಳಗಾಗಿ ಮುಗಿಸಿಬಿಡಬಹುದಾಗಿತ್ತು. ಎರಡು ಪಕ್ಷಿಗಳು ಒಂದು ಟೊಂಗೆಯ ಮೇಲೆ ಬಂದು ಕೂಡುತ್ತವೆ; ಇಬ್ಬರು ಪ್ರವಾಸಿಕರು ದಣವು ಆರಿಸಿಕೊಳ್ಳಲು ಕೆಲ ಸಮಯ ಧರ್ಮಶಾಲೆಯೊಂದರಲ್ಲಿ ತಂಗುತ್ತಾರೆ, ಎರಡು ಪ್ರತಿಬಿಂಬಗಳು ಒಂದು ಬೆಳಕಿನಲ್ಲಿ ಕೂಡಿಕೊಳ್ಳುತ್ತವೆ ಹಾಗೂ ಅಗಲುತ್ತವೆ. ಒಂದು ವೇಳೆ ಹೃದಯ ಹೃದಯ ಒಂದಾಗದಿದ್ದರೆ ಉಳಿದವುಗಳ ಮಿಲನಕ್ಕೆ ಏನು ಅರ್ಥವಿದೆ?

**ಆಯಾ:** (ಬಾಗಿಲಿನಿಂದ ರೋಮಾಳನ್ನು ಒಳಗೆ ಕಳಿಸುತ್ತ) ನಮಸ್ತೆ ಬಾಯಿ ಸಾಹೇಬಾ, ಮಗುವಿನ ಸ್ಥಿತಿ ಹೇಗಿದೆ? ನಮ್ಮ ರೋಮಾ ಸ್ಕೂಲಿನಿಂದ ತಡವಾಗಿ ಬಂದಳು, ಬಂದವಳೇ ಚೇತನ, ಚೇತನ ಎಂದು ಬಡಬಡಿಸ ಹತ್ತಿದಳು. ತುಂಬ ಹೊಂದಿಕೊಂಡಿದ್ದಾರೆ ಇಬ್ಬರೂ.

**ದಮಯಂತಿ:** ಬಾ ರೋಮಾ, ಬಾ ಮಗು.

**ಪ್ರೇಮ:** ಚೇತನ!

**ದಮಯಂತಿ:** ಮಗು ಚೇತನ, ನೋಡಿಲ್ಲಿ, ಯಾರು ಬಂದಿದ್ದಾರೆ ನೋಡು, ಮಗು. (ಚೇತನ ಕಣ್ಣು ತೆರೆಯುತ್ತಾನೆ ಹಾಗೂ ರೋಮಾಳನ್ನು ಕಂಡು ಅವನ ಮುಖದ ಮೇಲೆ ಮುಗುಳ್ನಗೆ ಮೂಡುತ್ತದೆ.)

**ದಮಯಂತಿ:** ಮಗುವಿಗೆ ಸಂತಸವಾಗಿದೆ.

**ಪ್ರೇಮ:** ಇದಕ್ಕೆ ಪ್ರೇಮವೆನ್ನುತ್ತಾರೆ. ಪ್ರೇಮ, ಸತ್ತವನನ್ನೂ ಬದುಕಿಸುತ್ತದೆ.

**ದಮಯಂತಿ:** ನಾನು ಇವನನ್ನು ಇವನ ಕೋಣೆಯಲ್ಲಿ ಮಲಗಿಸಿ ಬರುತ್ತೇನೆ. ಆಯಾ, ನೀನು ಇವನ ಬಳಿಯಲ್ಲಿಯೇ ಕೂತಿರು.

(ಮಗುವನ್ನು ಪಕ್ಕದ ಕೋಣೆಯಲ್ಲಿ ಮಲಗಿಸಿ ಬರುತ್ತಾಳೆ. ಆಯಾ ಹಾಗೂ ರೋಮಾ ಕೂಡ ಆ ಕೋಣೆಯಲ್ಲಿ ಹೋಗುತ್ತಾರೆ.)

**ಪ್ರೇಮ:** ನಿಮ್ಮ ರಾಮುನೊಂದಿಗೆ ತುಂಬ ಸ್ನೇಹವಿತ್ತಲ್ಲ, ಅದೇ ಆಯಾ ಏನು ಇವಳು?

**ದಮಯಂತಿ:** (ಪ್ರೇಮನತ್ತ ಸರಿದು ಕೂಡುತ್ತ) ಹಾಂ! ರಾಮುನ ಹೆಂಡತಿ ತುಂಬ ಕೆಟ್ಟವಳು, ಪಾಪ, ಇವಳನ್ನು ಸೇರಿಸಿಕೊಳ್ಳಲಿಲ್ಲ, ಅವಳ ಮಾತು ನಡೆಯದಂತೆ ಮಾಡಿದಳು.

**ಪ್ರೇಮ:** ಈಗ ಇವಳ ಗತಿ ಏನು?

**ದಮಯಂತಿ:** ತುಂಬ ಹೆದರಿಕೊಂಡಿದ್ದಾಳೆ. ಹೆದರಿಕೆಯಿಂದಾಗಿಯೇ ರಾಮುನತ್ತ ಕಣ್ಣೆತ್ತಿ ಕೂಡ ನೋಡುವುದಿಲ್ಲ. ಈ ಸೌಧದೊಳಗೆ ರೋಮಾಳನ್ನು ಅಡ್ಡಾಡಿಸಿಕೊಂಡು ಹೋಗುತ್ತಾಳೆ, ಆದರೆ ಮರೆತು ಕೂಡ ನೌಕರರ ಮನೆಗಳತ್ತ ನೋಡುವುದಿಲ್ಲ. ಇವಳು ಇಲ್ಲಿ ಇರುವವರೆಗೂ

ಹೆಂಡತಿಯು ಹೆದರಿಕೆಯಿಂದಾಗಿ ರಾಮು ಸೌಧದೊಳಗೆ ಬರುವುದಿಲ್ಲ.

**ಪ್ರೇಮ:** ಆಂ! ನಿಜಾನ.....

**ದಮಯಂತಿ:** ಒಂದು ಬೆಳುದಿಂಗಳ ರಾತ್ರಿ ನಾನು ಹೊರಗೆ ನೋಡಿದ ನೆನಪು ಈಗಲೂ ಇದೆ, ತೋಟದಲ್ಲಿ ಸರು ವೃಕ್ಷದ ಸಮೀಪ ನಿಂತ ಆಯಾ ರಾಮುನ ಬರುವಿಗಾಗಿ ಕಾಯುತ್ತಿದ್ದಳು, ಇತ್ತ ರಾಮು ಜಲ್ದಿ ಜಲ್ದಿ ತನ್ನ ಕೆಲಸ ಮುಗಿಸುವ ಯತ್ನದಲ್ಲಿದ್ದ. ಅಂದು ನಾನು ಇಡೀ ರಾತ್ರಿಯನ್ನು ಕಣ್ಣುಗಳಲ್ಲಿಯೇ ಕಳೆದೆ. ನಾನು, ಅದೇ ಸರು ವೃಕ್ಷದ ಸಮೀಪ ನಿನಗಾಗಿ ಕಾಯುತ್ತಲಿದ್ದೆ, ಆದರೆ ನಿನ್ನ ಕೆಲಸ ಮುಗಿಯುತ್ತಲೇ ಇರಲಿಲ್ಲ-ಎಂದು ನಾನು ಮೇಲಿಂದ ಮೇಲೆ ಭಾವಿಸಿಕೊಳ್ಳುತ್ತಿದ್ದೇನೆ.

**ಪ್ರೇಮ:** ಆದರೆ ನನಗೆ ಇದನ್ನು ಹೇಳಿ-ಇವಳ ಪ್ರೇಮದ ಗತಿ ಏನಾಯಿತು ?

**ದಮಯಂತಿ:** ಪ್ರೇಮ, ಪ್ರೇಮ ಮುಗಿದು ಹೋಯಿತು. ಪ್ರೇಮ ಬುದ್ಧಿಯಿಂದಾಗುತ್ತದೆ, ಹಣದಿಂದಾಗುತ್ತದೆ-ಎಂಬುದನ್ನು ನಾನು ಒಪ್ಪುತ್ತೇನೆ.

**ಪ್ರೇಮ:** ಇದೂ ಅಲ್ಲದೆ ವಯಸ್ಸಿನಿಂದಲೂ ಆಗುತ್ತದೆ.

(ಹೊರಗೆ ತೋಟದಲ್ಲಿ ಓರ್ವ ಹೆಣ್ಣಿನ ಚೀರಾಟ, ರಾಮು ತನ್ನ ಹೆಂಡತಿಯನ್ನು ಹೊಡೆಯುತ್ತಿದ್ದಾನೆ.)

**ಆಯಾ:** (ಯಾತನೆಯಿಂದ) ಅಯ್ಯೋ, ಬಾಯಿಯವರೆ, ಅವನು ಸಾಯಿಬಡಿಯುತ್ತಿದ್ದಾನೆ. (ಕೂಗುತ್ತ ಕಿಟಕಿಯಲ್ಲಿ ನೋಡಿ,) ಹೇಗ ಹೊಡೆಯುತ್ತಿದ್ದಾನೆ.

**ಪ್ರೇಮ:** ಸುಮ್ಮನಿರು, ಆಯಾ.

**ದಮಯಂತಿ:** ಮೆತ್ತಗೆ ಹೇಳು ಆಯಾ, ಮಗುವಿಗೆ ಆರಾಮ ಇಲ್ಲ.

(ಹೊರಗಿನಿಂದ ಈಗಲೂ ಹೊಡೆಯುವ-ಬಡಿಯುವ ಸಪ್ಪಳ ಕೇಳಿ ಬರುತ್ತಿದೆ.)

**ಆಯಾ:** (ಮೀನಿನ ಹಾಗೆ ಯಾತನೆ ಪಡುತ್ತ) ಬಾಯಿಯವರೆ, ನೋಡಿಯಾದರೂ ನೋಡಿ, ಹೇಗೆ ಕೊಲೆಗಡುಕನ ಹಾಗೆ ಹೊಡೆಯುತ್ತಿದ್ದಾನೆ.

**ಪ್ರೇಮ:** ಆಗಿದೆಯಾದರೂ ಏನು ?

**ದಮಯಂತಿ:** ಯಾರು, ಯಾರನ್ನು ಹೊಡೆಯುತ್ತಿದ್ದಾರೆ ?

**ಆಯಾ:** (ಕೈ ಸವರಿಕೊಳ್ಳುತ್ತ) ರಾಮು ಹೊಡೆಯುತ್ತಿದ್ದಾನೆ, ಸಂತಿಯನ್ನು, ತನ್ನ ಮನೆಯಾಕೆಯನ್ನು.

**ಪ್ರೇಮ:** ಇದರಿಂದ ನಿನಗೇನಾಗಬೇಕಾಗಿದೆ ?

**ಆಯಾ:** (ಅವಳ ಕಣ್ಣಿಂದ ಕಣ್ಣೀರು ಧಾರಾಕಾರವಾಗಿ ಹರಿಯುತ್ತಿದೆ) ಅಯ್ಯೋ, ಅವಳು ಅಳುವುದನ್ನು ನೋಡಿ, ಬಾಯಿಯವರೆ ಅವಳನ್ನು ಉಳಿಸಿ, ಬಹಳ ಕೆಟ್ಟ ರೀತಿಯಲ್ಲಿ ಒದೆಯುತ್ತಿದ್ದಾನೆ, ಗುದ್ದುತ್ತಿದ್ದಾನೆ.

(ಪ್ರೇಮ ಹಾಗೂ ದಮಯಂತಿ ಆಯಾಳ ಹತ್ತಿರ ಬಂದು ಎದುರಿನ

ಕಿಟಕಿಯಲ್ಲಿ ಹೊರಗೆ ನೋಡುತ್ತಾರೆ. ಹೊರಗಿನಿಂದ ಮೊದಲಿನಂತೆಯೇ ಚೀರಾಟ ಒದರಾಟದ ದನಿ ಕೇಳಿಸುತ್ತಲೇ ಇದೆ.)

**ದಮಯಂತಿ:** ಕಾಡು ಪಶುವಿನ ಹಾಗೆ ಹೊಡೆಯುತ್ತಿದ್ದಾನೆ, ದೆವ್ವ ಬಡಿದುಕೊಂಡವರ ಹಾಗೆ ಒದೆಯುತ್ತಲಿದ್ದಾನೆ.

**ಆಯಾ:** ಅಯ್ಯೋ, ನೀವು ಹೋಗಿ ಬಿಡಿಸಿಕೊಳ್ಳಿ. ದೇವರು ನಿಮ್ಮ ಜೋಡಿಯನ್ನು ಶಾಶ್ವತವಾಗಿಡಲಿ, ಬಾಯಿಯವರೇ ಹೋಗಿ ಅವಳನ್ನು ಬಿಡಿಸಿಕೊಳ್ಳಿ.

(ಈ ಮಾತನ್ನು ಕೇಳಿದ ಪ್ರೇಮ ಮತ್ತು ದಮಯಂತಿ ಅಚ್ಚರಿಪಡುತ್ತಾರೆ. ದಮಯಂತಿ ಹೊರಗೆ ಹೋಗುತ್ತಾಳೆ.)

**ಪ್ರೇಮ:** ಇವನು ಅವಳನ್ನು ಏಕೆ ಹೊಡೆಯುತ್ತಿದ್ದಾನೆ ?

**ಆಯಾ:** ರಾಮುನ ಮನೆಯಾಕೆ ಮಾಲಿಯ ತಮ್ಮನೊಂದಿಗೆ ಮಾತನಾಡುತ್ತಿದ್ದಳು. ನಾನು ಕಿಟಕಿಯಿಂದ ನೋಡುತ್ತಲಿದ್ದೆ. ಅಷ್ಟರಲ್ಲಿ ರಾಮು ಅತ್ತಿಂದ ಬಂದವನೇ ಅವಳನ್ನು ಎಳೆದು ಹೊಡೆಯಲಾರಂಭಿಸಿದ.

(ಹೊರಗೆ ಗದ್ದಲ ನಿಲ್ಲುತ್ತದೆ)

**ಪ್ರೇಮ:** ಇದರಿಂದ ನಿನಗೇನಾಗಬೇಕಾಗಿದೆ, ಆಯಾ ? ರಾಮುನ ಹೆಂಡತಿಯಂತೂ ನಿನ್ನೊಂದಿಗೆ ಯಾವಾಗಲೂ ಜಗಳಾಡುತ್ತಿರುತ್ತಾಳೆ.

**ಆಯಾ:** ಎಷ್ಟಾದರೂ ಹೆಣ್ಣಲ್ಲವೇ, ಸಾಹೇಬರೆ, ಮಗುವಿನ ತಾಯಿಯನ್ನು ಹೀಗೆ ಹೊಡೆಯುವುದು ಒಳ್ಳೆಯದಲ್ಲ.

**ಪ್ರೇಮ:** ರಾಮುನ ಹೆಂಡತಿ ಹಾಗೂ ಮಾಲಿಯ ತಮ್ಮ ಕೇವಲ ಮಾತನಾಡುತ್ತಿದ್ದರು, ಅಲ್ಲವೇ ?

**ಆಯಾ:** ಮಾತು ಮಾತಿನಲ್ಲಿ ಅವಳ ಸೆರಗು ಸರಿದಿತ್ತು ಆಗಲೇ ರಾಮು ಬಂದವನೇ ಅವಳ ಕೂದಲು ಹಿಡಿದು ದರದರನೇ ಎಳೆಯಲಾರಂಭಿಸಿದ. ಎಲ್ಲಿಯಾದರೂ ಹೀಗೆ ಮಾಡುವುದುಂಟೆ ? (ಒಳಗೆ ಕೋಣೆಯಲ್ಲಿ ನೋಡುತ್ತ) ಅಯ್ಯೋ, ಮಗು ಹೀಗೇಕೆ ಸುಸ್ತಾಗಿದೆ (ಹೋಗುತ್ತಾಳೆ.)

**ದಮಯಂತಿ:** ಈ ರಾಮು ತನ್ನ ಹೆಂಡತಿಗೆ ವಿಪರೀತ ಅಂಜುತ್ತಿದ್ದ, ಇಂದು ನೋಡಿ ಹೇಗೆ ಸಿಂಹದ ಹಾಗೆ ಗರ್ಜಿಸುತ್ತಿದ್ದಾನೆ.

**ಪ್ರೇಮ:** ಶಕ್ತಿ ಶರೀರದ್ದಲ್ಲ, ಶಕ್ತಿ 'ಸತ್ಯ'ದ್ದಾಗಿರುತ್ತದೆ. ಯಾವನು ಸತ್ಯವಂತನಾಗಿದ್ದಾನೊ ಅವನೇ ಶಕ್ತಿಶಾಲಿಯಾಗಿರುತ್ತಾನೆ.

**ದಮಯಂತಿ:** ನಿನ್ನ ಈ ದರ್ಶನ ನನಗೆ ತಿಳಿಯುವುದಿಲ್ಲ. ನನ್ನ ದೃಷ್ಟಿಯಲ್ಲಿ ಯಾವುದು ಸುಂದರವಾಗಿದೆಯೋ ಅದುವೇ ಸತ್ಯವಾಗಿದೆ.

**ಪ್ರೇಮ:** ಹೋಗಲಿ, ಈ ಚರ್ಚೆ ಬಹು ಗಂಭೀರ ಹಾಗೂ ಆಳವಾಗಿದೆ, ದೀರ್ಘವಾಗಿದೆ. ಈಗ, ನಾನು ಹೋಗುವ ಸಮಯ ಆಗಿದೆಯೋ ಇಲ್ಲವೋ ಎಂಬುದನ್ನು ಹೇಳಿ.

**ದಮಯಂತಿ:** (ಗಡಿಯಾರದತ್ತ ನೋಡಿ) ಹಾಂ! ಪ್ರೇಮ, ಈಗ ನೀನು ಹೋಗು.

ನಾನು, ಇನ್ನರ್ಧ ಗಂಟೆಯ ನಂತರ ನಿನ್ನನ್ನು ಕಾಣುವೆ.

**ಪ್ರೇಮ:** (ಮುಗುಳ್ನಗುತ್ತ) ಮಗುವಿನ ಆರೋಗ್ಯವನ್ನು ರೋಮಾ ಸರಿ ಮಾಡಿದ್ದಾಳೆ.

**ದಮಯಂತಿ:** ಆದರೂ ಕೂಡ ಒಂಬತ್ತು ಗಂಟೆಯಿಂದ ನನ್ನ ಡ್ಯೂಟಿ ಆರಂಭವಾಗುತ್ತದೆ. ಇಂದು ಲೇಟನಾಯಿಟ್ ಶೇಖರ ಮತ್ತು ಹುಸನಾ ಡ್ಯೂಟಿ ಮಾಡುತ್ತಾರೆ. (ಇಬ್ಬರೂ ಮುಗುಳ್ನಗುತ್ತಾರೆ. ಪ್ರೇಮ ಹೊರಟು ಹೋಗುತ್ತಾನೆ. ದಮಯಂತಿ ಅವನನ್ನು ಪ್ರೇಮ ತುಂಬಿದ ಕಣ್ಣುಗಳಿಂದ ನೋಡುತ್ತಿರುತ್ತಾಳೆ.)

**ಆಯಾ:** (ರೋಮಾಳ ಬೆರಳು ಹಿಡಿದುಕೊಂಡು ಬರುತ್ತಾಳೆ) ಚೇತನ ಮಲಗಿದ್ದಾನೆ. ನಾವಿನ್ನು ಬರುತ್ತೇವೆ ಬಾಯಿಯವರೆ.

**ರೋಮಾ:** ಚೇತನ ಎದ್ದ ಕೂಡಲೇ ನನಗ ಕರೆಕಳಿಸು ಆಂಟಿ. ನಾನು ಇಂದು ಇವನ ಹತ್ತಿರವೇ ಇರುತ್ತೇನೆ.

**ಆಯಾ:** ರೋಮಾಳ ಕೈಯನ್ನು ಚೇತನ ಹಿಡಿದುಕೊಂಡೇ ಇದ್ದ. ಮಾತಾಡುತ್ತ ಹಾಗೇ ನಿದ್ರೆ ಹೋದ. (ಹೊರಗೆ ಮೋಟರಿನ ಸಪ್ಪಳ)

**ರೋಮಾ:** ಚೇತನನ ಡ್ಯಾಡಿ ಬಂದಿದ್ದಾರೆ.

**ಆಯಾ:** ನಿನಗೆ ಹೇಗೆ ಗೊತ್ತು ?

**ರೋಮಾ:** ನಾನು ಅವರ ಮೋಟಾರಿನ ಹಾರ್ನ ಗುರುತಿಸುತ್ತೇನೆ.

**ಆಯಾ:** (ಹೋಗುತ್ತ) ಸರಿ, ನಾವು ಹೋಗುತ್ತೇವೆ, ಬಾಯಿಯವರೆ.

**ರೋಮಾ:** ನಮಸ್ಕಾರ ಆಂಟಿ.

**ದಮಯಂತಿ:** ಆಗಲಿ ಮಗು, ನಮಸ್ಕಾರ.

**ರೋಮಾ:** (ಹೋಗುತ್ತ) ಚೇತನ ಎದ್ದಾಗ, ನನಗೆ ಅವಶ್ಯ ಹೇಳಿಕಳಿಸಿ, ಆಂಟಿ.

**ಶೇಖರ:** (ಬರುತ್ತ) ಹಲೋ !

**ದಮಯಂತಿ:** ರೋಮಾಳ ಬಯಕೆ ಕೇಳಿದಿರೇನು ?

**ಶೇಖರ:** ಕೇಳಿದೆ ಮಹಾರಾಯಿತಿ, ಕೇಳಿದೆ. ಗಂಡಸಿನ ಕೆಲಸ ಇನ್ನೇನು ? ಹೆಣ್ಣಿನ ಬಯಕೆ ಕೇಳುವುದು ಅಥವಾ ಅವಳ ಬೇಡಿಕೆ ಪೂರೈಸುವುದು.

**ದಮಯಂತಿ:** ಹಾಗಾದರೆ ಇನ್ನೊಂದು ಬೇಡಿಕೆ, ನೀವು ಮಗುವಿನ ಹತ್ತಿರ ಡ್ಯೂಟಿ ಮಾಡಿ, ನಾನು ತಯ್ಯಾರ ಆಗಿ ಬರುತ್ತೇನೆ.

**ಶೇಖರ:** (ಗಡಿಯಾರದ ಕಡೆ ನೋಡುತ್ತ) ಆಗಲಿ, ಹಾಗೇ ಆಗಲಿ.

**ದಮಯಂತಿ:** (ಮೆಟ್ಟಲು ಹತ್ತಿ ತನ್ನ ಕೋಣೆಗೆ ಹೋಗುತ್ತಾಳೆ) ಮಗು ಮಲಗಿದ್ದಾನೆ. ಅವನ ಆರೋಗ್ಯ ಈಗ ಪರವಾಗಿಲ್ಲ, ಮೊದಲಿಗಿಂತ ಚೆನ್ನಾಗಿದೆ.

**ಶೇಖರ:** ಒಳ್ಳೇದು, ಒಳ್ಳೇದು ! (ಸೋಫಾದ ಮೇಲೆ ಕುಳಿತು ವಿಶ್ರಮಿಸುತ್ತಾನೆ, ಒಂದು ಕ್ಷಣ. ಅಷ್ಟರಲ್ಲಿ ಫೋನಿನ ಗಂಟೆ ಬಾರಿಸುತ್ತದೆ.) ಹಲೋ, ಹಾಂ ಹುಸನಾ, ನೀನಿನ್ನೂ ಹೊರಟಿಲ್ಲೇನು ? ....ಅರ್ಧ ಗಂಟೆಯಲ್ಲಿ ಬಂದುಬಿಡು. ನಾನು ಮೋಟರ ಕಳಿಸುತ್ತೇನೆ. ಏನು, ಇಲ್ಲ...ಇಲ್ಲ... ಈ ಕಿಮ್ಮತ್ತಿಗೆ ನೀನು ದುಬಾರಿಯೇನಲ್ಲ.... (ನಗುತ್ತ ಫೋನ

ಇಡುತ್ತಾನೆ ಹಾಗೂ ಕಾಲ್‌ಬೆಲ್ ಎರಡು ಸಲ ಒತ್ತುತ್ತಾನೆ.)

**ರಾಮು:** (ಬರುತ್ತ) ನಮಸ್ಕಾರ, ಸಾಹೇಬ್ರ.

**ಶೇಖರ:** ನಾನು ಎಷ್ಟು ಸಲ ಗಂಟೆ ಬಾರಿಸಿದೆ ?

**ರಾಮು:** ಏನಂದಿರಿ, ಎರಡು ಸಲ.

**ಶೇಖರ:** ಎರಡು ಗಂಟೆಯ ಉದ್ದೇಶ ಏನು ?

**ರಾಮು:** ಡ್ರಾಯಿವರ ಬರಬೇಕು ಎಂಬುದು.

**ಶೇಖರ:** ಹಾಗಾದರೆ ನೀನೇಕೆ ಬಂದೆ ?

**ರಾಮು:** ಸಾಹೇಬ್ರ, ಇವತ್ತು ನನ್ನ ತಲೆಯೇ ಸರಿ ಇಲ್ಲ.

**ಶೇಖರ:** ಏನಾಗಿದೆ ನಿನಗೆ ? ನಿನ್ನ ಸ್ಥಿತಿ, ಇದೇನು ಮಾಡಿಕೊಂಡಿರುವೆ ?

**ರಾಮು:** (ಅಳುತ್ತಾನೆ) ಸಾಹೇಬ್ರ, ಈ ಮಾಲಿಯ ತಮ್ಮ ಬಹಳ ಬದ್ಮಾಶ ಇದ್ದಾನೆ, ನನ್ನ ಮನೆಯಾಕೆಯನ್ನು ಅವನು ಓಡಿಸಿಕೊಂಡು ಹೋಗಬಹುದು.

**ಶೇಖರ:** ಒಂದು ವೇಳೆ ಅವಳಿಗೆ ಹೋಗುವ ಇಚ್ಛೆ ಇದ್ದರೆ ನೀನೇಕೆ ತಡೆಯುತ್ತಿರುವೆ ? ಹೋಗಲಿಬಿಡು.

**ರಾಮು:** ಇಲ್ಲ ಸಾಹೇಬರೆ, ಹಾಗೇನಾದರೂ ಆದರೆ ನಾನು ಹಾಳಾಗಿ ಹೋಗುತ್ತೇನೆ.

**ಶೇಖರ:** ಯಾವ ಹೆಂಗಸು ನಿನ್ನವಳಾಗಲು ಸಿದ್ಧಳಿಲ್ಲವೋ ಅಂಥವಳ ಬಗ್ಗೆ ನೀನೇಕೆ ಚಿಂತೆ ಮಾಡುವೆ ?

**ರಾಮು:** ಇಲ್ಲ ಸಾಹೇಬರೆ, ನಾನಂತೂ ಅವಳ ಕಾಲು ಮುರಿದು ಹಾಕುತ್ತೇನೆ. ನನ್ನನ್ನು ಬಿಟ್ಟು ಅವಳು ಹೇಗೆ ಹೋಗುತ್ತಾಳೆ !
(ಹೊರಗೆ ಮೋಟರಿನ ಸಪ್ಪಳ)

**ಶೇಖರ:** ಸರಿ, ನಾನು ಮಾಲಿಯನ್ನು ಕರೆಯಿಸಿ ಹೇಳುತ್ತೇನೆ. ಹುಸನಾಳ ಹಾಸ್ಪಲಿಗೆ ಹೋಗಿ ಅವಳನ್ನು ಕರೆತರಲು ಡ್ರಾಯಿವರನಿಗೆ ಹೇಳು.... ಹಾಗೇ ಹೊರಗೆ ನೋಡು ಯಾರು ಬಂದಿದ್ದಾರೆ.... ?

**ಕೈಲಾಶ**
**ಕಮಲಾ** } (ಬರುತ್ತ) ಹಲೋ !

**ಶೇಖರ:** ಹಲೋ, ಓ ! ಬನ್ನಿ, ಬನ್ನಿ, ನೀವು ಮದುವೆಯಾದಾಗಿನಿಂದ ಬಹು ಅಪರೂಪವಾಗಿಬಿಟ್ಟಿರಿ, ಹುಣ್ಣಿಮೆಯ ಚಂದಿರನ ಹಾಗೆ.

**ಕೈಲಾಶ:** ಏನನ್ನೂ ಕೇಳಬೇಡ ಶೇಖರ, ಈ ಮದುವೆ ನನಗೆ ತುಂಬ ದುಬಾರಿಯದಾಯಿತು.

**ಶೇಖರ:** ಸರಿ, ಸರಿ. ಸಸ್ತಾ ಆದವರು ಹಗಲೆಲ್ಲ ಅಳುತ್ತಾರೆ, ದುಬಾರಿಯಾದವರು ಒಂದೇ ಸಲ ಅಳುತ್ತಾರೆ.

**ಕಮಲಾ:** ನೀವೇನು ಅಂಥಾದ್ದು ಅನುಭವಿಸಿರೋದು ?

**ಕೈಲಾಶ:** ಓ ! ಅದು ಏನನ್ನೂ ಕೇಳಬೇಡ, ಒಮ್ಮೆ ಅದು, ಒಮ್ಮೆ ಇದು, ಹೀಗೆ ನೂರಾರು ಧಾರ್ಮಿಕ ಕಾರ್ಯಗಳು.

**ಶೇಖರ:** ನಮ್ಮ ದೇಶದಲ್ಲಿ ಮದುವೆಯ ನಂತರ ಏನಿಲ್ಲೆಂದರೂ ಒಂದು ವರ್ಷದವರೆಗೂ ಮದುವೆಯಾದವನು ಎಲ್ಲ ಕೆಲಸ ಬಿಟ್ಟು ಮದುವೆಯ ಛತ್ರದಲ್ಲಿಯೇ ಸುತ್ತಬೇಕಾಗುತ್ತದೆ.

**ಕೈಲಾಶ:** ನಾನಂತೂ ದಣಿದು ಹೋಗಿದ್ದೇನೆ.

**ಶೇಖರ:** ಕಮಲಾಳತ್ತ ನೋಡು, ಹೇಗೆ ಮೊಣಕೈವರೆಗೂ ಬಳೆ ಹಾಕಿಕೊಂಡಿದ್ದಾಳೆ.

**ದಮಯಂತಿ:** (ಭರ್ಜರಿ ಸಿಂಗರಿಸಿಕೊಂಡು ಮೆಟ್ಟಿಲು ಇಳಿಯುತ್ತಾಳೆ) ಹಲೋ!

**ಕೈಲಾಶ, ಕಮಲಾ:** ಹಲೋ, ಹಲೋ! (ಎಲ್ಲರೂ ಎದ್ದು ಪರಸ್ಪರ ಯೋಗಕ್ಷೇಮ ಮಾತನಾಡುತ್ತಾರೆ)

**ದಮಯಂತಿ:** ಕಮಲಾ, ನಿನ್ನ ಕಿವಿಯೋಲೆ ತುಂಬ ಚೆನ್ನಾಗಿವೆ; ನಿನಗಂತೂ ತುಂಬ ಸುಂದರವಾಗಿ ಕಾಣಿಸುತ್ತವೆ. ಮುಂಬಯಿಯಿಂದ ತರಿಸಿರಬೇಕು ಅಲ್ಲವೇ? ಈ ಹಾಳೂರಲ್ಲಿ ಏನು ಸಿಗುತ್ತೆ? ಮನುಷ್ಯ ವರ್ಷದಲ್ಲಿ ಒಮ್ಮೆಯಾದರೂ ಮುಂಬಯಿಗೆ ಹೋಗಬೇಕು-ಎಂದು ನಾನು ಯೋಚಿಸುತ್ತೇನೆ. ಇಲ್ಲಿಯುವ ಮುಂಬಯಿಗೆ ಹೋಗಲಿ ಅಥವಾ ಕಲಕತ್ತಾಕ್ಕೆ ಹೋಗಲಿ, ಈ ಊರಂತೂ ಒಂದು ಹಳೆಯ ಕಾಲದ ಹಳ್ಳಿ. ಆಫೀಸರರ ಹೆಂಡಂದಿರು, ಕಾರಕೂನರ ಹಾಗಿರುವ ಅವರ ಸ್ವಭಾವ, ಪೈಸೆ, ಪೈಸೆಗೂ ಜೀವ ಕೊಡುತ್ತಾರೆ.

**ಕೈಲಾಶ:** ಕ್ಷಮಿಸಿ, ಯಾವ ಕೆಲಸಕ್ಕಾಗಿ ಬಂದಿದ್ದೇವೆಯೋ, ಮೊದಲು ಅದನ್ನು ಕೇಳಗೊಡಿ.

**ಕಮಲಾ:** ಹಾಂ! ಹಾಂ! ಮಗುವಿನ ಆರೋಗ್ಯ ಈಗ ಹೇಗಿದೆ?

**ದಮಯಂತಿ:** ಇಂದು ಕೊಂಚ ವಾಸಿ. ಅವನೇ ನಡೆದುಕೊಂಡು ಇಂದು ಇಲ್ಲಿಯವರೆಗೂ ಬಂದಿದ್ದ. ತನ್ನ ಗೆಳತಿ ರೋಮಾಳೊಂದಿಗೆ ನಗುತ್ತ-ಕೆಲೆಯುತ್ತ ಮಾತನಾಡಿದ್ದಾನೆ.

**ಕೈಲಾಶ:** ದೇವರ ಅನುಗ್ರಹವಿರಲಿ! ಇತ್ತೀಚೆ ತುಂಬ ಕೆಟ್ಟ ರೋಗ ಹಬ್ಬಿದೆ. ನನಗಂತೂ ಕೇಳಿಯೇ ಪ್ರಾಣಹೋದ ಅನುಭವವಾಯಿತು.

**ಕಮಲಾ:** ಜ್ವರ ಯಾವುದಂತೆ?

**ಶೇಖರ:** ಇದು ಈ ವರೆಗೂ ಡಾಕ್ಟರರಿಗೆ ಗೊತ್ತಾಗಿಲ್ಲ.

**ಕಮಲಾ:** ಹಾಗಾದರೆ ಚಿಕಿತ್ಸೆ ಯಾವುದರ ಬಗ್ಗೆ ನಡೆದಿದೆ?

**ಶೇಖರ:** ಮೊದಲು ಗಂಟಲು ಕೆಟ್ಟಿದೆಂದು ಪೆನ್ಸಿಲಿನ್ ಕೊಡುತ್ತಿದ್ದರು, ಮತ್ತೆ ಮಲೇರಿಯಾದ ಚುಚ್ಚುಮದ್ದು ನೀಡಿದರು. ಈಗ ಟಾಯಿಫಾಯಿಡ್ ಎಂದು ಅದಕ್ಕೆ ಔಷಧಿ ಕೊಡುತ್ತಿದ್ದಾರೆ.

**ದಮಯಂತಿ:** ನಮ್ಮ ಹುಡುಗನಿಗೆ ಪೆನ್ಸಿಲ್‌ನ ಪ್ರಭಾವವೇ ಆಗುವುದಿಲ್ಲ; ಬಾಲ್ಯದಿಂದಲೂ ಅವನಿಗೆ ಪೆನ್ಸಿಲಿನ್ ತುಂಬ ಕೊಟ್ಟಿದ್ದಾರೆ, ಹೀಗಾಗಿ ಈಗ ಅದರ ಪ್ರಭಾವವೇ ಆಗುವುದಿಲ್ಲ.

**ಶೇಖರ:** ಏನೇ ಆಗಲಿ, ಜ್ವರ ಕಡಿಮೆಯಾಗಿದೆ, ಸಾಕು.

(ಫೋನಿನ ಗಂಟೆ ಕೇಳಿಸುತ್ತದೆ. ದಮಯಂತಿ ಮಾತನಾಡುತ್ತಾಳೆ.)

**ದಮಯಂತಿ:** ಹಲೋ, ಹಾಂ! ನಾನೇ ಮಾತನಾಡುತ್ತಿರುವೆ.... ಇನ್ನೇನು ಹೊರಡುತ್ತಿರುವೆ.... ಐದು ನಿಮಿಷದಲ್ಲಿ ತಲುಪುವೆ. (ಫೋನ ಇಡುತ್ತಾಳೆ.)

**ಕೈಲಾಶ:** ನಾವೂ ದಮ್ಮಿಯೊಂದಿಗೇ ಹೊರಡುತ್ತೇವೆ.

**ಕಮಲಾ:** ಹಾಂ! ಇದೇ ಸರಿ, ಹೊರಡೋಣ.

**ದಮಯಂತಿ:** ನೀವು ಕುಳಿತುಕೊಳ್ಳಿ, ಚಹಾ ತೆಗೆದುಕೊಳ್ಳಿ.

**ಕೈಲಾಶ:** ಬೇಡ, ನಮಗೆ ಕೊಂಚ ಅವಸರವಿದೆ.

**ಕಮಲಾ:** ಮನೆಗೆ ಹೋಗಿ ನಮಗಿನ್ನೂ ಎಲ್ಲೋ ಹೋಗಬೇಕಾಗಿದೆ.

**ದಮಯಂತಿ:** ನಾನು ಕ್ಲಬ್ಬಿಗೆ ಹೋಗುತ್ತಿರುವೆ, ನಿಮ್ಮನ್ನು ಮನೆಗೆ ಬಿಟ್ಟುಹೋಗುವೆ. (ಶೇಖರನ ಕೈ ಕುಲುಕಿ ಅತಿಥಿಗಳು ದಮಯಂತಿಯೊಂದಿಗೆ ಹೊರಗೆ ಹೋಗುತ್ತಾರೆ.)

**ಶೇಖರ:** (ಕರೆಯುತ್ತ) ರಾಮು

**ರಾಮು:** ಹಾಂ! ಸಾಹೇಬರೆ, ಬಂದೆ.

**ಶೇಖರ:** ನೀನೇನು ಮಾಡುತ್ತಿರುವೆ, ರಾಮು ?

**ರಾಮು:** ನಾನು ಮಗುವಿನ ಕೋಣೆ ಸ್ವಚ್ಛ ಮಾಡುತ್ತಿರುವೆ.

**ಶೇಖರ:** ಅಡಿಗೆಯವನಿಗೆ ಚಹಾ ತರಲು ಹೇಳು.

**ರಾಮು:** ಚೇತನಬಾಬುಗೆ ಜ್ವರ ಹೆಚ್ಚಾಗಿದೆ ಅಂತಾ ನನಗ ಅನಿಸುತ್ತಲಿದೆ, ಸಾಹೇಬ.

**ಶೇಖರ:** ಇಲ್ಲ, ಇಂದವನು ಆರಾಮ ಇದ್ದಾನೆ, ನಗುತ್ತಲಿದ್ದ, ಆಡುತ್ತಲಿದ್ದ, ಓಡುತ್ತಲಿದ್ದ ತನ್ನ ಕೋಣೆಯಲ್ಲಿ. (ಹೊರಗೆ ಮೋಟರಿನ ಸಪ್ಪಳ)

**ರಾಮು:** ಆಗಲಿ ಸಾಹೇಬರೆ, ನಾನು ಚಹಾದ ವ್ಯವಸ್ಥೆ ಮಾಡುವೆ.

**ಶೇಖರ:** ಹಾಂ! ಸ್ವಲ್ಪ ಜಲ್ದಿ.

**ಹುಸನಾ:** (ಗಗ್ಗರಿತೊಟ್ಟು, ತುರುಬಿಗೆ ಮಾಲೆಕಟ್ಟಿರೋ ಹತ್ತೊಂಬತ್ತು-ಇಪ್ಪತ್ತು ವರ್ಷದ ಸುಂದರ ತರುಣಿ ಬರುತ್ತ) ಹಲೊ....

**ಶೇಖರ:** ಹಲೊ.... ಹುಸನಾ! (ಎರಡೂ ಕೈಗಳಿಂದ ಇಬ್ಬರೂ ಪರಸ್ಪರರನ್ನು ಹಿಡಿದುಕೊಂಡು ನಗುತ್ತ ಕೂತುಕೊಳ್ಳುತ್ತಾರೆ.)

**ಹುಸನಾ:** ನೀವು ಯಾವಾಗ ಬಂದಿರಿ ?

**ಶೇಖರ:** ನನಗೆ ಇಂದು ಮತ್ತೆ ಆಫೀಸಿನಲ್ಲಿ ಹೊತ್ತಾಗಿತ್ತು. ಅಲ್ಲಿಂದ ನೇರವಾಗಿ ಕ್ಲಬ್‌ಗೆ ಹೋದೆ. ಮಗುವಿನ ಆರೋಗ್ಯ ಹೇಗಿದೆಯೋ ಏನೋ ಎಂದು ನಾನು ಯೋಚಿಸಿದೆ. ಕ್ಲಬ್‌ನಲ್ಲಿ ಸ್ನಾನ ಮಾಡಿ ಅರ್ಧ ಪೆಗ್ ವ್ಹಿಸ್ಕಿ ಕುಡಿದೆ ಹಾಗೂ ಮನೆಗೆ ಬಂದೆ. ದಾರಿಯಲ್ಲಿ ನಿಮ್ಮ ಹಾಸ್ಟಲ್ ಹತ್ತಿರದಿಂದಲೇ ಬಂದೆ. ಮಂದ ಮಂದ ಸುಗಂಧ ಬರುತ್ತಲಿತ್ತು, ನಾನು ಯೋಚಿಸಿದೆ, ನೀನು ಅವಶ್ಯ ಒಳಗಿರಬೇಕೆಂದು. (ಇಬ್ಬರೂ ನಗುತ್ತಾರೆ.)

ಹುಸನಾ: ಸರಿ, ಮಗುವಿನ ಸ್ಥಿತಿ ಹೇಗಿದೆ ?

ಶೇಖರ: ಸರಿಯಿದೆ, ತುಂಬ ಜಾಲಿಯಾಗಿದ್ದಾನೆ. ಇಂದೇ ಅವನ ತಾಯಿ ಹಗಲು ಅವನ ಹತ್ತಿರವಿದ್ದಳು, ಇಂದೇ ಅವನನ್ನು ಗುಣಪಡಿಸಿದ್ದಾಳೆ.

ಹುಸನಾ: ಹಾಗಾದರೆ ಈ ಸಂತೋಷದಲ್ಲಿ ಔತಣವಾಗಬೇಕಲ್ಲ !

ಶೇಖರ: ನಾನೂ ಅದೇ ಚಿಂತೆಯಲ್ಲಿದ್ದೇನೆ.

ಹುಸನಾ: ಚೇತನ ಎಲ್ಲಿದ್ದಾನೆ ?

ಶೇಖರ: ಮಲಗಿದ್ದಾನೆ, ಏಕೆ ?

ಹುಸನಾ: ಅವನು ಎಚ್ಚರಾಗಿದ್ದರೆ ಅವನ ಹತ್ತಿರ ಕುಳಿತುಕೊಳ್ಳಬೇಕೆಂದು ಮಾಡಿದ್ದೆ. ಅವನು ನನ್ನನ್ನು ಬೇರೆಯವಳು ಎನ್ನುವ ಭಾವನೆ ತೊರೆಯುವಂತೆ ಮಾಡಬೇಕಾದುದು ತುಂಬ ಅವಶ್ಯವಾಗಿದೆ, ಶೇಖರ.

ಶೇಖರ: ಅದು ಸರಿಯೇ. ಎಲ್ಲವೂ ಸರಿಯಾಗುತ್ತದೆ.

ಹುಸನಾ: ಸರಿ ಎಲ್ಲಿದೆ ? ಈ ವರೆಗೂ ಅವನು ಸರಿಯಾಗಿ ನನ್ನೊಂದಿಗೆ ಮಾತು ಕೂಡ ಆಡುವುದಿಲ್ಲ, ಬೇಕಾದಷ್ಟು ಅವನಿಗೆ ಆಶೆ ತೋರಿಸಿರುವೆ, ಬೇಕಾದಷ್ಟು ಪ್ರೀತಿ ಮಾಡಿರುವೆ.

ಶೇಖರ: ಹುಸನಾ, ನೀನು ಯಾವುದರ ಬಗ್ಗೆಯೂ ಚಿಂತೆ ಮಾಡಬೇಕಿಲ್ಲ. ಜೀವನದಲ್ಲಿ ಸೌಂದರ್ಯ ಹುಟ್ಟಿಸುವುದೇ ನಿನ್ನ ಕೆಲಸ, ಅದು ಆದರೆ ಸಾಕು.

ಹುಸನಾ: ನಾವು ಯಾವುದಾದರೂ ಸುಂದರ ಮೂರ್ತಿಯನ್ನೇಕೆ ಇಟ್ಟುಕೊಳ್ಳು ವುದಿಲ್ಲ ? ಮನುಷ್ಯನ ಸೌಂದರ್ಯ ಎಂದಾದರೂ ಹಾಳಾಗಬಲ್ಲುದು, ಬಾಡಬಲ್ಲುದು. ಕಲ್ಲಿನಮೂರ್ತಿಯದಾದರೆ ಸೌಂದರ್ಯ ಎಷ್ಟೂ ಕೆಡದೆ ಇದ್ದ ಹಾಗೆಯೇ ಇರುತ್ತದೆ.

ರಾಮು: (ಹೊರಗಿನಿಂದ) ಸಾಹೇಬರ !

ಶೇಖರ: ಏನು ರಾಮು ?

ಹುಸನಾ: ಒಳಗೆ ಬಾ.

ರಾಮು: ಸಾಹೇಬ...

ಶೇಖರ: ಚಹಾ ಆಗಿರದಿದ್ದರೆ, ವ್ಹಿಸ್ಕಿಯನ್ನೇ ತೆಗೆದುಕೊಂಡು ಬಾ.

ರಾಮು: ಸಾಹೇಬರ, ಚೇತನಬಾಬುಗೆ ಜ್ವರ ಬಹಳವಿದೆಂದೆನಿಸುತ್ತದೆ.

ಹುಸನಾ: ಏನಂದೆ ?

ರಾಮು: ಜ್ವರದ ತಾಪದಿಂದ ಮಗು ಮೂರ್ಛೆ ಹೋಗಿದ್ದನೆಂದೆನಿಸುತ್ತದೆ.

ಶೇಖರ: ನಾನು ನೋಡ್ತೀನಿ.

(ಹುಸನಾ ಹಾಗೂ ಶೇಖರ ಪಕ್ಕದ ಕೋಣೆಯೊಳಕ್ಕೆ ಬರುತ್ತಾರೆ.)

ರಾಮು: (ಕೈ ಜೋಡಿಸುತ್ತ) ಓ ! ದೇವರೆ, ನಮ್ಮ ಚೇತನನ ರಕ್ಷಕ ನೀನೇ ಆಗಿರುವೆ. ಈ ಮುಗ್ಧ ಬಾಲಕನ ಸಂರಕ್ಷಕ ನೀನೇ ಆಗಿರುವೆ. ಓ ! ದೇವರೆ, ಈ ಬಾಲಕನನ್ನು ಉಳಿಸು. ಈ ಬಾಲಕನನ್ನು ಕಾಪಾಡು.

ಓ! ದೇವರೆ!, ಓ! ದೇವರೆ, ಓ! ಭಗವಾನ್!
(ಕೈ ಜೋಡಿಸಿಕೊಂಡು, ಒಂದು ಮೂಲೆಯಲ್ಲಿರುವ ಕೃಷ್ಣನ ಚಿತ್ರಕ್ಕೆ ರಾಮು ಪ್ರಾರ್ಥನೆ ಸಲ್ಲಿಸುತ್ತಿದ್ದಾನೆ.)

**ಶೇಖರ:** (ಗಾಬರಿಗೊಂಡು ಬಂದು ಫೋನ ಮಾಡುತ್ತಾನೆ) ಡಾಕ್ಟರ, ನಾನು ಶೇಖರ ಮಾತನಾಡುತ್ತಿದ್ದೇನೆ. ಮಗುವಿನ ಆರೋಗ್ಯ ತುಂಬ ಕೆಟ್ಟಿದೆ, ತಾವು ತೀವ್ರ ಬರಲು ಸಾಧ್ಯವೇ ?....ಓ! ಧನ್ಯವಾದ. (ಫೋನ್ ಇಟ್ಟು ಮಗುವಿದ್ದ ಕೋಣೆಯೊಳಗೆ ಹೋಗುತ್ತಾನೆ.)

**ಹುಸನಾ:** (ಬರುತ್ತ) ರಾಮು, ನೀನು ಅಲ್ಲಿ ನಿಂತುಕೊಂಡು ಏನು ಮಾಡುತ್ತಿರುವೆ ಬರ್ಫ ತಂದು ಮಗುವಿನ ಹಣೆಯ ಮೇಲಿಡು.

**ರಾಮು:** (ಅಳುತ್ತ) ಇದು ದೇವರನ್ನು ಸ್ಮರಿಸುವ ಸಮಯ ಮೇಮಸಾಬ, ನಾನು ದೇವರಿಂದ ಚೇತನನ ಭಿಕ್ಷೆ ಬೇಡುತ್ತಿದ್ದೇನೆ. (ಪ್ರಾರ್ಥನೆ ಮಾಡುತ್ತಲಿರುತ್ತಾನೆ.)

**ಹುಸನಾ:** ನೀನು ಹುಚ್ಚ, ಹುಚ್ಚನಾಗಿಯೇ ಉಳಿದೆ, ರಾಮು. ನಾನೇ ಹೋಗಿ ಬರ್ಫ ತರುತ್ತೇನೆ. (ವೇಗವಾಗಿ ಹೋಗುತ್ತ ಎದುರಿನ ಬಾಗಿಲಿನಿಂದ ಹೊರಗೆ ಬರುತ್ತಾಳೆ.)

**ರಾಮು:** (ಪ್ರಾರ್ಥನೆ ಸಲ್ಲಿಸುತ್ತ) ಓ! ದೇವರೆ, ಈ ಮಗುವಿಗೆ ಏನೂ ಆಗದಿರಲಿ. ಹಾಗೇನಾದರೂ ಆದರೆ ಈ ಮನೆ ಹಾಳಾಗಿ ಹೋಗುತ್ತದೆ. ಓ! ದೇವರೇ, ಓ! ಈಶ್ವರ, ಓ! ಮುರಲೀಧರ!

**ಹುಸನಾ:** (ಬರ್ಫ ತೆಗೆದುಕೊಂಡು ಬರುತ್ತ) ನೀನು ಈವರೆಗೂ ಅಲ್ಲಿ ನಿಂತು ಒಟ ಒಟ ಅನ್ನುತ್ತಿರುವೆ, ಇನ್ನೂ. (ಮಗುವಿನ ಕೋಣೆಯಲ್ಲಿ ಹೋಗುತ್ತಾಳೆ.)

**ಶೇಖರ:** (ಬರುತ್ತ) ರಾಮು, ನೀನು ಇಲ್ಲಿ ನಿಂತು ಏನು ಮಾಡುತ್ತಿರುವೆ? ಒಳಗೆ ಹೋಗಿ ಹುಸನಾಳಿಗೆ ಸಹಾಯ ಮಾಡು.

**ರಾಮು:** ಸಾಹೇಬರ, ಈ ಸಮಯದಲ್ಲಿ ಭಗವಂತನ ಕರುಣೆ ಬೇಕು, ಮಗು, ನಮ್ಮ ಕೈಬಿಟ್ಟಂತೆ..... ಎಂದೇ ತಿಳಿಯಿರಿ. (ಅಳುತ್ತ) ಓ! ದೇವರೇ, ಈ ಮಗುವಿನ ಕೂದಲು ಕೊಂಕಾಗದಂತೆ ಕಾಪಾಡು.

**ಶೇಖರ:** (ಫೋನಿನ ನಂಬರು ಕೂಡಿಸುತ್ತ) ಮೆಟ್ರೊ ಕ್ಲಬ್? ಮಿಸೆಸ್ ಶೇಖರ ಅಲ್ಲಿರಬಹುದು... ಅವರನ್ನು ಕೊಂಚ ಕರೆಯುತ್ತಿರಾ ?... ಏನಂದಿರಿ... ? ಹೊರಟು ಹೋಗಿದ್ದಾರೆಯೇ ?.... ಯಾವಾಗ ?... ಈಗ ತಾನೇ... ?
(ಫೋನ್ ಇಡುತ್ತಾನೆ.)
(ಹೊರಗೆ ಡಾಕ್ಟರರ ಮೋಟರ ಬರುತ್ತದೆ, ಡಾಕ್ಟರ ವೇಗವಾಗಿ ಒಳಗ ಬರುತ್ತಾರೆ.)

**ಶೇಖರ:** ಡಾಕ್ಟರ, ಈಗ ತಾನೇ ಚೆನ್ನಾಗಿದ್ದ. ಜ್ವರ ಒಮ್ಮಲೇ ಹೆಚ್ಚಾಗಿವೆ. ಮೂರ್ಛಿತನಾಗಿದ್ದಾನೆ.

(ಇಬ್ಬರೂ ಮಗುವಿನ ಕೋಣೆಗೆ ಹೋಗುತ್ತಾರೆ.)

ರಾಮು: (ಪ್ರಾರ್ಥಿಸುತ್ತ) ಓ! ದೇವರೆ, ಈ ಮಗುವನ್ನು ನೀನು ತೆಗೆದುಕೊಂಡರೆ, ಈ ಮನೆ ಸತ್ಯಾನಾಶವಾಗುತ್ತದೆ.

ಹುಸನಾ: (ಕಣ್ಣು ತುಂಬ ಕಣ್ಣೀರು) ರಾಮು, ನಿನ್ನನ್ನು ಕರೆಯುತ್ತಿದ್ದಾರೆ.

ರಾಮು: ಬಂದೆ, ಮೇಮಸಾಬ. (ರಾಮು ಒಳಗೆ ಹೋಗುತ್ತಾನೆ)

ಹುಸನಾ: (ಒಂದು ಕ್ಷಣ ಏನೂ ತಿಳಿಯಲಾರದವಳಂತಿದ್ದು, ನಂತರ ಬಿಕ್ಕಿ ಬಿಕ್ಕಿ ಅಳುತ್ತಾಳೆ.) ಇಲ್ಲ, ಇಲ್ಲ ಹೀಗೆ ಎಂದೂ ಆಗಲಾರದು. ಓ! ಕೃಪಾಳುವೇ, ಚೇತನನಿಗೆ ಏನೂ ಆಗದಿರಲಿ. (ತನ್ನನ್ನು ತಾನು ಸಂಬಾಳಿಸಿಕೊಂಡು ಸೋಫಾದ ಮೇಲೆ ಕೂಡುತ್ತಾಳೆ, ಅಳುತ್ತಲೇ. ತನ್ನ ಜಡೆಯಲ್ಲಿದ್ದ ಮಾಲೆಯನ್ನು ತೆಗೆದು ಹತ್ತಿರವಿದ್ದ ಮೇಜಿನ ಮೇಲೆ ಇಡುತ್ತಾಳೆ.)

ಶೇಖರ: (ಫೋನಿನ ನಂಬರ ಕೂಡಿಸುತ್ತ) ಹಲೋ, ಸಿವಿಲ್‌ಸರ್ಜನ್...ಏನಂದ್ರಿ, ನಾನು ಶೇಖರ ಮಾತನಾಡುತ್ತಿರುವೆ. ನಮ್ಮ ಮಗುವಿನ ಆರೋಗ್ಯ ತುಂಬ ಕೆಟ್ಟಿದೆ. ಆಂ!...ಡಾಕ್ಟರ ಕಪೂರ ಬಂದಿದ್ದಾರೆ. ಅವರು ನಿಮ್ಮ ಸಲಹೆ ಪಡೆಯಲು ಬಯಸಿದ್ದಾರೆ. ಡಾಕ್ಟರ ಸಾಹೇಬ, ದೇವರಿಗಾಗಿ ತೀವ್ರ ಬನ್ನಿ, ನನ್ನ ಮಗ ಕೈಬಿಟ್ಟು ಹೋಗುತ್ತಿದ್ದಾನೆ....ತೀವ್ರ ಬನ್ನಿ, ಡಾಕ್ಟರ....

ಹುಸನಾ: (ನೀರ್ದುಂಬಿದ ಕಣ್ಣಿನಿಂದಲೇ ಶೇಖರನತ್ತ ನೋಡುತ್ತಾಳೆ.) ಶೇಖರ... ? (ಶೇಖರ ಗಾಬರಿಯಿಂದಾಗಿ, ಹುಸನಾಳ ಕಡೆ ನೋಡದೆ ಹೊರಟು ಹೋಗುತ್ತಾನೆ.)

ರಾಮು: (ಗಾಬರಿಯಿಂದ ಬರುತ್ತಾನೆ) ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ. (ರಾಮ, ರಾಮ ಅನ್ನುತ್ತ ಹೊರಗೆ ಹೋಗುತ್ತಾನೆ.)

ಶೇಖರ: (ಮತ್ತೆ ಫೋನ ಮಾಡಲು ಬರುತ್ತಾನೆ) ಯಾರು, ಡಾಕ್ಟರ ಆಹೂಜಾ ಅವರೇನು ? ಡಾಕ್ಟರ, ನಾನು ಶೇಖರ ಮಾತಾಡುತ್ತಿದ್ದೇನೆ.... ನನ್ನ ಮಗ ಮೂರ್ಛಿತನಾಗಿದ್ದಾನೆ. ಡಾಕ್ಟರ ಕಪೂರ ಅವರು ನಿಮ್ಮ ಸಲಹೆಗಾಗಿ ಕರೆಯುತ್ತಿದ್ದಾರೆ... ಸಿವಿಲ್ ಸರ್ಜನರೂ ಬರುತ್ತಿದ್ದಾರೆ.... ಡಾಕ್ಟರ, ತೀವ್ರ ಬನ್ನಿ...ದೇವರಿಗಾಗಿ....

ಹುಸನಾ: (ಕಣ್ತುಂಬ ಕಣ್ಣೀರು, ಶೇಖರನತ್ತ ನೋಡುತ್ತ) ಶೇಖರ, ನನ್ನ ಪ್ರಾಣವೇ! (ಚಿಂತೆಯಲ್ಲಿ ಮುಳುಗಿದ ಶೇಖರ ಈ ಸಲವೂ ಹುಸನಾಳತ್ತ ನೋಡದೆ ಹೊರಟು ಹೋಗುತ್ತಾನೆ.)

ಹುಸನಾ: (ತನ್ನಷ್ಟಕ್ಕೆ ತಾನು) ಈ ಮನೆಯಿಂದ ನಾನು ಹೊರಟು ಹೋಗಬೇಕು.

ರಾಮು: (ವೇಗವಾಗಿ ಬರುತ್ತಾನೆ) ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ. (ರಾಮ ರಾಮ ಎನ್ನುತ್ತ ವೇಗವಾಗಿ ಹೊರಟು ಹೋಗುತ್ತಾನೆ.)

**ಹುಸನಾ:** ಈ ಮನೆಯಿಂದ ಈಗ ನಾನು ಹೊರಟು ಹೋಗಬೇಕು...

**ಆಯಾ:** (ಗಾಬರಿಯಿಂದ ಬರುತ್ತಾಳೆ) ಜ್ವರದಿಂದಾಗಿ ಮಗು ಮೂರ್ಛೆಯಲ್ಲಿದೆ ಎಂದು ನನಗೆ ಆಗಲೂ ಅನ್ನಿಸುತ್ತಲಿತ್ತು. (ವೇಗ-ವೇಗವಾಗಿ ಕೈ ಸವರಿಕೊಳ್ಳುತ್ತ ಚೇತನನ ಕೋಣೆಯೊಳಗೆ ಹೊರಟು ಹೋಗುತ್ತಾಳೆ.)

**ಹುಸನಾ:** (ಸ್ವಗತ) ಈ ಮನೆಯಲ್ಲಿ ನನ್ನ ಸ್ಥಾನ ಯಾವುದು ? ಈಗ ನಾನು ಹೊರಟು ಹೋಗಬೇಕು.

(ರೋಮಾ ಗಾಬರಿಯಾಗಿ ಜಲ್ದಿ-ಜಲ್ದಿ ಬರುತ್ತಾಳೆ, ಹಾಗೂ ಚೇತನನ ಕೋಣೆಯೊಳಗೆ ಹೋಗುತ್ತಾಳೆ.)

**ಹುಸನಾ:** (ಕಣ್ತುಂಬ ಕಣ್ಣೀರು ಸ್ವಗತ) ಈ ಮನೆಯಲ್ಲಿ ನನಗಾವ ಸ್ಥಾನವೂ ಇಲ್ಲ. ಈ ಮನೆಯಲ್ಲಿ ರಾಮುಗೆ ಸ್ಥಾನವಿದೆ, ಈ ಮನೆಯಲ್ಲಿ ಪಕ್ಕದ ಮನೆಯ ಆಯಾಳಿಗೆ ಸ್ಥಾನವಿದೆ, ಈ ಮನೆಯಲ್ಲಿ ನನಗಾವ ಸ್ಥಾನವೂ ಇಲ್ಲ. ನಾನು ಈ ಮಗುವಿಗೆ ಏನಾಗಬೇಕು ? ನಾನು ಈ ಮಗುವಿನ ತಂದೆಗೆ ಏನಾಗಬೇಕು ? ಬಹುಶಃ ನಾನು, ಅವನಿಗೆ ಅವನ ತಪ್ಪುಗಳ ನೆನಪು ಮಾಡಿಕೊಡುತ್ತಿರುವೆ. ನನಗೆ ಈ ಮನೆಯಲ್ಲಿ ಯಾವ ಸ್ಥಾನವೂ ಇಲ್ಲ, ಓ ! ನನಗೆ ಈ ಮನೆಯಲ್ಲಿ ಯಾವ ಸ್ಥಾನವೂ ಇಲ್ಲ... ಈ ಮನೆಯಲ್ಲಿ ನನಗೆ... (ಹೀಗೆ ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುತ್ತ ಹೊರಗೆ ಹೊರಟು ಹೋಗುತ್ತಾಳೆ.)

**ರಾಮು:** (ಜಲ್ದಿ ಜಲ್ದಿ) ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ, ರಾಮ...

**ಆಯಾ:** (ರೋಮಾಳೊಂದಿಗೆ ಹೋಗುತ್ತ) ನಡೆ ಬೇಬಿ, ನಿನ್ನ ಚೇತನನಿಗೆ ಚೆನ್ನಾಗಿಲ್ಲವಂತೆ....

**ರೋಮಾ:** ಚೇತನ ಏಕೆ ಮೂರ್ಛೆ ಹೋಗಿದ್ದಾನೆ ?

**ಆಯಾ:** ಮೂರ್ಛೆ ಅಲ್ಲ ಬೇಬಿ, ಮಲಗಿದ್ದಾನೆ.

**ರೋಮಾ:** ಅಯಾ, ನೀನು ಮುದುಕಿಯಾದೆ, ಈಗಲೂ ನಿನಗೆ ಏನೂ ತಿಳಿಯುವುದಿಲ್ಲ. ಅವನು ಮೂರ್ಛೆ ಹೋಗಿದ್ದಾನೆ.

**ಆಯಾ:** ಸರಿ, ಮಗು. ಹಾಗೇ ಇರಬಹುದು, ನೀನು ಅಂದ ಹಾಗೆ. ಈಗಿನ ಮಕ್ಕಳು.... ನಿನ್ನಿಂದ ಮುಚ್ಚಿಡಲು ಹೇಗೆ ಸಾಧ್ಯ.... ? (ಇಬ್ಬರೂ ಹೋಗುತ್ತಾರೆ.)

**ದಮಯಂತಿ:** (ರಾಮುನೊಂದಿಗೆ ಬರುತ್ತಾಳೆ) ನಾನು ಹೋಟಲಿನಲ್ಲಿ ಚಹಾ ಕುಡಿಯುತ್ತಲಿದ್ದೆ, ಇದ್ದಕ್ಕಿದ್ದಂತೆ ಹೃದಯ ಹಿಂಡಿದಂತಾಯಿತು. ಕೂಡಲೇ ಚಹಾ ಬಿಟ್ಟವಳೇ ಎದ್ದುಬಿಟ್ಟೆ.

**ರಾಮು:** ಎಷ್ಟಾದರೂ ತಾಯಿ ಅಲ್ಲವೇ....

**ದಮಯಂತಿ:** ಓ ! ದೇವರೆ, ನನ್ನ ಮಗುವಿಗೆ ಏನೂ ಆಗದಿರಲಿ.

**ರಾಮು:** ಓ ! ಭಗವಾನ್, ನಮ್ಮ ಚೇತನನ ರಕ್ಷಕ ನೀನೆ.

(ದಮಯಂತಿ ಚೇತನನ ಕೋಣೆಯೊಳಗೆ ಹೋಗುತ್ತಾಳೆ. ಹೋದ ಕೂಡಲೇ ಫೋನಿನ ಗಂಟೆ ಬಾರಿಸುತ್ತದೆ. ಕೆಲ ಸಮಯ ಗಂಟೆ ಬಾರಿಸುತ್ತಲೇ ಇರುತ್ತದೆ.)

**ರಾಮು:** (ಬಂದು ಫೋನ್ ಎತ್ತುತ್ತಾನೆ) ಹಲೋ, ಹಾಂ! ಬಾಯಿಸಾಹೇಬರು ಇದ್ದಾರೆ. ಕರೆಯುತ್ತೇನೆ....

(ಫೋನ ಕೆಳಗಿಟ್ಟು ರಾಮು ಹೋಗುತ್ತಾನೆ. ಕೆಲ ಸಮಯದ ವರೆಗೆ ಫೋನ್ ರಿಸೀವರ್ ಹಾಗೆ ಕೆಳಗಿರುತ್ತದೆ.)

**ದಮಯಂತಿ:** (ಬಂದು ರಿಸೀವರ ಎತ್ತಿ) ಹಲೊ, ಪ್ರೇಮ, ನನ್ನ ಮಗುವಿನ ಆರೋಗ್ಯ ಚೆನ್ನಾಗಿಲ್ಲ... (ಹೀಗೆ ಹೇಳಿ ಒಮ್ಮೆಲೇ ಫೋನ್ ಬಂದ ಮಾಡುತ್ತಾಳೆ.)

**ಶೇಖರ:** (ಬಂದು) ದಮ್ಮೊ ಟೆಲಿಫೋನ್ ನೀನು ಹೀಗೆ ಬಂದ ಮಾಡಬಾರದಿತ್ತು. (ಕಣ್ತುಂಬ ಕಣ್ಣೀರು ತುಂಬಿಕೊಂಡ ಪತಿಯ ಕಡೆಗೆ ದಮಯಂತಿ ನೋಡುತ್ತಾಳೆ ಹಾಗೂ ಒಳಗೆ ಹೋಗಲು ಹೆಜ್ಜೆ ಮುಂದಿರಿಸುತ್ತಾಳೆ.)

**ಶೇಖರ:** ನಾವಿಬ್ಬರೂ ಕೆಲ ಸಮಯ ಹೊರಗೇ ಇರಬೇಕೆಂದು ಡಾಕ್ಟರರು ಹೇಳಿದ್ದಾರೆ.

(ದಮಯಂತಿ ಚಿಂತೆಯಲ್ಲಿದ್ದಾಳೆ, ಅವಳ ಕಣ್ಣಿಂದ ಒಂದೇ ಸಮನೆ ಕಣ್ಣೀರು ಸುರಿಯುತ್ತಿದೆ.)

**ಶೇಖರ:** ಫೋನ, ಹೀಗೆ ನೀನು ಒಮ್ಮೆಲೇ ಬಂದ ಮಾಡಬಾರದಿತ್ತು, ದಮ್ಮೊ (ಇಬ್ಬರೂ ಕೆಲ ಹೊತ್ತು ಸುಮ್ಮನೆ ನಿಂತಿರುತ್ತಾರೆ)

**ರಾಮು:** (ಬರುತ್ತ) ಬನ್ನಿ ಸಾಹೇಬ, ಚೇತನ ಕಣ್ಣು ತೆರೆದಿದ್ದಾನೆ.

**ದಮಯಂತಿ:** ಓ! ದೇವರೆ ಧನ್ಯ....ಧನ್ಯ ಭಗವಾನ.... ನನ್ನ ಮಗುವಿಗೆ ಏನೂ ಆಗದಿರಲಿ, ಏನೂ ಆಗದಿರಲಿ ಓ! ಭಗವಾನ್...

**ಶೇಖರ:** (ಹುಸನಾ ಇಟ್ಟ ಮಾಲೆಯತ್ತ ನೋಡುತ್ತ) ರಾಮು ಈ ಹೂಗಳು, ಇಲ್ಲಿ ? (ರಾಮು ಸುಮ್ಮನಿದ್ದಾನೆ.)

**ಶೇಖರ:** (ಒಮ್ಮೆಲೇ ನೆನಪು ಆದಂತೆ) ಹಾಂ!...ರಾಮು, ಈ ಹೂಗಳನ್ನು ಎತ್ತಿ ಹೊರಗೆ ತೆಗೆದುಕೊಂಡು ಹೋಗು...

(ರಾಮ, ರಾಮ ಎನ್ನುತ್ತ ರಾಮು ಹೂಗಳನ್ನು ಎತ್ತಿಕೊಂಡು ಹೊರಗೆ ಒಯ್ಯುತ್ತಿದ್ದಾನೆ, ಅಷ್ಟರಲ್ಲಿ ಪರದೆ ಬೀಳುತ್ತದೆ.)

# ತೃತೀಯ ದೃಶ್ಯ

ಮತ್ತೆ ಆರು ತಿಂಗಳು ಕಳೆದಿವೆ. ದೃಶ್ಯ ಅದೇ ಮುಚ್ಚಿದ ದಿವಾನ್‌ಖಾನೆಯದಾಗಿದೆ. ಸಂಧ್ಯಾಸಮಯವಾಗುತ್ತಲಿದೆ. ಹೊರಗೆ ತುಂಬ ಛಳಿ ಇದೆ.

ಈ ಮುಚ್ಚಿದ ದಿವಾನಖಾನೆಯಲ್ಲಿ ಯಾವುದೇ ಅಗ್ಗಿಟಿಕೆ ಇಲ್ಲ. ಒಳಗಿನ ಕೋಣೆಯಲ್ಲಿ ಮಾತ್ರ ಅಗ್ಗಿಟಿಕೆ ಪ್ರಜ್ವಲಿಸುತ್ತಿದೆ.

ಪರದೆ ಎತ್ತಿದಾಗ ಚೇತನ ಫೋನಿನಲ್ಲಿ ಮಾತನಾಡುತ್ತಿರುವಂತೆ ಕಂಡು ಬರುತ್ತಾನೆ. ರೋಮಾ ಅವನ ಹತ್ತಿರ ನಿಂತು ಪ್ರೇಮ-ತುಂಬಿದ ಕಣ್ಣುಗಳಿಂದ ಅವನನ್ನೇ ನೋಡುತ್ತಿದ್ದಾಳೆ.

**ಚೇತನ:** (ಫೋನಿನಲ್ಲಿ) ಏನೆಂದಿರಿ ಡ್ಯಾಡಿ...ಮಮ್ಮಿ ಇನ್ನೂ ಬಂದಿಲ್ಲ, ಡ್ಯಾಡಿ. ಆಗಲಿ ಡ್ಯಾಡಿ... ನನಗೆ ತಿಳಿಯಿತು ಡ್ಯಾಡಿ (ತಿಳಿಸುತ್ತ) ಹುಸನಾ ಆಂಟಿ ಬಂದಾಗ-ಡ್ಯಾಡಿಗೆ ಬರಲು ಇನ್ನೂ ಅರ್ಧ ಗಂಟೆಯಾಗುತ್ತದೆ. ತಾವು ಅವರಿಗಾಗಿ ಕಾಯಬೇಕು-ಎಂದು ಅವರಿಗೆ ತಿಳಿಸುತ್ತೇನೆ. ಆಗಲಿ... ಡ್ಯಾಡಿ...ಹಾಂ! ಡ್ಯಾಡಿ....ರಾಮುಗೆ ಹೇಳಿ ಚಹಾ ತರಿಸಿಕೊಡುತ್ತೇನೆ. (ಫೋನ ಇಡುತ್ತಾನೆ.)

**ರೋಮಾ:** ನಿನಗೆ ಹುಸನಾ ಆಂಟಿ ಹಿಡಿಸುತ್ತಾಳೇನು ?

**ಚೇತನ:** (ತಲೆ ಅಲ್ಲಾಡಿಸುತ್ತ) ಇಲ್ಲ.

**ರೋಮಾ:** ಪ್ರೇಮ ಅಂಕಲ್ ?

**ಚೇತನ:** (ತಲೆ ಅಲ್ಲಾಡಿಸುತ್ತ) ಇಲ್ಲ.

**ರೋಮಾ:** ನನಗೆ ಕಮಲಾ ಆಂಟಿ ಅಂದರೆ ಮೆಚ್ಚು.

**ಚೇತನ:** ಕಮಲಾ ಆಂಟಿ ಹಾಗೂ ಕೈಲಾಶ ಅಂಕಲ್ ಯಾವಾಗಲೂ ನಗ-ನಗ್ತಾ ಇರುತ್ತಾರೆ, ನಗ್ತಾನೇ ಇರುತ್ತಾರೆ.

**ರೋಮಾ:** ಇತ್ತೀಚೆ ಕಮಲಾ ಆಂಟಿ ಸ್ಕೂಲಿಗೆ ಬರುತ್ತಿಲ್ಲ.

**ಚೇತನ:** ಇತ್ತೀಚೆ ನಮ್ಮ ಮನೆಗೂ ಬಂದಿಲ್ಲ.

**ರೋಮಾ:** (ನಗುತ್ತ) ನಿನಗೆ ಗೊತ್ತಿಲ್ಲೇನು, ಕಮಲಾ ಆಂಟಿಯ ಹೊಟ್ಟೆ ಉಬ್ಬಿ ಇಷ್ಟು ದೊಡ್ಡದಾಗಿದೆ.

**ಚೇತನ:** ಕಮಲಾ ಆಂಟಿ, ಅದರಲ್ಲಿ ಹಣ ಬಚ್ಚಿಟ್ಟುಕೊಂಡಿರಬೇಕು.

**ರೋಮಾ:** (ನಗುತ್ತ) ಅಲ್ಲ, ಈ ಮಾತು ಅಲ್ಲ.

**ಚೇತನ:** ಹಾಗಾದರೆ ಅದರಲ್ಲಿ ಮತ್ತೇನಿದೆ ?

**ರೋಮಾ:** ಬಾಯಿಲ್ಲ, ನಿನ್ನ ಕಿವಿಯಲ್ಲಿ ಹೇಳುತ್ತೇನೆ. (ರೋಮಾ ಚೇತನನ ಕಿವಿಯಲ್ಲಿ ಗುಸುಗುಸು ಹೇಳುತ್ತಾಳೆ ಹಾಗೂ ಇಬ್ಬರೂ ನಗುತ್ತಾರೆ.)

**ಚೇತನ:** ರಾಮುನ ಹೆಂಡತಿಯ ಹೊಟ್ಟೆಯೂ ಉಬ್ಬುತ್ತ ನಡೆದಿದೆ.

**ರೋಮಾ:** ಹಾಂ !

**ಚೇತನ:** ಅವಳು, ನಮ್ಮ ತೋಟದ ಹಣ್ಣುಗಳನ್ನು ಹೊಟ್ಟೆಯಲ್ಲಿ ಬಚ್ಚಿಟ್ಟು ಕೊಂಡಿದ್ದಾಳೆ-ಎಂದು ಮಮ್ಮಿ ಹೇಳುತ್ತಾಳೆ.

**ರೋಮಾ:** ಇಲ್ಲ, ಅದು ಕೂಡ ಕಮಲಾ ಆಂಟಿಯ ಹಾಗೆಯೇ. (ಮತ್ತೆ ಅವನ ಕಿವಿಯಲ್ಲಿ ಏನೋ ಗುಸುಗುಸು ಹೇಳುತ್ತಾಳೆ. ಇಬ್ಬರೂ ಖೊಳ್ಳೆಂದು ನಗುತ್ತಾರೆ.)

**ಚೇತನ:** ಅಂತೆಯೇ ಈಗೀಗ ರಾಮು ಅವಳ ಆರೈಕೆಯಲ್ಲಿಯೇ ಇರುತ್ತಾನೆ. ಯಾವಾಗ ನೋಡಿದರೂ ಕ್ವಾರ್ಟರದಲ್ಲಿಯೇ ಅಡಗಿರುತ್ತಾನೆ.

**ರೋಮಾ:** ಹೊರಗೆ ಯಾವುದೋ ಟ್ಯಾಕ್ಸಿ ಬಂತೆಂದು ಕಾಣುತ್ತದೆ.

**ಚೇತನ:** (ಎದ್ದು ನೋಡುತ್ತ) ಹುಸನಾ ಆಂಟಿ ಬಂದರು.

**ರೋಮಾ:** ನಡಿ ಹಾಗಾದರೆ, ನಾವು ಮೇಲೆ ಹೋಗೋಣ. ಮನೆಮಾಡಿ ಆಡೋಣ.

**ಹುಸನಾ:** (ಬರುತ್ತ) ಹಲೋ ಚೇತನ.

**ಚೇತನ:** ಹಲೋ ಆಂಟಿ !

**ಹುಸನಾ:** ನಿಮ್ಮ ತಂದೆ ಮೇಲಿದ್ದಾರೋ ಅಥವಾ ದುಂಡು ಕೋಣೆಯಲ್ಲಿ ?

**ಚೇತನ:** ಆಂಟಿ, ಅವರು ಅರ್ಧ ಗಂಟೆಯಲ್ಲಿ ಬರುವುದಾಗಿ ಫೋನ್ ಮಾಡಿದ್ದಾರೆ. ತಾವು ಅವರ ಬರುವಿಗಾಗಿ ನಿರೀಕ್ಷೆ ಮಾಡಿ.

**ಹುಸನಾ:** ಆಗಲಿ ಮಗು.

**ಚೇತನ:** ಟಾಟಾ, ಆಂಟಿ.

**ಹುಸನಾ:** ನೀನು ಎಲ್ಲಿಗೆ ಹೋಗುತ್ತಿರುವೆ ಮಗು ? ಇಲ್ಲಿಯೇ ಆಡಿರಲ್ಲ !

**ಚೇತನ:** ನಾವು ಮೇಲೆ ಹೋಗಿ ಆಡುತ್ತೇವೆ, ಆಂಟಿ.
(ಹುಸನಾ ಒತ್ತಾಯಪೂರ್ವಕ ಚೇತನನನ್ನು ಹಿಡಿಯುತ್ತಾಳೆ.)

**ಚೇತನ:** ಇಲ್ಲ, ಆಂಟಿ, ಬೇಡ ಆಂಟಿ !

**ಹುಸನಾ:** ಇಲ್ಲಿ ನೋಡಿಯಾದರೂ ನೋಡು, ನಿನಗೆ ಏನು ತಂದಿರುವೆ ಯೆಂಬುದನ್ನಾದರೂ ನೋಡು !

**ಚೇತನ:** ಇಲ್ಲ ಆಂಟಿ, ನಾನು ಮೇಲೆ ಹೋಗುತ್ತೇನೆ.

**ಹುಸನಾ:** ಒಂದು ನಿಮಿಷವಾದರೂ ನಿಲ್ಲು, ನೋಡಿಲ್ಲಿ, ನಿನಗೆ ಏನು ತಂದಿರುವೆ ನೋಡು.

**ಚೇತನ:** ಇಲ್ಲ ಆಂಟಿ, ನಾನು ರೋಮಾಳೊಂದಿಗೆ ಆಡುತ್ತೇನೆ.

**ಹುಸನಾ:** ರೋಮಾಳೊಂದಿಗೆ ಇಲ್ಲೇ ಆಡಲ್ಲ....

**ಚೇತನ:** ಇಲ್ಲ ಆಂಟಿ.

(ಹುಸನಾ ತನ್ನ ಬ್ಯಾಗಿನಿಂದ ವಾಚ ತೆಗೆದು ಅವನಿಗೆ ತೋರಿಸುತ್ತಾಳೆ. ಚೇತನ ವಾಚ್ ನೋಡಿ ಖುಷಿಯಾಗುತ್ತಾನೆ.)

**ಹುಸನಾ:** ಈ ವಾಚ್ ನಿನಗೆ ಮೆಚ್ಚಿಕೆ ತಾನೇ ?

(ಚೇತನ ಏನೂ ತಿಳಿಯಲಾರದೆ ಸುಮ್ಮನೆ ನಿಂತಿರುತ್ತಾನೆ.)

**ಹುಸನಾ:** ಕೈ ತಾಯಿಲ್ಲಿ, ಈ ವಾಚ ಕಟ್ಟುತ್ತೇನೆ. ನೋಡು, ಎಷ್ಟು ಚೆನ್ನಾಗಿದೆ ಈ ವಾಚ.

(ಚೇತನ ಒಮ್ಮೆ ರೋಮಾಳೆಡೆಗೆ ನೋಡುತ್ತಾನೆ, ಮಗುದೊಮ್ಮೆ ವಾಚಿನ ಕಡೆಗೆ.)

**ಹುಸನಾ:** ಬಂಗಾರದ್ದು, ನಿನಗಾಗಿ ಮುಂಬಯಿಂದ ತರಿಸಿದೆ.

(ಚೇತನ ಅದೇ ರೀತಿ ಒಮ್ಮೆ ವಾಚಿನ ಕಡೆ ನೋಡುತ್ತಾನೆ, ಮಗುದೊಮ್ಮೆ ರೋಮಾಳೆಡೆ)

**ಹುಸನಾ:** ನೋಡಿಲ್ಲಿ, ಇದರ ಹಿಂದೆ ನಿನ್ನ ಹೆಸರು ಹಾಕಿಸಲಾಗಿದೆ.

**ಚೇತನ:** (ಈ ಸಲ ರೋಮಾಳೆಡೆಗೆ ನೋಡಿದಾಗ ಅವಳು ಮುಗುಳ್ನಗುತ್ತಾಳೆ, ಆಗ ಅವನು ಕೂಡಲೇ ನಿರ್ಣಯ ಮಾಡುತ್ತಾನೆ) ಬೇಡ ಆಂಟಿ, ನಾನು ಮೇಲೆ ಹೋಗಿ ರೋಮಾಳೊಂದಿಗೆ ಆಡುತ್ತೇನೆ. (ಕೆಲ ಪಾವಟಿಗೆ ಹತ್ತಿ) ಒಳಗೆ ದುಂಡು ಕೋಣೆಯಲ್ಲಿ ಅಗ್ಗಿಟಿಕೆ ಉರಿಯುತ್ತಲಿದೆ, ಆಂಟಿ ಅಲ್ಲಿ ತಾವು ನಿರೀಕ್ಷೆಯಲ್ಲಿರಿ, ತಂದೆಯವರು ಇನ್ನೇನು ಬರುತ್ತಿರಬಹುದು.

(ಹುಸನಾ ನಿರಾಶಾಪೂರ್ವಕ ಚೇತನನ ಕಡೆ ನೋಡುತ್ತಿರುತ್ತಾಳೆ, ಅವನು ತನ್ನ ಗೆಳತಿಯೊಂದಿಗೆ ಬೇಗ-ಬೇಗ ಮೆಟ್ಟಿಲು ಹತ್ತುತ್ತಾನೆ.)

**ಪ್ರೇಮ:** (ಬರುತ್ತ) ಹಲೋ...

(ಹುಸನಾ ತನ್ನ ವಿಚಾರದಲ್ಲಿಯೇ ಮಗ್ನಳಾಗಿರುತ್ತಾಳೆ.)

**ಪ್ರೇಮ:** (ಕೊಂಚ ಜೋರಾಗಿ) ಹಲೋ...

**ಹುಸನಾ:** (ಒಮ್ಮೆಲೇ ಮೆಟ್ಟಿಬಿದ್ದು) ಓ !...ಹಲೋ ! ಕ್ಷಮಿಸಿ, ಈ ಮಕ್ಕಳ ಕಡೆಗೆ ನೋಡುತ್ತ ನೋಡುತ್ತ ನಾನು ಭಾವನಾಲೋಕದಲ್ಲಿ ಮುಳುಗಿ ಬಿಟ್ಟಿದ್ದೆ.

**ಪ್ರೇಮ:** ಈಗೀಗ ಸಮಯವೇ ಕೊಂಚ ಹಾಗಿದೆ. ಎಲ್ಲರಿಗೂ ತಮ್ಮ ತಮ್ಮದೇ ಸಮಸ್ಯೆ, ಈಗ ತಾನೇ ನನ್ನ ಅವಸರದಲ್ಲಿ ಸರ್ಕಲ್‌ನಲ್ಲಿ ಜೋರಾಗಿ ಬರುತ್ತಿದ್ದೆ. ಆ ಕಡೆಯಿಂದ ಟ್ಯಾಕ್ಸಿಯವ ತನ್ನ ಅವಸರದಲ್ಲಿದ್ದ. ಪರಿಣಾಮ, ನಮ್ಮಿಬ್ಬರ ಕಾರುಗಳ ಡಿಕ್ಕಿ. ನಾನು ಹೇಗೆ ಉಳಿದೆನೋ, ನನಗೇ ಅಚ್ಚರಿ ! ನಾನು ಬದುಕಿ ಉಳಿದಿದ್ದೇನೆ ಎಂಬುದರ ಬಗ್ಗೆ ನನಗೀಗಲೂ ಭರವಸೆ ಆಗುತ್ತಿಲ್ಲ.

**ಹುಸನಾ:** ಮತ್ತೆ ನಿಮ್ಮ ಕಾರು ?

**ಪ್ರೇಮ:** ಇನ್‌ಷೂರೆನ್ಸ್‌ನವರಿಗೆ ಒಪ್ಪಿಸಿ ಬಂದಿದ್ದೇನೆ.

**ಹುಸನಾ:** ಇಂದಿನ ಜೀವನದಲ್ಲಿ ಏನೆಲ್ಲ ಸೌಲಭ್ಯಗಳು !

ಪ್ರೇಮ: ಸಾಪಿನ ಕಣ್ಣು ತಪ್ಪಿಸಿ ಇತ್ತ ಬಂದಿದ್ದೇನೆ ಎಂದೆನಿಸುತ್ತದೆ, ನನಗೆ.

ಹುಸನಾ: ಬದುಕಿನತ್ತ ? (ಇಬ್ಬರೂ ಕೂಡುತ್ತಾರೆ.)

ಪ್ರೇಮ: ಏನು, ಮನೆಯುವರು ಎಲ್ಲಿ ಹೋಗಿದ್ದಾರೆ ?

ಹುಸನಾ: ಮಿಸೆಸ್ಸ್ ಶೇಖರ ಬಹುಶಃ ಎಲ್ಲೋ ಹೊರಗೆ ಹೋಗಿರಬೇಕು.

ಪ್ರೇಮ: (ಗಡಿಯಾರದತ್ತ ನೋಡಿ) ಇಷ್ಟೊತ್ತಿಗೆ ಬರಬೇಕಾಗಿತ್ತು.

ಹುಸನಾ: ಶೇಖರ ಇನ್ನೂ ಆಫೀಸಿನಲ್ಲಿಯೇ ಇದ್ದಾರೆ. ಅರ್ಧಗಂಟೆ ನಂತರ ಬರುವುದಾಗಿ ಫೋನ್ ಬಂದಿತ್ತು.

ಪ್ರೇಮ: ಈ ಶೇಖರ ಕೆಲಸದ ಹುಳ.

ಹುಸನಾ: ಮಿಸೆಸ್ಸ್ ಶೇಖರ ಯಾವುದಾದರೊಂದು ಅಂಗಡಿಯಲ್ಲಿ ಹೊಕ್ಕಿರಬೇಕು. ಈ ಹೆಂಗಸಿಗೆ ಹಣ ವ್ಯಯುಮಾಡುವುದೆಂದರೆ ಭಾರೀ ಖುಷಿ. (ಹೊರಗೆ ಮೋಡ ಗರ್ಜಿಸುತ್ತಿದೆ.)

ಪ್ರೇಮ: ಹೊರಗೆ ಮೋಡ ಕವಿಯುತ್ತಲಿದೆ.

ಹುಸನಾ: ಬಹುಶಃ, ಇನ್ನೇನು ಮಳೆ ಬೀಳಬಹುದು.

ಪ್ರೇಮ: ಚಳಿಗಾಲದ ಮಳೆಯೆಂದರೆ ನನಗೆ ಬಹಳ ಪ್ರೀತಿ. ತಂಪು-ತಂಪಾದ ಚಳಿಗಾಲದ ದಿನ, ಹೊರಗೆ ಮೋಡಗಳ ಗರ್ಜನೆ, ಜಡಿಮಳೆ.... ಕೋಣೆಯಲ್ಲಿ ಬೆಂಕಿ... (ಹೊರಗೆ ನವಿಲಿನ ಕೂಗು.)

ಹುಸನಾ: ಇದು ಯಾವುದರ ಕೂಗು ?

ಪ್ರೇಮ: ನವಿಲು ಕೂಗುತ್ತಿದೆ.

ಹುಸನಾ: ಈ ಸಮಯದಲ್ಲಿ ನವಿಲಿಗೇನು ಆಪತ್ತು ಬಂತು...

ಪ್ರೇಮ: ನವಿಲು ತನ್ನ ಸಂಗಾತಿಯನ್ನು ಕರೆಯುತ್ತಿದೆ. (ಫೋನಿನ ಗಂಟೆ ಬಾರಿಸುತ್ತದೆ. ಅದನ್ನು ತೆಗೆದುಕೊಂಡು ಪ್ರೇಮ ಮಾತನಾಡುತ್ತಾನೆ.)

ಹುಸನಾ: ಶೇಖರನದಾಗಿರಬೇಕು ಈ ಫೋನ್.

ಪ್ರೇಮ: ಹಲೋ, .....ಹಾಂ! ದಮ್ಮೊ...ನಾನಂತೂ ತುಂಬ ಹೊತ್ತಿನಿಂದ ಕಾಯುತ್ತಿರುವೆ. ನನ್ನ ಕಾರಿನ ಎಕ್ಸಿಡೆಂಟ ಆಯಿತು....ಹಾಂ! ನಾನು... ನಾನು ಉಳಿದಿದ್ದೇನೆ... ನಾಲ್ಕು ದಿನ ನಿಮ್ಮ ಪ್ರೀತಿ ಅನುಭವಿಸಲು.... (ಹುಸನಾ, ಪ್ರೇಮ ಈ ರೀತಿ ವ್ಯಸ್ತನಾಗಿರುವಾಗ ಒಳಗೆ ದುಂಡು ಕೋಣೆಗೆ ಹೊರಟು ಹೋಗುತ್ತಾಳೆ.) ಹಾಂ...ಹಾಂ!... ನೀವು ನಡೆದುಕೊಂಡು ಬರುತ್ತಿರುವಿರಾ ? ಆಗಲಿ... ನಾನು ಹತ್ತು ನಿಮಿಷ ಇನ್ನೂ ಕಾಯುತ್ತೇನೆ... ಹಾಂ! ಆಗಲಿ... (ಫೋನ್ ಇಡುತ್ತಾನೆ.)

ರಾಮು: (ಬರುತ್ತ) ಚಹಾ ತರಲೇ, ಸಾಹೇಬರೆ, ಬಾಯಿಸಾಬ ಬರುವುದು ತಡವಾಗಬಹುದೆಂದು ಹೇಳಿ ಹೋಗಿದ್ದಾರೆ. ಮೋಟರ ಸ್ವಲ್ಪ ಕೆಟ್ಟಿತ್ತು, ನಡೆದುಕೊಂಡು ಹೋಗಿದ್ದಾರೆ. ಇಂದು ಹವೆ ಕೂಡ ತುಂಬ ಕೆಟ್ಟಿದೆ.

ಪ್ರೇಮ: ರಾಮು, ಚಹಾ-ಗಿಹಾ ಇರಲಿ, ನಿನ್ನ ಹೆಂಡತಿಯ ಸ್ಥಿತಿ ಹೇಗಿದೆ ಹೇಳು.

ರಾಮು: ದೇವರ ಕೃಪೆ, ಅವಳು ಎಲ್ಲ ರೀತಿಯಿಂದಲೂ ಚೆನ್ನಾಗಿದ್ದಾಳೆ. ಈಗಂತೂ... ಈಗಂತೂ... (ನಾಚಿಕೆಯಿಂದ ತಲೆ ಕೆಳಗೆ

ಮಾಡುತ್ತಾನೆ).

ಪ್ರೇಮ: ಏಕೆ ? ಮಗು ಆಗಲಿದೆ ಏನು ಸಿಮ್ಮಲ್ಲಿ ?

ರಾಮು: ದೇವರ ಕೃಪೆ, ಸಾಹೇಬ. ನನ್ನಿಂದ ಒಂದು ತಪ್ಪು ಆಗುವದರಲ್ಲಿತ್ತು. ಮನೆಯಾಕೆ ನನ್ನನ್ನು ಪಾರು ಮಾಡಿದಳು, ಒಂದು ತಪ್ಪು ಅವಳಿಂದ ನಡೆಯಲಿತ್ತು, ಆದರಿಂದ ಅವಳನ್ನು ನಾನು ಪಾರು ಮಾಡಿದೆ. ಮನುಷ್ಯರಿಂದ ತಪ್ಪು ಆಗಿಯೇ ಆಗುತ್ತವೆ, ಸಾಹೇಬ. (ಒಮ್ಮೆಲೇ ಮೇಲಿನ ಕೋಣೆಯಿಂದ ಮಕ್ಕಳ ನಗೆಯ ಬುಗ್ಗೆಯೇ ಚಿಮ್ಮುತ್ತದೆ.)

ಪ್ರೇಮ: ಮೇಲೆ, ಯಾರು ಚೇತನ ಆಡುತ್ತಿದ್ದಾನೇನು ?

ರಾಮು: ಹಾಂ ಸಾಹೇಬ, ಇಡೀ ದಿನ ಪಕ್ಕದ ಮನೆಯ ಬೇಬಿಯೊಂದಿಗೆ ನಮ್ಮ ಚೇತನ ಆಡುತ್ತಿರುತ್ತಾನೆ. ಅವರಿಬ್ಬರೂ ಕೂಡಿಯೇ ಇರುತ್ತಾರೆ.

ಪ್ರೇಮ: ಆಗಲಿ ರಾಮು, ನೀನು ಚಹಾ ತೆಗೆದುಕೊಂಡು ಬಾ. ಬಾಯಿ ಸಾಹೇಬರು ಬರುತ್ತಿರಬಹುದು, ಅವರು ಬಂದಕೂಡಲೇ ನಮಗಿಬ್ಬರಿಗೂ ಮತ್ತೆ ಎಲ್ಲಿಯೋ ಹೋಗಬೇಕಾಗಿದೆ.

ರಾಮು: ಆಗಲಿ ಸಾಹೇಬ, ಆಗಲಿ. (ಹೋಗುತ್ತಾನೆ)

ಪ್ರೇಮ: ಇದೇನು, ಹೊರಗೆ ಮಳೆಯಾಗುತ್ತಲಿದೆ. ಒಮ್ಮೆಲೇ ಇಷ್ಟು ಜೋರಿನ ಮಳೆ. (ಪ್ರೇಮ ಬಾಗಿಲ ಹತ್ತಿರ ನಿಂತು ಹೊರಗ ಮಳೆ ನೋಡುತ್ತಾನೆ. ಕೋಣೆಯಲ್ಲಿ ಕತ್ತಲೆ ಕವಿಯುತ್ತದೆ.)

ಹುಸನಾ: (ಒಳಗಿನಿಂದ ಬರುತ್ತ) ನೀವು ಒಳಗೆ ಏಕೆ ಬರುತ್ತಿಲ್ಲ ? ದುಂಡು ಕೋಣೆಯಲ್ಲಿ ಅಗ್ಗಿಟಕೆ ಉರಿಯುತ್ತಲಿದೆ, ಸೊಗಸಾಗಿ.

ಪ್ರೇಮ: ನಾನು ಹೇಳಲಿಲ್ಲವೆ, ನನಗೆ ಮಳೆ ತುಂಬ ಹಿಡಿಸುತ್ತದೆ.

ಹುಸನಾ: ಇದೇನು ಮಳೆಯೇ ? ಬಿರುಗಾಳಿ. ಹೊರಗೆ ಗಿಡಮರ ತಲೆಕೆಳಗಾಗುತ್ತಲಿವೆ.

ಪ್ರೇಮ: ಅದೆಷ್ಟೋ ಹೊತ್ತಿನಿಂದ ಮಳೆಯ ಬಣ್ಣ ಕವಿದಿತ್ತು. ನನಗೆ ಗೊತ್ತಿತ್ತು ಮಳೆ ಆಗಿಯೇ ಆಗುತ್ತದೆ ಎಂದು. ಅಷ್ಟೇ ಅಲ್ಲ ಹೀಗೆ, ಇದೇ ರೀತಿ ಭಾರಿ ಮಳೆ ಬೀಳುತ್ತದೆ ಎಂದೂ ಗೊತ್ತಿತ್ತು.

ಹುಸನಾ: ನನಗೆ ಚಳಿಯಾಗುತ್ತಲಿದೆ. ಮಳೆ ಹನಿ ಒಳಗೇ ಸಿಡಿಯುತ್ತಲಿವೆ. ಓ ! ನನ್ನ ಸೆರಗೇ ಹಾರಿಹೋಗುತ್ತಲಿದೆ.

(ಪ್ರೇಮ, ಒಮ್ಮೆ ಹುಸನಾಳ ಕಡೆ ನೋಡುತ್ತಾನೆ. ಅವಳ ಸೆರಗು ತೊಯ್ಯುತ್ತಲಿದೆ, ಕೂದಲು ಹಾರಾಡುತ್ತಲಿವೆ. ಒಂದು ವಿಚಿತ್ರ ಪ್ರಕಾರದ ಚೆಲುವು ಅವಳಲ್ಲಿ ಹೊಳೆಯುತ್ತಲಿದೆ.)

ಪ್ರೇಮ: ನನಗೆ ಹೊರಗೆ ಹೋಗಬೇಕು-ಎನ್ನಿಸುತ್ತಲಿದೆ. ಅದೆಷ್ಟೇ ಭಯಾನಕ ವಾದ ಬಿರುಗಾಳಿ ಇರಲಿ, ಅದರಲ್ಲಿ ಹೋಗಬೇಕೆನಿಸುತ್ತದೆ. ಅಂಥ ಬಿರುಗಾಳಿಯಲ್ಲಿ ನನ್ನನ್ನು ನಾನು ಕಳೆದುಕೊಳ್ಳುವುದೆಂದರೆ ಒಂದು ರೀತಿ ಮಜಾ ಅನ್ನಿಸುತ್ತದೆ.

(ಮೋಡ ಬಹಳ ಜೋರಾಗಿ ಗರ್ಜಿಸುತ್ತದೆ. ಮಿಂಚು ಮಿಂಚುತ್ತದೆ.

ಭಯಂಕರ ಗುಡುಗಿನಿಂದಾಗಿ ಹುಸನಾ ಕಂಪಿಸುತ್ತಾಳೆ.)

**ಹುಸನಾ:** ನಾನೊಲ್ಲೆ, ನನಗೆ ಹೆದರಿಕೆಯಾಗುತ್ತಲಿದೆ. ಓ! ಗುಡುಗು, ಮಿಂಚು! ರಾತ್ರಿ ಹೀಗೆ ಮಳೆಯಾದರೆ ನಾನೊಬ್ಬಳೆ ಕೋಣೆಯಲ್ಲಿ ಮಲಗಲಾರೆ, ಯಾರನ್ನಾದರೂ ಕರೆದುಕೊಳ್ಳುತ್ತೇನೆ, ಅಥವಾ ಯಾರ ಹತ್ತಿರ ವಾದರೂ ಹೊರಟು ಹೋಗುತ್ತೇನೆ.

**ಪ್ರೇಮ:** ಇದರಲ್ಲಿ ಹೆದರುವಂಥದೇನಿದೆ? ಯಾವಾಗ ಬಿರುಗಾಳಿ ಬರುತ್ತ ದೆಯೋ ಆಗ ನನಗನಿಸುತ್ತದೆ, ನನ್ನೊಂದಿಗೆ ಯಾರೋ ಹುಡುಗಾಟ ಮಾಡುತ್ತಿದ್ದಾರೆ-ಎಂದು.

**ಹುಸನಾ:** ನಾವೊಮ್ಮೆ ಶ್ರೀನಗರಕ್ಕೆ ಹೋಗಿದ್ದೆವು, ನಸೀಮ ಬಾಗದಲ್ಲಿ ತಂಬೂಗಳಲ್ಲಿ ವಾಸಿಸಿದ್ದೆವು. ಮೊದಲ ರಾತ್ರಿಯೇ ಭಾರಿ ಬಿರುಗಾಳಿ ಬೀಸಿತು, ಭಾರಿ ಮಳೆ ಸುರಿಯಿತು, ಗುಡುಗು, ಮಿಂಚು...ಓ! ನಮ್ಮ ತಂಬು ಕಿತ್ತು ಮೇಲೆಯೇ ಬಿತ್ತು.

**ಪ್ರೇಮ:** ಓ! ಆ ದಿನದಿಂದ ಇಂಥ ಮಳೆ, ಬಿರುಗಾಳಿ ಬಂದ ಕೂಡಲೇ ಮಾಳಿಗೆ ಎಲ್ಲಿ ಬೀಳುತ್ತದೆಯೋ ಎಂದು ನಿಮಗೆ ಹೆದರಿಕೆ ಅಲ್ಲವೇ? (ನಗತೊಡಗುತ್ತಾನೆ)

**ಹುಸನಾ:** ಅದೇನೋ ಹೇಳುತ್ತಾರಲ್ಲ, ಹಾವು ಕಚ್ಚಿಸಿಕೊಂಡವನು ಹಗ್ಗಕ್ಕೂ ಹೆದರುತ್ತಾನೆ-ಹಾಗೆ.

**ಪ್ರೇಮ:** ಈ ಮನೆಯವರಿಗೆ ಏನಾದರೂ ಆಗಿದೆ? ಇಬ್ಬರೂ ಪತ್ತೆ ಇಲ್ಲ.

**ಹುಸನಾ:** ಪಾಪ, ಮಳೆಯಲ್ಲಿ ಸಿಕ್ಕಿರಬೇಕು. ಮಳೆಯೂ ಕೂಡ ಇಂದೇ ಆಗಬೇಕೆಂದು ಹಟ ಹಿಡಿದ ಹಾಗಿದೆ.

**ಪ್ರೇಮ:** ದಮ್ಮೊ ನಡೆದುಕೊಂಡು ಹೋಗಿದ್ದಾಳೆ. ನಡೆಯಬೇಕೆಂಬ ಬಯಕೆ ಆಕೆಗೂ ಇಂದೇ ಆಗಬೇಕೆ? ಪ್ರತಿಯೊಂದು ಕೆಲಸವನ್ನು ತಪ್ಪು ವೇಳೆಯಲ್ಲಿ ಯಾರಿಗಾದರೂ ಮಾಡುವುದಿದ್ದರೆ, ಮಿಸೆಸ್ ಶೇಖರರಿಂದ ಕಲಿಯಬೇಕು.

**ಹುಸನಾ:** ಮತ್ತೆ, ಶೇಖರನೂ ಹಾಗೆಯೇ. ಕೆಲವರ ಆಫೀಸು ನಾಲ್ಕು ಗಂಟೆಗೆ ಬಂದಾಗುತ್ತವೆ, ಇನ್ನೂ ಕೆಲವರ ಆಫೀಸು ಐದು ಗಂಟೆಗೆ. ಆದರ ಇವನ ಆಫೀಸು ಇನ್ನೂ ತೆರೆದಿದೆ.

**ಪ್ರೇಮ:** ಓ! ಎಂಥ ಮಳೆ! ಪ್ರೀತಿ ಬರುವ ಹಾಗಿದೆ.

**ಹುಸನಾ:** ಓ! ಅದೆಷ್ಟು ಕತ್ತಲೆಯಾಗಿದೆಯಲ್ಲ, ದೀಪ ಹಚ್ಚಲೇ?

**ಪ್ರೇಮ:** ಹಾಂ! ಹಚ್ಚಲೇಬೇಕು.

**ಹುಸನಾ:** (ಛೇಡಿಸುತ್ತ) ಕತ್ತಲೆ ಚೆನ್ನಾಗಿರುತ್ತದೆ, ಕತ್ತಲೆಯಲ್ಲಿ ಅಸಂಖ್ಯಾತ ತಪ್ಪುಗಳು, ಕೆಡಕುಗಳು ಮುಚ್ಚಿಕೊಂಡಿರುತ್ತವೆ.

**ಪ್ರೇಮ:** ಕತ್ತಲೆಯ ಚಾದರಿನಲ್ಲಿ ಮನದ ಕಪ್ಪು ಮುಚ್ಚಿ ಹೋಗುತ್ತದೆ, ಹಾಗೂ ದೇಹದ ಕಪ್ಪು ಕೂಡ.

**ಹುಸನಾ:** ನನಗಂತೂ ಚಳಿಯಾಗುತ್ತಲಿದೆ. ನಾನು ಒಳಗೆ ಅಗ್ಗಿಟಿಕೆಯ ಹತ್ತಿರ

ಕುಳಿತುಕೊಳ್ಳುತ್ತೇನೆ.

(ಹುಸನಾ ನಸುನಾಚುತ್ತ, ಮುಗುಳ್ನಗುತ್ತ ಒಳಗೆ ಹೊರಟು ಹೋಗುತ್ತಾಳೆ.)

ಪ್ರೇಮ: (ಸ್ವಗತ) ಮಳೆ ಎಷ್ಟು ಜೋರಾಗಿ ಸುರಿಯುತ್ತಿದೆ. ಈ ಬಿರುಗಾಳಿ ಅದೆಷ್ಟು ಭೀಕರವಾಗಿದೆಯಲ್ಲ.

ರಾಮು: (ಬಲಗಡೆಯ ಬಾಗಿಲಿನಿಂದ ಚಹಾ ತರುತ್ತ) ಸಾಹೇಬ, ಚಹಾ. ಮಳೆ ನೋಡಿ, ಎಷ್ಟು ಜೋರಾಗಿ ಸುರಿಯುತ್ತಲಿದೆ. ನಮ್ಮ ಬಾಯಿ ಸಾಹೇಬರು ಎಲ್ಲೋ ದಾರಿಯಲ್ಲಿ ಮಳೆಗೆ ಸಿಕ್ಕಿರಬೇಕು.

(ರಾಮು ಪ್ರೇಮನಿಗಾಗಿ ಸೋಫಾದ ಎದುರಿನಲ್ಲಿ ಮೇಜ ಇರಿಸಿ ಅದರ ಮೇಲೆ ಚಹಾ ಇರಿಸುತ್ತಾನೆ.)

ಪ್ರೇಮ: (ಸೋಫಾದ ಹತ್ತಿರ ಬರುತ್ತ) ರಾಮು, ಚಹಾಕ್ಕೆ ಒಂದೇ ಕಪ್ ತಂದಿರುವೆಯಾ ? ಒಳಗೆ ಮಿಸ್ ಹುಸನಾ ಅವರೂ ಕುಳಿತಿದ್ದಾರೆ. ಚಹಾ ಕುಡಿಯುತ್ತಾರೋ ಹೇಗೊ, ಅವರನ್ನೂ ಕೇಳು.

ರಾಮು: ಸರಿ, ಅವರೂ ಬಂದಿದ್ದಾರೆಯೇ ?

ಪ್ರೇಮ: ಅವರು ನನಗಿಂತಲೂ ಮೊದಲೇ ಬಂದಿದ್ದಾರೆ.

ರಾಮು: ನನಗೆ ಗೊತ್ತಿರಲಿಲ್ಲ. (ಒಳಗೆ ಹೋಗುತ್ತಾನೆ.)

ಪ್ರೇಮ: (ಚಹಾ ಸಿದ್ಧಗೊಳಿಸುತ್ತ) ಈ ಮಳೆ, ಗೊತ್ತಿಲ್ಲ, ಬೆಳೆಗೆ ಒಳ್ಳೆಯದೊ ಕೆಟ್ಟದ್ದೊ. ಮಣ್ಣಿನ ಮಕ್ಕಳು, ರೈತರಿಂದ ನಾವು ಬಹಳ ದೂರವಾಗಿದ್ದೇವೆ, ಅವರಿಗೆ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಎಂಬುದರ ಅರಿವು ನಮಗಿಲ್ಲದಂತಾಗಿದೆ.

ರಾಮು: (ಬರುತ್ತ) ಅವರಿಗೆ ಚಹಾ ಅಲ್ಲೇ ಕೊಡಬೇಕಂತೆ.

ಪ್ರೇಮ: ಸರಿ, ಹಾಗಾದರೆ ನೀನೊಂದು ಖಾಲಿ ಕಪ್ ತೆಗೆದುಕೊಂಡು ಬಾ.

ರಾಮು: ಆಗಲಿ ಸಾಹೇಬ

(ರಾಮು ಹೋಗುತ್ತಾನೆ. ಮಳೆ ಮೊದಲಿನಂತೆಯೇ ಇದೆ. ಪ್ರೇಮ ಚಹಾ ಹಾಕಿಕೊಂಡು ಹುಸನಾಗೆ ಕೊಡಲು ಹೋಗುತ್ತಾನೆ. ಅವನ ಒಂದು ಕೈಯಲ್ಲಿ ಕಪ್ ಇದೆ, ಇನ್ನೊಂದು ಕೈಯಲ್ಲಿ ಮಿಠಾಯಿಯ ಪ್ಲೇಟ ಇದೆ. ದುಂಡುಕೋಣೆಯಲ್ಲಿ ಹೋಗಿ ಅವನಿಗೆ ಇನ್ನೂ ಒಂದು ಸೆಕೆಂಡ ಮಾತ್ರ ಆಗಿದೆ, ಅಷ್ಟರಲ್ಲಿ ಒಳಗಿನಿಂದ ಹುಸನಾಳ ಚೀರಿಕೊಳ್ಳುವ ಧ್ವನಿ ಕೇಳಿ ಬರುತ್ತದೆ, ಅದರೊಂದಿಗೆ ಕಪ್ ಬಿದ್ದು ಒಡೆದು ಹೋದುದರ ಸಪ್ಪಳವೂ ಬರುತ್ತದೆ. ಮತ್ತೆ ಇಬ್ಬರೂ, ಹುಸನಾ ಹಾಗೂ ಪ್ರೇಮ ನಗುತ್ತ ಹೊರಗೆ ಬರುತ್ತಾರೆ.)

ಹುಸನಾ: (ನಗುತ್ತ) ನೀವು ಕಪ್ ಹಿಡಿಸಿದ ರೀತಿಯೇ....

ಪ್ರೇಮ: (ನಗುತ್ತ) ಕಪ್ ಹಿಡಿಸುವುದರಲ್ಲಿ ಏನಿತ್ತು ? ನಿಮ್ಮ ಮನಸ್ಸೇ ಬೇರೆ ಕಡೆ ಇತ್ತು.

ಹುಸನಾ: ನಿಜವಾಗಿಯೆಂದರೆ, ನಾನು ತಿಳಿದದ್ದು ರಾಮು ಚಹಾ

ತಂದಿದ್ದಾನೆ-ಎಂದು. ಹಾಗೆ ತಿಳಿದ ನಾನು ಪುಸ್ತಕದಿಂದ ಕಣ್ಣು ಮೇಲಕ್ಕೆತ್ತಿ ನೋಡಿದಾಗ, ನಿಂತವರು ನೀವು, ನನ್ನ ಕೈಯಲ್ಲಿ ಕಪ್ ಕೊಟ್ಟಿರಿ ನಿಜ, ಆದರೆ ತತ್‌ಕ್ಷಣವೇ ನಾನು ಗಾಬರಿಯಾದೆ.
(ಇಬ್ಬರೂ ನಗುತ್ತಲಿದ್ದಾರೆ, ನಗುತ್ತಲೇ ಇರುತ್ತಾರೆ.)

**ಪ್ರೇಮ:** ಸುಡುವ ಚಹಾ ನಿಮ್ಮ ಕಾಲ ಮೇಲೆ ಬೀಳಲಿಲ್ಲ, ಒಳ್ಳೆಯದಾಯಿತು.

**ಹುಸನಾ:** ಕಾಲೇನೋ ಉಳಿದುಕೊಂಡವು ಆದರೆ ನನ್ನ ಉಡಿಗೆಯ ಅಂಚು ಹಾಳಾಗಿ ಹೋಯಿತು.

**ಪ್ರೇಮ:** ಈಗಿನ ಹುಡುಗಿಯರು ಕಾಲು ಸುಟ್ಟುಕೊಳ್ಳಲು ಸಿದ್ಧ, ಆದರೆ ಉಡಿಗೆಯ ಇಸ್ತ್ರಿ ಕೂಡ ಹಾಳಾಗಬಾರದು.

**ರಾಮು:** (ಬರುತ್ತ) ಸಾಹೇಬ, ನಾನು ಚಹಾ ಮಾಡಲೆ ?

**ಹುಸನಾ:** ಬೇಡ ರಾಮು, ಚಹಾ ನಾನು ಮಾಡುತ್ತೇನೆ. ನೀನು ಇನ್ನೊಂದು ಕಪ್ ತೆಗೆದುಕೊಂಡು ಬಾ. ಮೊದಲಿನ ಕಪ್ ಒಡೆದುಹೋಯಿತು. ಒಳಗಿನಿಂದ ಒಡೆದ ಚೂರುಗಳನ್ನು ಆರಿಸಿಕೊ.

**ಪ್ರೇಮ:** ಪಾಪ, ಹಾಸಿದ ರತ್ನಗಂಬಳಿ ಹಾಳಾಯಿತು.

**ಹುಸನಾ:** (ಚಹಾ ಮಾಡುತ್ತ) ಮನೆಯವರು ಯಾವಾಗ ಮನೆಯಲ್ಲಿರುವುದಿಲ್ಲವೊ, ಹೊಲದ ಒಡೆಯ ಯಾವಾಗ ಹೊಲದಲ್ಲಿರುವುದಿಲ್ಲವೊ ಆಗ ಅದೆಷ್ಟೋ ಸಲ ಬೇಲಿಯೇ ಹೊಲ ಮೆಯ್ಯುತ್ತದೆ.

**ಪ್ರೇಮ:** ಹಾಂ, ಈ ಶಿಕ್ಷೆ ಅವರಿಗೆ ಚೆನ್ನಾಗಿಯೇ ಸಿಕ್ಕಿದೆ.

**ಹುಸನಾ:** ಸಕ್ಕರೆ ಎಷ್ಟು ಹಾಕಲಿ ?

**ಪ್ರೇಮ:** ಒಂದು ಚಮಚ ಸಾಕು, ನಿಮ್ಮ ಸ್ಪರ್ಶದಿಂದಾಗಿಯೇ ಕಪ್ ಸಾಕಷ್ಟು ಸಿಹಿಯಾಗಿರಬೇಕು.

**ಹುಸನಾ:** ಹಾಗಾದರೆ ಸಕ್ಕರೆ ಹಾಕುವ ಅವಶ್ಯಕತೆ ಏನಿದೆ ?
(ಪ್ರೇಮಗೆ ಸಕ್ಕರೆ ಹಾಕದೆ ಚಹಾ ಕೊಡುತ್ತಾಳೆ.)

**ಪ್ರೇಮ:** ಇಲ್ಲ, ಈ ಚಹಾ ನೀವು ಕುಡಿಯಿರಿ; ಅಷ್ಟರಲ್ಲಿ ನಾನು ಇನ್ನೊಂದು ಸಿಗರೇಟ ಸೇದುತ್ತೇನೆ.

**ಹುಸನಾ:** ಹೊರಗೆ ಮಳೆ ಹೇಗೆ ಆಗುತ್ತಿದೆ, ನೋಡಿ.

**ಪ್ರೇಮ:** (ಸಿಗರೇಟು ಸೇದುತ್ತ) ನಿಮಗೆ ಮಳೆಯೆಂದರೆ ಆಗದು, ಅಲ್ಲವೇ ? ಮೆಚ್ಚಿಕೆ ?

**ಹುಸನಾ:** (ಪ್ರೇಮನ ಅರೆಮುಚ್ಚಿದ ಕಣ್ಣುಗಳತ್ತ ನೋಡುತ್ತ) ಮೆಚ್ಚಿಕೆ ? ಮೆಚ್ಚಿಕೆ ಆಗದರ ಮಾತಲ್ಲ, ನಿಜವೆಂದರೆ ನನಗೆ ವಿಪರೀತ ಚಳಿಯಾಗುತ್ತಲಿದೆ.

**ಪ್ರೇಮ:** ಚಳಿಗೆ ಚಿಕಿತ್ಸೆಯೆಂದರೆ ಚಹಾ, ಚಳಿಗೆ ಚಿಕಿತ್ಸೆ ಎಂದರೆ....

**ರಾಮು:** (ಕಪ್ ಇಡುತ್ತ) ಮೇಮಸಾಹಬ, ಇನ್ನು ಏನಾದರೂ ತರಲೆ ?

**ಹುಸನಾ:** ಧನ್ಯವಾದ ರಾಮು. (ಹುಸನಾ ಪ್ರೇಮನಿಗಾಗಿ ಚಹಾ ಮಾಡುತ್ತಾಳೆ) ಇನ್ನೇನು ಬೇಡ ರಾಮು, ನೀನು ವಿಶ್ರಾಂತಿ ತೆಗೆದುಕೊ.

ಪ್ರೇಮ: (ಸಿಗರೇಟ ಸೇದುತ್ತ ಸೇದುತ್ತ ಒಂದು ರೀತಿ ಮತ್ತನಾಗುತ್ತಿದ್ದಾನೆ) ನೀವು ಎಂದೂ ಸಿಗರೇಟ ಸೇದಿಲ್ಲೇನು, ಹುಸನಾ.

ಹುಸನಾ: ನನಗೆ ಅಭ್ಯಂತರವೇನಿಲ್ಲ, ನನಗೂ ಸೇದಬೇಕು ಅನ್ನಿಸುತ್ತಲಿತ್ತು. (ಸಿಗರೇಟ ಹಚ್ಚಿಕೊಳ್ಳುತ್ತಾಳೆ) ಹಾಸ್ಟಲ್‌ದಲ್ಲಿ ಒಬ್ಬಳೇ ಇದ್ದಾಗಲೆಲ್ಲ, ನನಗೆ ಜೊತೆ ಎಂದರೆ ಈ ಸಿಗರೇಟೆ.

ಪ್ರೇಮ: ನಾನಂತೂ ಸಿಗರೇಟ ಕೇವಲ...(ಪ್ರೇಮ ಒಮ್ಮೆಲೇ ಸುಮ್ಮನಾಗುತ್ತಾನೆ, ಕೆಲ ಹೊತ್ತು ಸುಮ್ಮನಿದ್ದ ನಂತರ, ಯಾವುದೋ ವಿಚಾರದಲ್ಲಿ ಮುಳುಗಿ, ಸಿಗರೇಟನ್ನು ಪ್ಲೇಟಿಗೆ ತಿಕ್ಕುತ್ತಾನೆ.)

ಹುಸನಾ: (ಸಿಗರೇಟಿನ ಸಣ್ಣ ಝುರಕಿ ಎಳೆದು) ನೀವು ಒಮ್ಮೆಲೆ ಹೀಗೇಕೆ ಸುಮ್ಮನಾದಿರಿ? (ಒಂದು ದ್ವಂದ್ವ ಸ್ಥಿತಿಯಲ್ಲಿ ಪ್ರೇಮಗೆ ಕಣ್ಣೀರು ಬರುತ್ತವೆ)

ಹುಸನಾ: ನಿಮಗೆ ಏನಾಗಿದೆ, ಪ್ರೇಮ? (ಹುಸನಾ ಎದ್ದು ಪ್ರೇಮನ ಹತ್ತಿರ ಹೋಗಿ ಕುಳಿತುಕೊಳ್ಳುತ್ತಾಳೆ.)

ಪ್ರೇಮ: ಏನಿಲ್ಲ ಹುಸನಾ, ಆದರೆ ಏನಾಗುತ್ತಿದೆ ನನಗೆ ಎಂಬುದೇ ತಿಳಿಯುತ್ತಿಲ್ಲ.

ಹುಸನಾ: ತಗೊಳ್ಳಿ, ಸಿಗರೇಟ ಸೇದಿ. (ಸಿಗರೇಟ ತೆಗೆದು ಅವನಿಗೆ ಕೊಡುತ್ತಾಳೆ, ಹಾಗೂ ಕಡ್ಡಿ ಕೆರೆದು ಅದಕ್ಕೆ ಹಚ್ಚುತ್ತಾಳೆ.)

ಪ್ರೇಮ: (ಜುರಿ ಎಳೆಯುತ್ತ) ಧನ್ಯವಾದ ಹುಸನಾ, ತುಂಬ ಥ್ಯಾಂಕ್ಸ್, ಹುಸನಾ ತುಂಬ....

ಹುಸನಾ: (ಪ್ರೇಮದಿಂದ) ಪ್ರೇಮ....!
(ಕೆಲ ಹೊತ್ತಿನ ವರೆಗೂ ಇಬ್ಬರೂ ಸುಮ್ಮನಿರುತ್ತಾರೆ, ಯಾವುದೋ ವಿಚಾರದಲ್ಲಿ ಮಗ್ನರಾದ ಹಾಗೆ.)

ಪ್ರೇಮ: ಹೊರಗೆ ಮಳೆಯಾಗುತ್ತಲೇ ಇದೆ, ಆಗುತ್ತಲೇ ಇದೆ.

ಹುಸನಾ: ಹಾಂ, ಆಗುತ್ತಲೇ ಇದೆ.

ಪ್ರೇಮ: ಈಗಿನ ಮಳೆ, ನನ್ನ ಮೇಲೆ ಮೋಡಿ ಮಾಡಿಬಿಡುತ್ತದೆ.

ಹುಸನಾ: ನಾನು ಒಳಗೆ ಅಗ್ಗಿಟಿಕೆಯ ಹತ್ತಿರ ಹೋಗಿ ಕುಳಿತುಕೊಳ್ಳುತ್ತೇನೆ; ನನಗೆ ನಿಮ್ಮ ಕಣ್ಣಲ್ಲಿ ಚಂಡಮಾರುತ ಎದ್ದ ಹಾಗೆ ಕಾಣಿಸುತ್ತಲಿದೆ.

ಪ್ರೇಮ: ಈ ಚಂಡಮಾರುತದ ಹಿಡಿತದಿಂದ ಪಾರಾಗುವವರು ಬಹು ಕಡಿಮೆ.

ಹುಸನಾ: ಅವೆಷ್ಟೋ ಹೃದಯಗಳಲ್ಲಿ ಇಂಥ ಚಂಡಮಾರುತ ಮೌನವಾಗಿ ಬಿದ್ದುಕೊಂಡಿರುತ್ತದೆ, ಕೊಂಚ ಅದನ್ನು ಯಾರಾದರೂ ಮುಟ್ಟಿದರೆ ಸಾಕು ಜಾಗೃತವಾಗುತ್ತದೆ. (ಕೈಯಲ್ಲಿದ್ದ ಸಿಗರೇಟು ಆರಿಸಿ ಮತ್ತೊಂದು ಹಚ್ಚಿಕೊಳ್ಳುತ್ತಾಳೆ.)

ಪ್ರೇಮ: ಹಾಗಾದರೆ, ನಿಮಗೆ ಹೆದರಿಕೆಯಾಗಬಾರದು. ಯಾರ ಒಳಗೆ ಚಂಡಮಾರುತ ಇರುತ್ತದೆಯೋ ಅವರು ಹೊರಗಿನ ಬಿರುಗಾಳಿ ನೋಡಿ ಎಂದೂ ಅಂಜುವುದಿಲ್ಲ.

ಹುಸನಾ: ಆಂ! ನಿಜ!

ಪ್ರೇಮ: ಹಾಂ! ಹುಸನಾ, ನನಗೆ, ನನ್ನ ರೆಕ್ಕೆಗಳು ನನ್ನನ್ನು ಎಲ್ಲಿಯೋ ಹಾರಿಸಿಕೊಂಡು ಹೋಗುತ್ತಲಿವೆ ಎಂದೆನಿಸುತ್ತದೆ.

(ಹುಸನಾ ಪ್ರೇಮನತ್ತ ನೋಡುತ್ತಾಳೆ. ಪ್ರೇಮ ಸಿಗರೇಟಿನ ಹೊಗೆಯಿಂದ ಸರ್ಕಲ್ ಮಾಡುತ್ತಿದ್ದಾನೆ.)

ಹುಸನಾ: ನೀವು ಈ ಹೊಗೆಯಿಂದ ಸರ್ಕಲ್ ಹೇಗೆ ಮಾಡುತ್ತೀರಿ?

ಪ್ರೇಮ: ಯಾವ ತುಟಿಗಳು ಪ್ರೇಮಿಸಿವೆಯೋ ಅಂಥ ತುಟಿಗಳಿಗೆ ಮಾತ್ರ ಇಂಥ ಸರ್ಕಲ್ ಮಾಡಲು ಬರುತ್ತದೆ.

ಹುಸನಾ: ಪ್ರೇಮ, ನಾನು ಕೂಡ....

ಪ್ರೇಮ: ನೀನು ಪ್ರೇಮ ಮಾಡಲಿಲ್ಲ, ಹುಸನಾ. ನಿಮ್ಮ ತಂದೆಯ ನೆರಳು ನಿನ್ನ ಮೇಲಿಂದ ಹಾರಿ ಹೋದಾಗ ನೀನಿನ್ನೂ ಚಿಕ್ಕವಳಿದ್ದೆ. ನೀನು ವಯಸ್ಸಿಗೆ ಬಂದಾಗ ನಿನ್ನನ್ನೂ ಯಾರಾದರೂ ಪ್ರೀತಿಸಬೇಕೆಂದು ನಿನಗೆ ಅನ್ನಿಸಿತು, ನಿನ್ನ ಪ್ರತಿಯೊಂದು ಮುಗುಳ್ನಗೆಯನ್ನು ಕಂಡು ಹೊಗಳುವವರು ಬೇಕೆಂದು ನಿನಗೆ ಅನ್ನಿಸತೊಡಗಿತು, ಇದಕ್ಕಿಂತ ಹೆಚ್ಚಾಗಿ ನಿನ್ನ ಹೃದಯದಲ್ಲಿ ಒಂದು ಆಶೆ ಇತ್ತು, ನಿನ್ನ ಅವಶ್ಯಕತೆಗಳನ್ನು ಪೂರೈಸುವ ಓರ್ವ ವ್ಯಕ್ತಿಯ ಅವಶ್ಯಕತೆಯಿತ್ತು, ಅಷ್ಟೇ ಅಲ್ಲ ನಿನ್ನ ಜೀವನದಲ್ಲಿದ್ದ ತಂದೆಯ ಕೊರತೆಯನ್ನು ತುಂಬಿಕೊಡತಕ್ಕಂಥ ವ್ಯಕ್ತಿಯ ಅವಶ್ಯಕತೆ ಯಿತ್ತು. ಓರ್ವ ಮಗಳು ತನ್ನ ತಂದೆಯ ಕಡೆ ನೋಡುವ ಹಾಗೆ ನೀನು ಆ ವ್ಯಕ್ತಿಯ ಕಡೆ ನೋಡಬೇಕೆನ್ನುವ ಆಶೆ ಇತ್ತು-ಅಸಂಖ್ಯಾತ ಪ್ರಶ್ನೆಗಳನ್ನು ನಿನ್ನ ರೆಪ್ಪೆಗಳಲ್ಲಿ ಮುಚ್ಚಿಟ್ಟುಕೊಂಡಿದ್ದಿ. ಇಂಥ ಸಮಯದಲ್ಲಿ ನಿನಗೆ ಶೇಖರನ ಪರಿಚಯವಾಯಿತು.

ಹುಸನಾ: ಪ್ರೇಮ!...

ಪ್ರೇಮ: ಹಾಂ ಹುಸನಾ, ನಾನು ತಪ್ಪು ನುಡಿಯುತ್ತಿಲ್ಲ. ಶೇಖರ ನಿನ್ನ ಎರಡೂ ಅವಶ್ಯಕತೆಗಳನ್ನೂ ಪೂರ್ತಿಗೊಳಿಸಿದ್ದಾನೆ.

ಹುಸನಾ: (ಗಾಬರಿಗೊಂಡು) ಪ್ರೇಮ!!

ಪ್ರೇಮ: ಶೇಖರ ನಿನ್ನನ್ನು ಪ್ರೇಮಿಸಿದ, ಯುವಕ ಯುವತಿಯನ್ನು ಪ್ರೇಮಿಸಿದ ಹಾಗೆ. ಶೇಖರ ನಿನಗೆ ಪ್ರೀತಿ ನೀಡಿದ, ಓರ್ವ ತಂದೆ ತನ್ನ ಮಗಳಿಗೆ ನೀಡುವ ಹಾಗೆ.

ಹುಸನಾ: (ಚೀರುತ್ತ) ಪ್ರೇಮ!!!

ಪ್ರೇಮ: ಇಡೀ ಆಯುಷ್ಯವನ್ನು ನೀನು ತವರು ಮನೆಯಲ್ಲಿಯೇ ಕಳೆಯುವು ದಾದರೆ ಆ ಮಾತು ಬೇರೆ.

ಹುಸನಾ: ಇಲ್ಲ ಪ್ರೇಮ, ಇಲ್ಲ....

(ಹೊರಗೆ ದಾರಿಯ ಮೇಲೆ ಎರಡು ಕಾರುಗಳು ಒಮ್ಮೆಲೇ ಬ್ರೆಕ್ ಹಾಕಿದ ಸಪ್ಪಳ ಕೇಳಿಸುತ್ತದೆ.)

ಪ್ರೇಮ: ಹೊರಗೆ, ದಾರಿಯ ಮೇಲೆ ಎರಡು ಕಾರುಗಳ ಡಿಕ್ಕಿ ನೋಡಿ

ಬರುತ್ತೇನೆ.

**ಹುಸನಾ:** ಪ್ರೇಮ!

(ಹೊರಗೆ ಮಿಂಚು ಮಿಂಚುತ್ತದೆ, ಗುಡುಗು ಗುಡುಗುತ್ತದೆ.)

**ಪ್ರೇಮ:** ನಾನು ಕೂಡಲೇ ಬರುತ್ತೇನೆ.

**ಹುಸನಾ:** (ಕೂಗುತ್ತ) ಪ್ರೇಮ, ಪ್ರೇಮ, ಹೊರಗೆ ಭಯಾನಕ ಮಿಂಚು, ಗುಡುಗು. ನೀನು ನನ್ನನ್ನು ಬಿಟ್ಟು ಹೋಗಬೇಡ, ಪ್ರೇಮ.

(ಪ್ರೇಮ ವೇಗವಾಗಿ ಹೊರಗೆ ಹೊರಡುತ್ತಾನೆ.)

**ಹುಸನಾ:** ಹೊರಟು ಹೋದ. ಇವನಂತೂ ಹೀಗೆಯೇ ಹೊರಟು ಹೋಗುತ್ತಾನೆ.... ಯಾವಾಗ ಬಂದಿದ್ದ ಮತ್ತು ಯಾವಾಗ ಹೊರಟು ಹೋದ?.... (ಕಣ್ಣಲ್ಲಿ ನೀರ್ದುಂಬಿ) ಜೀವನದ ಕಳ್ಳ ಬಾಗಿಲದಲ್ಲಿ ಹೊಕ್ಕು ಬಂದಿದ್ದ, ಅದೇ ಬಾಗಿಲದಿಂದಲೇ ಹೊರಟು ಹೋದ. ಶೇಖರ ಆಗಿದ್ದರೆ ಈ ರೀತಿ ನನ್ನನ್ನು ಬಿಟ್ಟು ಹೋಗುತ್ತಿರಲಿಲ್ಲ. ಇಲ್ಲ, ಇಲ್ಲ....ಇಲ್ಲ....ನಾನು ಶೇಖರನನ್ನು ಎಂದೂ ಬಿಡಲಾರೆ. ಶೇಖರನಿಲ್ಲದೆ ಈ ಸಂಸಾರವೆಲ್ಲ ನನಗೆ ನಿಸ್ಸಾರವಾಗಿ ತೋರುತ್ತದೆ. ನನ್ನ ಜೀವನದಲ್ಲಿ ಶೇಖರನಿಗಾಗಿ ಒಂದು ಸ್ಥಾನ ನಿರ್ಮಾಣವಾಗಿದೆ. ಶೇಖರ ಇಲ್ಲದಿದ್ದರೆ, ಬೇಲಿಯಿಲ್ಲದ ಹೂದೋಟದಂತಾದೀತು ನನ್ನ ಜೀವನ. ನಾನು ಶೇಖರನನ್ನು ಎಂದೂ ಬಿಡಲಾರೆ. ನಾವು ಕೂಡಿದಾಗಿನಿಂದ ಶೇಖರ ಯುವಕನಾಗುತ್ತಲಿದ್ದಾನೆ; ಚೆಲುವನಾಗುತ್ತಿದ್ದಾನೆ. ನಾನು ಶೇಖರನನ್ನು ಎಂದೂ ಬಿಡಲಾರೆ; ನಾನು ಶೇಖರನನ್ನು ಎಂದೂ ಬಿಡಲಾರೆ.

(ಇಷ್ಟರಲ್ಲಿ ಮಿಂಚು ಮಿಂಚುತ್ತದೆ. ಗುಡುಗು ಗರ್ಜಿಸುತ್ತದೆ ಹಾಗೂ ಹುಸನಾ ಗಾಬರಿಯಿಂದಾಗಿ ಚೀರುತ್ತ ದುಂಡು ಕೋಣೆಯೊಳಗೆ ಓಡಿ ಹೋಗುತ್ತಾಳೆ. ಬಾಗಿಲನ್ನು ಒಳಗಿನಿಂದ ಬಂದುಮಾಡಿಕೊಳ್ಳುತ್ತಾಳೆ.)

**ಪ್ರೇಮ:** (ಒದ್ದೆಯಾಗಿ ಬರುತ್ತಾನೆ) ಹುಸನಾ, ಹುಸನಾ ನೀನೆತ್ತ ಹೊರಟು ಹೋದೆ? (ಎದುರಿಗೆ ದುಂಡುಕೋಣೆಯ ಕಡೆ ಹೋಗುತ್ತ) ಹುಸನಾ, ಹುಸನಾ ನೀನೇಕೆ ಬಾಗಿಲು ಮುಚ್ಚಿಕೊಂಡಿರುವೆ? (ಬಾಗಿಲನ್ನು ಬಡಿಯುತ್ತ) ಹುಸನಾ, ಹುಸನಾ, ಹುಸನಾ, ನೀನಿಷ್ಟು ಅಳ್ಳೆದೆಯವಳೆಂದು ಗೊತ್ತಿರಲಿಲ್ಲ. ಅಶಕ್ತ ಪಾರಿವಾಳದ ಹಾಗೆ, ಕಣ್ಣುಮುಚ್ಚಿಕೊಂಡರೆ, ಅಪಾಯದಿಂದ ಯಾರೂ ಪಾರಾಗಲಾರರು. ಜೀವನದ ಕಡು ಕಷ್ಟಗಳನ್ನು ಎದುರಿಸಲಾರದೆ, ಕಾಲು ಹಾದಿಯಲ್ಲಿ, ಇಕ್ಕಟ್ಟಾದ ಓಣಿಯಲ್ಲಿಯೇ ಯಾವಾಗಲೂ ಹೋಗುವ ರೀತಿ ಒಳ್ಳೆಯದಲ್ಲ. ಪ್ರೇಮದ ರಾಜಮಾರ್ಗದಲ್ಲಿ ಅಪಾಯಗಳೂ ಇವೆ, ವಸಂತವೂ ಇದೆ. ಒಂದು ರಕ್ಷಣೆ, ಇಕ್ಕಟ್ಟಾದ ಓಣಿಯದು, ಒಂದು ರಕ್ಷಣೆ ಆತ್ಮವಿಶ್ವಾಸದ್ದು, ಒಂದು ರಕ್ಷಣೆ ಆತ್ಮಸಮ್ಮಾನದ್ದು. (ಬಾಗಿಲನ್ನು ಜೋರಾಗಿ ಬಡಿಯುತ್ತಾನೆ.) ಹುಸನಾ, ನಾನು ಈ ಬಾಗಿಲನ್ನು

ಒಡೆದು ಹಾಕುತ್ತೇನೆ. ನೀನೊಮ್ಮೆ ಹೊರಗೆ ಬಾ. ನೀನು ಹೊರಗೆ ಬಂದು ನನ್ನ ಪ್ರೇಮವನ್ನು ಬೇಕಾದರೆ ತಿರಸ್ಕರಿಸು.

(ಇಷ್ಟರಲ್ಲಿ ಮತ್ತೆ ಮಿಂಚು, ಗುಡುಗುಗಳ ಆರ್ಭಟ. ಹುಸನಾ ಹೆದರಿ ಬಾಗಿಲು ತೆಗೆಯುತ್ತಾಳೆ.)

**ಹುಸನಾ:** (ಪ್ರೇಮುನನ್ನು ಕಂಡು ಮತ್ತೆ ವಿಚಲಿತಳಾಗುತ್ತಾಳೆ) ಪ್ರೇಮು !

**ಪ್ರೇಮು:** (ಅವಳನ್ನು ಹಿಡಿದುಕೊಂಡು ಹೊರಗೆ ತರುತ್ತಾನೆ) ಹುಸನಾ, ನೀನೇಕೆ ಹೀಗಾಗಿರುವೆ ?

**ಹುಸನಾ:** ಪ್ರೇಮು !....

**ಪ್ರೇಮು:** (ಭುಜಗಳನ್ನು ಹಿಡಿದು ಅಲ್ಲಾಡಿಸುತ್ತಾನೆ.) ಹುಸನಾ, ನೀನು ಆ ದಿನದ, ಬರಲಿರುವ ದಿನದ ನೆನಪು ಮಾಡಿಕೊ. ನಿನ್ನ ಸುತ್ತ-ಮುತ್ತ ಒಂದು ರೀತಿಯ ವಾಸನೆ ಬರುತ್ತದೆ. ಶೇಖರನ ಶ್ರೀಮಂತಿಕೆ, ಶೇಖರನ ಸ್ಥಾನ ಮಾನ, ಕಾರು ಗಾಡಿಗಳು, ಈ ಸೌಧಗಳು, ನಿನ್ನನ್ನು ತೃಪ್ತಿಪಡಿಸದೆ ಹೋಗಬಹುದು; ಆಗ ನೀನು ಹಿಂದೆ ಹೊರಳಿ, ಈ ಸುಂದರ ಸಾಯಂಕಾಲವನ್ನು ಸ್ಮರಿಸಿಕೊಳ್ಳುವೆ, ಬಂಧನದಲ್ಲಿರುವ ಜಿಂಕೆ ಕೊರಳೆತ್ತಿ, ಎತ್ತಿ ವಿಪಿನದ ಹಚ್ಚ ಹಸಿರನ್ನು ನೋಡಿ, ತನ್ನ ಹಸಿದ ಕಂಗಳನ್ನು ತೃಪ್ತಿಪಡಿಸಿಕೊಳ್ಳುವಂತೆ (ವಿರಾಮ !)

**ಹುಸನಾ:** ಪ್ರೇಮು, ಮೊದಲ ಸಲ ಶೇಖರ ನನ್ನನ್ನು ಹೊರಗೆ ಕರೆದುಕೊಂಡು ಹೋದಾಗ, ಅವನ ಕಿವಿಯ ಬದಿಯಲ್ಲಿ ಬಿಳಿಯ ಕೂದಲನ್ನು ನೋಡಿ ನಾನೂ ಯೋಚಿಸಿದ್ದೆ, ಅದರಿಂದ ನನಗೆ ವಾಸನೆ ಬರಬಹುದೆಂದು, ಆದರೆ ನನಗೆ ಅದರಿಂದ ಸುಗಂಧವೇ ಬರುತ್ತಲಿತ್ತು.

**ಪ್ರೇಮು:** ಹುಸನಾ, ನಿನ್ನ ಸೌಂದರ್ಯವೇ ಹಾಗಿದೆ, ನಿನ್ನ ಸೌಂದರ್ಯಕ್ಕೆ ಮತ್ತೊಂದು ಉದಾಹರಣೆಯೇ ಇಲ್ಲ, ಹುಸನಾ. ಪ್ರಳಯವನ್ನೇ ಹೋಲುವ ನಿನ್ನ ಯೌವ್ವನ, ತನ್ನನ್ನು ತಾನೇ ಇನ್ನೊಬ್ಬರಲ್ಲಿ ಕಾಣತೊಡಗುತ್ತದೆ. ಶೇಖರ ಈಗಲೂ ದಮ್ಮೊಳನ್ನು ಪ್ರೇಮಿಸುತ್ತಾನೆ. ದಮ್ಮೊ ಅಸಂಖ್ಯಾತ ಪ್ರೇಮುಗಳನ್ನು ಶೇಖರನ ಮಗನಿಗಾಗಿ ಬಲಿ ಕೊಡಬಲ್ಲಳು, ಶೇಖರನೂ ಹಾಗೆಯೇ, ನಿನ್ನಂಥ ಸಾವಿರಾರು ಸಂದರಿಯರನ್ನು ತನ್ನ ಹೆಂಡತಿಯ ಮಗನಿಗಾಗಿ ಬಲಿ ಕೊಡಬಲ್ಲ. ಹುಸನಾ, ನೀನೀಗ ಯೌವ್ವನದ ಶಿಖರದಲ್ಲಿರುವೆ, ನಿನ್ನ ಕಣ್ರೆಪ್ಪೆಗಳಲ್ಲಿ ಅಸಂಖ್ಯಾತ ಸ್ವಪ್ನಗಳು ನಿದ್ರಿಸಿವೆ, ಅವು ಅಪಾರ ಜಾದೂ ಮಾಡಬಲ್ಲವಾಗಿವೆ. ನಿನ್ನ ಅಂಗ ಅಂಗದಿಂದ ಒಂದು ಸುಗಂಧ ಹೊರಡುತ್ತಲಿದೆ, ನಿನ್ನ ಸುತ್ತ-ಮುತ್ತವೂ ಸುಗಂಧ ಸೂರೆಗೊಂಡಿದೆ, ನಿನ್ನ ಒಂದು ಕೃಪಾದೃಷ್ಟಿ, ನಿನ್ನ ಒಂದು ಸ್ಪರ್ಶ, ನಿನ್ನ ಒಂದು ಮುಗುಳ್ನಗೆಗಾಗಿ ಯಾರಾದರೂ ಸರಿ, ನೂರು ನೂರು ಸಲ ಜನ್ಮ ಎತ್ತಬಲ್ಲರು, ನೂರು ನೂರು ಸಲ ಸಾವನ್ನು ಅಪ್ಪಬಲ್ಲರು. ಹುಸನಾ, ನೀನು ಈಗ ತವರು ಮನೆಯತ್ತ ಬೆನ್ನು ತಿರುಗಿಸುವ ಕಾಲ ಇದು.

ನಿನ್ನ ದೃಷ್ಟಿ ಈಗ ದೂರ ಕ್ಷಿತಿಜದ ಮೇಲೆ ನೆಟ್ಟಿರಬೇಕಾದ ಸಮಯವಿದು. ಹುಸನಾ, ಜೀವನವನ್ನು ನಿನ್ನ ತೋಳಲ್ಲಿ ತೆಗೆದುಕೊಂಡು, ಯಾವುದೇ ಕ್ಷಣಕ್ಕಾದರೂ ಸರಿ, ಎಲ್ಲ ಕಾಲಕ್ಕೂ ಶಾಶ್ವತವಾಗಿರುವ ಹಾಗೆ ಮಾಡುವ ಕ್ಷಣವಿದು. ಈ ದಿನ, ಇಂಥ ಸಮಯ ಮತ್ತೆ ಮತ್ತೆ ಬರುವುದಿಲ್ಲ, ಹುಸನಾ.

ರಾಮು: (ಬರುತ್ತ) ಮತ್ತೆ ಏನಾದರೂ ಬೇಕಿತ್ತೆ ಸಾಹೇಬ....

ಹುಸನಾ: ಏನೂ ಇಲ್ಲ.

(ರಾಮು ದುಂಡುಕೋಣೆಯಲ್ಲಿ ಹೋಗಲು ಮುಂದೆ ಹೋಗುತ್ತಾನೆ)

ಪ್ರೇಮ: ರಾಮು, ನೀನೇನು ಮಾಡಲು ಹೊರಟಿರುವೆ ?

ರಾಮು: ಒಡೆದಿರುವ ಕಪ್ಪಿನ ತುಂಡುಗಳನ್ನು ಆರಿಸಿಕೊಳ್ಳಲೇ ಸಾಹೇಬ ?

ಹುಸನಾ: ರಾಮು....

ಪ್ರೇಮ: ರಾಮು...., ನೀನು ಮೊದಲು ಟ್ಯಾಕ್ಸಿ ತಾ. (ರಾಮು ಹೋಗುತ್ತಾನೆ.)

ಹುಸನಾ: ನೀವಂತೂ, ನನ್ನ ಬಾಯಲ್ಲಿಯ ಮಾತನ್ನೇ ಕಸಿದುಕೊಂಡಿರಿ.

(ಒಬ್ಬರನ್ನೊಬ್ಬರು ನೋಡುತ್ತಾರೆ....ಪರಸ್ಪರರ ಸೌಂದರ್ಯವನ್ನು, ಚೆಲುವನ್ನು, ಯೌವ್ವನವನ್ನು....ಫೋನಿನ ಗಂಟೆ ಬಾರಿಸುತ್ತದೆ.... ಬಾರಿಸುತ್ತಲೇ ಇರುತ್ತದೆ. ಯಾರೂ ರಿಸೀವರ ಎತ್ತಿ ಮಾತಾಡುವುದಿಲ್ಲ. ಗಂಟೆ ಬಾರಿಸುತ್ತ... ಬಾರಿಸುತ್ತ ಕೊನೆಗೆ ನಿಲ್ಲುತ್ತದೆ.)

ಪ್ರೇಮ: (ಒಮ್ಮೆಲೇ ಸ್ವಪ್ನದಿಂದ ಎಚ್ಚತ್ತ ಹಾಗೆ) ಫೋನಿನ ಗಂಟೆ ಬಾರಿಸುತ್ತಿತ್ತೇನು ?

ಹುಸನಾ: ಬಹುಶಃ ಬಾರಿಸುತ್ತಿತ್ತು !

ಪ್ರೇಮ: ನನಗೆ ಹೀಗೆನಿಸುತ್ತದೆ, ಹೀಗೆನಿಸುತ್ತದೆ....

ಹುಸನಾ: ಹೇಗೆನಿಸುತ್ತದೆ, ಪ್ರೇಮ ?

ಪ್ರೇಮ: ನಿನಗೆ ಹೇಗೆನಿಸುತ್ತದೆಯೋ ಹಾಗೆ, ಹುಸನಾ.

(ಇಬ್ಬರೂ ಮುಗುಳ್ನಗುತ್ತಾರೆ)

ಹುಸನಾ: ನನಗೆ ಹೀಗೆನಿಸುತ್ತದೆ, ಹೀಗೆನಿಸುತ್ತದೆ; ಹೇಗೆಂದರೆ ಇಡೀ ಆಯುಷ್ಯ ತುಂಬ ಯಾರೋ ಬಿಚ್ಚಿ ಹಾಕಿದ ಬಟ್ಟೆಯನ್ನು ತೊಡುತ್ತಿರುವಂತೆ ಹಾಗೂ ಮತ್ತೆ ಯಾರಿಗೋ ಯಾರದೋ ಮೆಚ್ಚಿನ, ಯಾವುದೋ ವಸ್ತುವನ್ನು ಸಿದ್ಧಗೊಳಿಸುತ್ತಿರುವಂತೆ.....(ಇಬ್ಬರೂ ನಗುತ್ತಾರೆ)

ಪ್ರೇಮ: ಬಹಳ ದಿನಗಳ ಹಿಂದಿನ ಮಾತು, ಒಂದು ದಿನ ಮಳೆ ಸುರಿಯುತ್ತಲಿತ್ತು, ಬಿರುಗಾಳಿಯೂ ಇತ್ತು, ನನ್ನ ಕಾಲು ಜಾರಿತು ಮತ್ತು ನಾನು ರಾಡಿಯಲ್ಲಿ ಹೋಗಿ ಬಿದ್ದೆ.

ಹುಸನಾ: ಇಂದು ಮತ್ತೆ ಮಳೆಯಿದೆ, ಬಿರುಗಾಳಿ ಇದೆ....

ಪ್ರೇಮ: ನನಗೆ ಮತ್ತೆ ಹೀಗೆನಿಸುತ್ತಿದೆ-ಮತ್ತೆ ನನ್ನ ಕಾಲು ಜಾರಿದೆ, ಈ ಸಲ ನಾನು ದಂಡೆಯ ಮೇಲೆ ಬಂದು ಬಿದ್ದಿರುವೆ.

ಹುಸನಾ: (ಎದ್ದು ಬಾಗಿಲ ಹತ್ತಿರ ಹೋಗುತ್ತಾಳೆ) ಹೊರಗೆ ತುಂಬ ಜೋರಾಗಿದೆ

ಮಳೆ.

ಪ್ರೇಮ: (ಹುಸನಾಳ ಹತ್ತಿರ ಹೋಗುತ್ತ) ನನಗೆ ಈ ಜಡಿಮಳೆ ಎಂದರೆ ತುಂಬ ಪ್ರೀತಿ.

ಹುಸನಾ: ಈಗಂತೂ ಮಳೆ ನಿಲ್ಲಬೇಕು.

ಪ್ರೇಮ: ಪ್ರವಾಸಿಗೆ ಹೊಸ ಗುರಿ ಕಾಣಿಸಿಕೊಂಡಿದೆ.

ಹುಸನಾ: ಹೊಸ ಸ್ಥಾನಕ್ಕೆ ಅದೆಂಥ ಉತ್ಕಟ ಇಚ್ಛೆ ಇರುತ್ತದೆ!

ಪ್ರೇಮ: ಗುಡಿಸಲ ಪಕ್ಷಿಗಳು ಗುಡಿಸಲಿಗೆ ಬರಬೇಕಾಗಿದೆ.
(ಇಬ್ಬರೂ ಮುಗುಳ್ನಗುತ್ತಾರೆ)

ಹುಸನಾ: ಬಹುಶಃ ರಾಮು ಟ್ಯಾಕ್ಸಿ ತಂದನೆಂದು ಕಾಣುತ್ತದೆ.

ಪ್ರೇಮ: ಇಷ್ಟು ಬೇಗ!....

ಹುಸನಾ: ಇಲ್ಲೇ ಸಮೀಪ ಸಿಕ್ಕಿರಬೇಕು.

ಪ್ರೇಮ: ನಾನು ಇನ್ನೊಂದು ಸಿಗರೇಟ ಹಚ್ಚಿಕೊಳ್ಳಲೇ?
(ಪ್ರೇಮ, ಡಬ್ಬಿಯಲ್ಲಿಯ ಸಿಗರೇಟ ತೆಗೆದುಕೊಂಡು ತುಟಿಯ ಮಧ್ಯ ಇಟ್ಟುಕೊಳ್ಳುತ್ತಾನೆ. ಹುಸನಾ ಅದಕ್ಕೆ ಕಡ್ಡಿ ಕೊರೆದು ಹಚ್ಚುತ್ತಾಳೆ.)

ಹುಸನಾ: ನಿನ್ನ ಸಿಗರೇಟ ಹೊತ್ತಿಸುತ್ತ ಪ್ರೇಮ....

ಪ್ರೇಮ: ನೀನು ನಿಂತ ಏಕೆ, ಹುಸನಾ?
(ಹುಸನಾ ಅವನ ಮುಖದತ್ತ ಪ್ರೇಮ ತುಂಬಿದ ಕಣ್ಣುಗಳಿಂದ ನೋಡುತ್ತಲಿದ್ದಾಳೆ.)

ಹುಸನಾ: ನಿನ್ನ ಸಿಗರೇಟ ಹೊತ್ತಿಸುತ್ತ, ಪ್ರೇಮ, ನನ್ನ ಓಂಬಡ ಎತ್ತರಿಸಬೇಕಾಗಿಲ್ಲ, ನಿನಗೆ ಮೊಣಕಾಲ ಮೇಲೆ ಬಾಗಬೇಕಾಗಿಲ್ಲ.
(ಇಬ್ಬರೂ ನಗುತ್ತಾರೆ)

ಪ್ರೇಮ: ದಮ್ಮೊ ಪಾಪ, ಇಂದೇ ನಡೆದು ಹೋದಳು, ಇಂದೇ ಓಂದೆ ಉಳಿದಳು. (ಇಬ್ಬರೂ ನಗುತ್ತ-ನಗುತ್ತ ಹೊರಗೆ ಹೊರಟು ಹೋದರು. ಟ್ಯಾಕ್ಸಿ ಸ್ಟಾರ್ಟ ಆಗುವ ಸಪ್ಪಳ ಕೇಳಿಬರುತ್ತದೆ.)

ರಾಮು: (ಬರುತ್ತ) ಹೊರಟು ಹೋದರು, ಹೊರಟು ಹೋದರು. ಈ ಮಳೆಯಲ್ಲಿ ಯಾರು ಹೋಗುತ್ತಾರೋ ಅವರೆಂದೂ ಮರಳಿ ಬರುವುದಿಲ್ಲ.
(ಫೋನಿನ ಗಂಟೆ ಬಾರಿಸುತ್ತದೆ)

ರಾಮು: (ಫೋನ ಎತ್ತಿ) ಯಾರು ಸಾಹೇಬ....? ಏನಂದಿರಿ...ರಾಂಗ ನಂಬರ ಸಾಹೇಬ...(ಫೋನ ಇಡುತ್ತಾನೆ. ಫೋನಿನ ಗಂಟೆ ಮತ್ತೆ ಬಾರಿಸುತ್ತದೆ.)

ರಾಮು: ಹಲೋ... ಸಾಹೇಬ...ನಾನು ಆರನೆ ನಂಬರ ಬಂಗಲೆಯಿಂದ ಮಾತಾಡುತ್ತಿರುವೆ... ಆಂ!.... ಸರದಾರ ರೋಡ....ಆರನೇ ನಂಬರ...ಹಾಂ!.... ರಾಂಗ ನಂಬರ...ರಾಂಗ ನಂಬರ...ಹೇಳುವುದು ಕೇಳಿಸುವುದಿಲ್ಲವೇ?... ಫೋನ ಬಂದ ಮಾಡಿ... ನಾನು ಇಲ್ಲಿಯ

ನೌಕರ... ನನಗೆ ಮತ್ತೆ ಬೇರೆ ಕೆಲಸ ಮಾಡುವುದಿದೆ...
(ಸಿಟ್ಟಿನಿಂದ ಫೋನ ಇಟ್ಟುಬಿಡುತ್ತಾನೆ. ರಾಮು ಫೋನ ಇಟ್ಟ ಅರ್ಧ ನಿಮಿಷದ ನಂತರ ಮತ್ತೆ ಫೋನಿನ ಗಂಟೆ ಬಾರಿಸತೊಡಗುತ್ತದೆ, ಈಗ ರಾಮು ಅದರ ಸಮೀಪ ಕೂಡ ಹೋಗುವುದಿಲ್ಲ. ಗಂಟೆ ಬಾರಿಸುತ್ತ ಬಾರಿಸುತ್ತ ಕೊನೆಗೆ ನಿಂತು ಹೋಗುತ್ತದೆ.)

**ದಮಯಂತಿ:** (ಬರುತ್ತ) ರಾಮು, ಪ್ರೇಮ ಸಾಹೇಬರಿಗೆ ಹೇಳು, ನಾನೀಗಲೇ ಬಟ್ಟೆ ಬದಲಿಸಿಕೊಂಡು ಬರುವೆ.

**ರಾಮು:** ಅವರು ಹೊರಟು ಹೋದರು.

**ದಮಯಂತಿ:** (ಗಾಬರಿಯಿಂದ) ಪ್ರೇಮ ಹೊರಟು ಹೋದ ? ಅಂಥದೇನು ಅರ್ಜಂಟ ?

**ರಾಮು:** ಪ್ರೇಮಸಾಹೇಬರೂ ಹೋದರು ಮತ್ತು ಹುಸನಾಬಾಯಿಯವರೂ ಹೋದರು.

**ದಮಯಂತಿ:** ಏನು, ಹುಸನಾ ಬಂದಿದ್ದಳೆ ?

**ರಾಮು:** ಹುಸನಾಬಾಯಿಯವರು ಪ್ರೇಮಸಾಹೇಬರಿಗಿಂತ ಮೊದಲೇ ಬಂದಿದ್ದರು, ದುಂಡುಕೋಣೆಯಲ್ಲಿ ಕುಳಿತಿದ್ದರು.

**ದಮಯಂತಿ:** (ಮುಗುಳ್ನಗುತ್ತ) ಹುಸನಾ ಆ ಕೋಣೆಯಲ್ಲಿ ಕುಳಿತು ದಾರಿ ನೋಡುತ್ತಿದ್ದಳು, ಪ್ರೇಮಸಾಹೇಬ ಹೊರಗೆ ದಿವಾನಖಾನೆಯಲ್ಲಿ.

**ರಾಮು:** ಇಲ್ಲ ಮೇಮಸಾಬ, ಮೊದಲು ಬೇರೆ-ಬೇರೆಯಾಗಿಯೇ ಕುಳಿತಿದ್ದರು, ನಂತರ ಇಲ್ಲಿ ಹೊರಗೆ ಸೋಫಾದ ಮೇಲೆ ಕುಳಿತಿದ್ದರು. ಬಹಳ ಹೊತ್ತಿನವರೆಗೂ ಚಹಾ ಕುಡಿಯುತ್ತಲಿದ್ದರು, ಕುಡಿಯುತ್ತಲಿದ್ದರು ಹಾಗೂ ಮಾತನಾಡುತ್ತಲಿದ್ದರು. ಆಮೇಲೆ ಅಲ್ಲಿ ಬಾಗಿಲ ಹತ್ತಿರ ಹೋಗಿ ನಿಂತುಕೊಂಡರು, ಅದೆಷ್ಟೋ ಹೊತ್ತು ಮಳೆ ನೋಡುತ್ತಲಿದ್ದರು....ಮತ್ತೆ...

**ದಮಯಂತಿ:** ಈ ಸಿಗರೇಟ ಯಾರು ಸೇದುತ್ತಿದ್ದರು ?

**ರಾಮು:** ಪ್ರೇಮಸಾಹೇಬ ಸೇದುತ್ತಿದ್ದರು, ಹುಸನಾಬಾಯಿಯವರೂ ಸೇದುತ್ತಿದ್ದರು. (ದಮಯಂತಿಯ ಬಣ್ಣ, ಸ್ವಲ್ಪ ಹೊತ್ತಿನಿಂದ ಬದಲಾಗುತ್ತಿದ್ದುದು ಮತ್ತೆ ಪೇಲವಾಗುತ್ತದೆ. ಅವಳ ಕೈಯಲ್ಲಿದ್ದ ಉಣ್ಣೆಯ ಪ್ಯಾಕೆಟ್ ಜಾರಿ ಕೆಳಗೆ ಬೀಳುತ್ತದೆ.)

**ದಮಯಂತಿ:** ರಾಮು, ಪ್ರೇಮಸಾಹೇಬ ಸೇದಿರಲಿಕ್ಕಿಲ್ಲ. (ಪ್ರೇಮ, ಸೇದಿಲ್ಲವೆಂದು ಹೇಳಲಿ ಎನ್ನುವ ಉತ್ಕಟ ಇಚ್ಛೆ ಇತ್ತು ಅವಳಲ್ಲಿ. ತನಗೆ ತಾನೇ ಮೋಸಗೊಳಿಸುವ ರೀತಿ ಇತ್ತು ಅವಳ ಮಾತಿನಲ್ಲಿ)

**ರಾಮು:** ನಾನು ಸ್ವತಃ ನೋಡಿರುವೆ ಮೇಮಸಾಬ, ಅವರಂತೂ ಒಂದರ ಮೇಲೊಂದು ಸಿಗರೇಟ ಸೇದುತ್ತಲೇ ಇದ್ದರು. ಹುಸನಾಬಾಯಿಯವರು ಸಿಗರೇಟ ಹಚ್ಚುತ್ತಿದ್ದರು. ಪ್ರೇಮಸಾಹೇಬರು ಸೇದುತ್ತಿದ್ದರು.

**ದಮಯಂತಿ:** ಮತ್ತೆ, ಪ್ರೇಮಸಾಹೇಬ ಹೊರಟು ಹೋದರು?

**ರಾಮು:** ಇಬ್ಬರೂ ಕೂಡಿಯೇ ಹೋದರು.

**ದಮಯಂತಿ:** ಏನು, ಹಾಗೆಂದರೆ?

**ರಾಮು:** ಅವರು ನನ್ನಿಂದ ಟ್ಯಾಕ್ಸಿ ತರಿಸಿದರು ಹಾಗೂ ಇಬ್ಬರೂ ಅದರಲ್ಲಿ ಕುಳಿತುಕೊಂಡು ಹೊರಟು ಹೋದರು. ಮಳೆ ನಿಲ್ಲಲಿ, ತಡೆಯಿರಿ ಎಂದು ನಾನು ಹೇಳಿದೆ. ಆದರೆ ಪ್ರೇಮಸಾಹೇಬ, ಮಳೆಯೆಂದರೆ ನನಗೆ ಬಹಳ ಇಷ್ಟ-ಎಂದು ಹೇಳುತ್ತ ಹೊರಟು ಹೋದರು. (ವಿರಾಮ.)

**ದಮಯಂತಿ:** ಸರಿ, ರಾಮು ನೀನು ಹೊರಗೆ ಇರು ಸಾಹೇಬರು ಈಗ ಬರಬಹುದು.

**ರಾಮು:** ಆಗಲಿ, ಮೇಮಸಾಬ. (ರಾಮು ಹೋಗುತ್ತಾನೆ.)

**ದಮಯಂತಿ:** (ಸ್ವಗತ) ಇಬ್ಬರೂ ಹೊರಟು ಹೋದರು. (ನಗಲು ಪ್ರಯತ್ನಿಸುತ್ತಾಳೆ, ಆದರೆ ಕಣ್ಣಲ್ಲಿ ಕಣ್ಣೀರು ಧುಮ್ಮುಕ್ಕುತ್ತವೆ) ಇಬ್ಬರೂ ಹೊರಟು ಹೋದರು. ಮೊದಲು ಬೇರೆ ಬೇರೆ ಕುಳಿತಿದ್ದರು, ಒಬ್ಬರು ದುಂಡುಕೋಣೆಯಲ್ಲಿ, ಇನ್ನೊಬ್ಬರು ಹೊರಗೆ ದಿವಾನ್‌ಖಾನೆಯಲ್ಲಿ. ಆ ನಂತರ ಇಬ್ಬರೂ ಕೂಡಿಯೇ ಕುಳಿತಿದ್ದರು. ಕೂಡಿ ಕುಳಿತು ಚಹಾ ಕುಡಿಯುತ್ತಿದ್ದರು; ಕೂಡಿ ಕುಳಿತು ಮಾತನಾಡುತ್ತಿದ್ದರು; ಕೂಡಿ ಕುಳಿತು ಸಿಗರೇಟ ಸೇದುತ್ತಿದ್ದರು. (ಪ್ರೇಮನ ಮಾತುಗಳನ್ನು ನೆನಪಿಸಿಕೊಳ್ಳುತ್ತ)-"ನಾನು ಸಿಗರೇಟು ಸೇದುವುದು ಕೇವಲ ತಮ್ಮ ಮುಂದೆ ಮಾತ್ರ. ಹತ್ತು ನಿಮಿಷ ತಮ್ಮ ಜೊತೆ ಕುಳಿತರೆ ಸಾಕು, ನನಗೆ ಸಿಗರೇಟ ಸೇದಬೇಕೆನಿಸುತ್ತದೆ"- ಸಿಗರೇಟ ಸೇದುತ್ತ ಸೇದುತ್ತ ಬಾಗಿಲ ಹತ್ತಿರ ಹೋಗಿ ನಿಂತರು, ಬಾಗಿಲ ಹತ್ತಿರ ನಿಂತು ಹೊರಗೆ ಮಳೆ ಸುರಿಯುತ್ತಿರುವುದನ್ನು ನೋಡುತ್ತಿದ್ದರು, ಬಿರಗಾಳಿಯುನ್ನು ನೋಡುತ್ತಿದ್ದರು, ಹಾಗೆಯೇ ಸಾಯಂಕಾಲ, ಕತ್ತಲೆಯಲ್ಲಿ ಪರಿವರ್ತನೆ ಹೊಂದಿತು.

(ದಮಯಂತಿ ಮತ್ತೆ ನಗಲು ಪ್ರಯತ್ನಿಸುತ್ತಾಳೆ, ಆದರೆ ಅವಳ ಕಣ್ಣಲ್ಲಿ ಮತ್ತೆ ಕಣ್ಣೀರು ಬರುತ್ತವೆ. ಕೆಲ ಹೊತ್ತು ಹಾಗೆಯೇ ಸುಮ್ಮನಿರುತ್ತಾಳೆ, ಆ ನಂತರ ಒಮ್ಮೆ ಒಂದು ಸೋಫಾದ ಮೇಲೆ ಕುಳಿತುಕೊಳ್ಳುತ್ತಾಳೆ, ಮತ್ತೆ ಸ್ವಲ್ಪ ಸಮಯದ ನಂತರ ಇನ್ನೊಂದು ಸೋಫಾದ ಮೇಲೆ ಹುಚ್ಚಿಯ ಹಾಗೆ ಒಮ್ಮೆ ಹುಸನಾ ಕುಡಿದಿಟ್ಟ ಚಹಾದ ಕಪ್ ನೋಡುತ್ತಾಳೆ. ಅದಕ್ಕೆ ಹುಸನಾ ಲಿಪ್‌ಸ್ಟಿಕ್ಕಿನ ಬಣ್ಣ ಹತ್ತಿದೆ. ಮಗುದೊಮ್ಮೆ ಆಷ್-ಟ್ರೇ ಎತ್ತಿ ನೋಡುತ್ತಾಳೆ ಅದರಲ್ಲಿ ಪ್ರೇಮ ಸೇದಿದ ಸಿಗರೇಟಿನ ತುಂಡುಗಳಿವೆ. ಚಿಂತೆ, ತಾಕಲಾಟದಿಂದಾಗಿ ಅಸ್ವಸ್ಥಳಾಗುತ್ತಿದ್ದಾಳೆ. ಅಷ್ಟರಲ್ಲಿ ಮೇಲಿನ ಕೋಣೆಯಿಂದ ಮಕ್ಕಳ ನಗುವಿನ ಧ್ವನಿ ಕೇಳಿಬರುತ್ತದೆ. ದಮಯಂತಿ ಒಮ್ಮೆಲೆ ಬೆಚ್ಚಿ ಬೀಳುತ್ತಾಳೆ. ಮಕ್ಕಳ ನಗೆಯ ಧ್ವನಿ ಮತ್ತೆ ಬರುತ್ತದೆ.

ಈ ಸಲ ದಮಯಂತಿಯ ಮುಖದ ಮೇಲೆ ಒಂದು ಆಶಾಕಿರಣದ ಬೆಳಕು ಹರಡುತ್ತದೆ. ಮೇಲೆ ಕೋಣೆಯಲ್ಲಿ ಮಕ್ಕಳು ನಗುತ್ತಲಿದ್ದಾರೆ, ನಗುತ್ತಲೇ ಇದ್ದಾರೆ. ಅವರ ನಗೆ, ಕೇಕೆ ಕೇಳಿದ ದಮಯಂತಿ ಏಳುತ್ತಾಳೆ. ಮಕ್ಕಳು ಈಗಲೂ ನಗುತ್ತಲಿವೆ. ಅವರ ಮುಗ್ಧ ನಗೆ ದಮಯಂತಿಯನ್ನು ಹಿಡಿದು ನಿಲ್ಲಿಸಿದ ಹಾಗಿದೆ. ಮೆಲ್ಲ-ಮೆಲ್ಲನೆ, ಒಂದೊಂದೇ ಹೆಜ್ಜೆ ಎತ್ತಿ ಇಡುತ್ತ ದಮಯಂತಿ ಮೆಟ್ಟಲು ಹರಿ ಮೇಲೆ ಹೋಗುತ್ತಾಳೆ.)

**ಶೇಖರ:** (ರಾಮುನೊಂದಿಗೆ ಬರುತ್ತ) ರಾಮು, ನೀನು ಹುಸನಾಗೆ ಚಹಾ ಕೊಟ್ಟಿದ್ದಿ ತಾನೆ ?

**ರಾಮು:** ಹಾಂ ಸಾಹೇಬ !

**ಶೇಖರ:** ದುಂಡುಕೋಣೆಯಲ್ಲಿ ಅಗ್ಗಿಟಿಕೆ ಉರಿಯುತ್ತಿದೆ ತಾನೇ ?

**ರಾಮು:** ಉರಿಯುತ್ತಿದೆ, ಸಾಹೇಬ.

**ಶೇಖರ:** ಯಾವುದಾದರೂ ಫೋನ್ ಬಂದಿತ್ತೇನು ?

**ರಾಮು:** ಬಂದಿತ್ತು ಸಾಹೇಬ, ಆದರೆ ಅದು ರಾಂಗ ನಂಬರ ಇತ್ತು.

**ಶೇಖರ:** (ದುಂಡುಕೋಣೆಯ ಕಡೆ ಬರುತ್ತ) ಹುಸನಾ !

**ರಾಮು:** ಅವರು ಹೊರಟು ಹೋದರು, ಸಾಹೇಬ !

**ಶೇಖರ:** ಆಂ ! ಹೊರಟು ಹೋದಳು, ಯಾವಾಗ ?

**ರಾಮು:** ಸ್ವಲ್ಪ ಹೊತ್ತಿನ ಹಿಂದೆ, ಪ್ರೇಮಬಾಬುನೊಂದಿಗೆ ಟ್ಯಾಕ್ಸಿಯಲ್ಲಿ ಹೊರಟು ಹೋದರು.

**ಶೇಖರ:** ಪ್ರೇಮ ಬಂದಿದ್ದನೇನು ?

**ರಾಮು:** ಹೌದು, ಸಾಹೇಬ !

**ಶೇಖರ:** ಯಾವಾಗ ?

**ರಾಮು:** ಮಳೆ ಬರುವುದಕ್ಕಿಂತ ಸ್ವಲ್ಪ ಮೊದಲು ಬಂದಿದ್ದರು.

**ಶೇಖರ:** ಮತ್ತೆ ?

**ರಾಮು:** ಮೊದಲು ಹುಸನಾ ಬಾಯಿಯವರು ಒಳಗೆ ದುಂಡುಕೋಣೆಯಲ್ಲಿ ಕುಳಿತಿದ್ದರು, ಪ್ರೇಮಬಾಬು ಹೊರಗೆ. ಆನಂತರ ಇಬ್ಬರೂ ಹೊರಗೆ ಬಂದು ಕುಳಿತರು. ಹೊರಗೆ ಕುಳಿತು ಬಹಳ ಹೊತ್ತಿನವರೆಗೂ ಚಹಾ ಕುಡಿಯುತ್ತಲಿದ್ದರು, ಹಾಗೂ ಮಾತಾಡುತ್ತಿದ್ದರು. ಕೆಲ ಸಮಯದ ನಂತರ ಬಾಗಿಲಲ್ಲಿ ಹೋಗಿ ನಿಂತರು, ಮಳೆ ನೋಡುತ್ತ. ನಂತರ ಟ್ಯಾಕ್ಸಿ ತರಿಸಿಕೊಂಡು ಅದರಲ್ಲಿ ಇಬ್ಬರೂ ಹೊರಟು ಹೋದರು.

**ಶೇಖರ:** (ಕ್ರೋಧತಪ್ತನಾಗಿ) ಹೊರಟು ಹೋದರು, ಇಬ್ಬರೂ ಹೊರಟು ಹೋದರು. (ಆ ಸಿಟ್ಟಿನಲ್ಲಿಯೇ ಶೇಖರ ದುಂಡುಕೋಣೆಯೊಳಗೆ ಹೋಗುತ್ತಾನೆ. ರಾಮು ಹೆದರಿಕೊಂಡು ಸುಮ್ಮನಿರುತ್ತಾನೆ, ನಂತರ ಚಹಾದ ಕಪ್ ಒಡೆದು ಬಿದ್ದಿದ್ದ ತುಂಡುಗಳನ್ನು ಎತ್ತಲು

ಹೋಗುತ್ತಾನೆ.)

**ಶೇಖರ:** (ಅದೇ ರೀತಿ ಸಿಟ್ಟಿನಿಂದ) ರಾಮೂ.....

**ರಾಮು:** ಹಾಂ, ಸಾಹೇಬ!

**ಶೇಖರ:** ರಾಮು, ಈ ಕಪ್ ಯಾರು ಒಡೆದಿದ್ದಾರೆ?

**ರಾಮು:** ಸಾಹೇಬ, ಹುಸನಾಬಾಯಿಯವರು ಒಡೆದಿರಬೇಕು ಇಲ್ಲಾ ಪ್ರೇಮ ಸಾಹೇಬರು.....

**ಶೇಖರ:** ರಾಮು, ಯಾರು ಒಡೆದಿದ್ದಾರೆಂಬುದು ಸಹ ನಿನಗೆ ಗೊತ್ತಿಲ್ಲ. ರತ್ನ ಗಂಬಳಿ ಹಾಳಾಗಿ ಹೋಗಿದೆ.

**ರಾಮು:** ಸಾಹೇಬ, ಹುಸನಾಬಾಯಿಯವರು ಒಳಗೆ ಕುಳಿತಿದ್ದರು, ಬಹುಶಃ ಪ್ರೇಮಬಾಬು ಅವರಿಗೆ ಚಹಾ ಕೊಡಲು ಹೋಗಿರಬೇಕು.... ಮತ್ತೆ.... ಮತ್ತೆ.... ಈ ಕಪ್ ಒಡೆದು ಹೋಯಿತು.

**ಶೇಖರ:** (ಸಿಟ್ಟಿನಿಂದ) ನೀನೆಲ್ಲಿದ್ದೆ? ನೀನೆಲ್ಲಿರುತ್ತಿ? ಜನ ಮನೆಯನ್ನು ಲೂಟಿ ಮಾಡಿಕೊಂಡು ಹೋದರೂ ನಿನಗೆ ಅರಿವು ಇರುವುದಿಲ್ಲ.....

**ರಾಮು:** ಸಾಹೇಬ.....

**ಶೇಖರ:** ನೀನು ಇಲ್ಲಿಂದ ದೂರ ಹೊರಟು ಹೋಗು ರಾಮು, ನನ್ನ ಕಣ್ಣೆದುರಿಗೇ ನಿಲ್ಲಬೇಡ, ನೌಕರರು ಮನೆಯ ಬಗ್ಗೆ ಕಾಳಜಿಯಿಂದ ಇರುತ್ತಾರೆ, ಒಡೆಯನಿಗಾಗಿ ಜೀವ ಸಹಿತ ಕೊಡುತ್ತಾರೆ. ಆದರೆ ನೀನು.... ರಾಮು..... ನೀನು.....

**ರಾಮು:** ಆದರೆ ಸಾಹೇಬ.....

**ಶೇಖರ:** ರಾಮೂ.....ನೀನು ಹೊರಟು ಹೋಗು ಇಲ್ಲಿಂದ, ನಾನು ನಿನ್ನ ಮುಖ ಸಹಿತ ನೋಡಲು ಸಿದ್ಧನಿಲ್ಲ. (ರಾಮು ಹೋಗುತ್ತಾನೆ) (ಕ್ರೋಧಕ್ಕೆ ತುತ್ತಾದ ಶೇಖರ ದಿವಾನಖಾನೆಯಲ್ಲಿ ಅತ್ತಿಂದ ಇತ್ತ ಇತ್ತಿಂದ ಅತ್ತ ಅಡ್ಡಾಡುತ್ತಾನೆ, ತನ್ನಷ್ಟಕ್ಕೆ ತಾನೇ ಮಾತಾಡಿಕೊಂಡಂತೆ ಅವನ ತುಟಿಗಳು ಚಲಿಸುತ್ತವೆ. ಅವನು ಇದೇ ಚಿಂತೆಯಲ್ಲಿರುವಾಗಲೇ ಮೇಲಿನ ಕೋಣೆಯಿಂದ ಮಕ್ಕಳ ನಗುವಿನ ಧ್ವನಿ ಕೇಳಿಬರುತ್ತದೆ. ಸರಿಯಾಗಿ ದಮಯಂತಿಯ ಹಾಗೆಯೇ ಈ ಧ್ವನಿ ಕೇಳಿ ಶೇಖರನೂ ಮೆಟ್ಟಿಬೀಳುತ್ತಾನೆ. ಮಕ್ಕಳ ನಗುವಿನ ಧ್ವನಿ ಮತ್ತೆ ಕೇಳಿ ಬರುತ್ತದೆ. ಈ ಸಲವೂ ಕೂಡ ದಮಯಂತಿಯ ಹಾಗೆ ಶೇಖರನ ಮುಖದ ಮೇಲೂ ಒಂದು ಆಶಾಕಿರಣದ ಬೆಳಕು ಹರಡುತ್ತದೆ. ಮೇಲೆ ಮಕ್ಕಳು ನಗುತ್ತಲೇ ಇವೆ, ನಗುತ್ತಲೇ ಇವೆ. ಅವರ ನಗೆಯನ್ನು ಕೇಳಿ ಶೇಖರನ ಚಿಂತೆ ಕಡಿಮೆಯಾಗುತ್ತದೆ. ಅವರ ಮುಗ್ಧ ನಗೆ ಶೇಖರನ ಮೇಲೆ ಮೋಡಿ ಎಸಗುತ್ತದೆ. ಮೆಲ್ಲ-ಮೆಲ್ಲನೆ ಹೆಜ್ಜೆ ಇಡುತ್ತ ಮೆಟ್ಟಿಲು ಹತ್ತಿ ಮೇಲೆ ಹೋಗುತ್ತಾನೆ. ಮೇಲಿನ ಕದ ತೆರೆದ ಕೂಡಲೇ ನಗೆಯ ಧ್ವನಿ ಜೋರಾಗಿ ಕೇಳಿಸುತ್ತದೆ. ಇದರಲ್ಲಿ ದಮಯಂತಿ ಹಾಗೂ ಶೇಖರರೂ ಸೇರುತ್ತಾರೆ. ನಗೆಯ ಈ ಧ್ವನಿ ಕೇಳಿಸುತ್ತಲೇ ಇರುತ್ತದೆ, ಕೇಳಿಸುತ್ತಲೇ

ಇರುತ್ತದೆ, ಕೆಲ ಸಮಯದ ನಂತರ ಧ್ವನಿ ಕಡಿಮೆಯಾಗುತ್ತದೆ)

**ಆಯಾ:** (ರಾಮುನೊಂದಿಗೆ ಬರುತ್ತ) ರಾತ್ರಿಯಾಗುತ್ತ ಬಂತು, ನಿಮ್ಮ ಚೇತನ, ನಮ್ಮ ಹುಡುಗಿಗೆ ಅದೆಂಥ ಮೋಡಿ ಮಾಡಿರುವನೋ, ಅವಳಂತೂ ಇಲ್ಲಿಂದ ಬರಲಿಕ್ಕೇ ಸಿದ್ಧಳಿಲ್ಲ.

**ರಾಮು:** ಯಾರಾದರೂ ಹೇಳುವುದರಿಂದ ಯಾರು ನಿಲ್ಲುತ್ತಾರೆ, ಯಾರಾದರೂ ಹೇಳುವುದರಿಂದ ಯಾರು ಹೋಗುತ್ತಾರೆ.

**ಆಯಾ:** ಸರಿ, ನೀನು ಮೇಲೆ ಹೋಗಿ ಅವಳನ್ನು ಕರೆದುಕೊಂಡು ಬಾ.

**ರಾಮು:** ಒಲ್ಲೆ, ಒಲ್ಲೆ.....ನಾನಂತೂ ಹೋಗುವುದಿಲ್ಲ, ಸಾಹೇಬರು ಇಂದು ಬಹಳ ಸಿಟ್ಟಿನಲ್ಲಿದ್ದಾರೆ.

**ಆಯಾ:** ಅದೇಕೆ ?

**ರಾಮು:** ಹುಸನಾಬಾಯಿಯವರು ಹಾಗೂ ಪ್ರೇಮಬಾಬು ಒಂದೇ ಟ್ಯಾಕ್ಸಿಯಲ್ಲಿ ಹೊರಟು ಹೋದರು.

**ಆಯಾ:** ಪ್ರೇಮಬಾಬು ಹಾಗೂ ಹುಸನಾ ಅವರದು ಒಳ್ಳೇ ಜೋಡಿ, ಕೆಟ್ಟದ್ದೇನಲ್ಲ !

**ರಾಮು:** ಜೋಡಿ, ನಮ್ಮ ಸಾಹೇಬರು ಹಾಗೂ ಮೇಮಸಾಬ ಅವರದು ಅದಾವ ಕೆಟ್ಟದ್ದು ?

(ಮೇಲಿನ ಬಾಗಿಲು ತೆರೆಯುತ್ತದೆ. ಮಕ್ಕಳ ನಗುವಿನ ಧ್ವನಿ ಕೇಳಿ ಬರುತ್ತದೆ.)

**ಆಯಾ:** ಬರುತ್ತಿದ್ದಾರೆ, ಬಹುಶಃ ಕೆಳಗೇ ಬರುತ್ತಿದ್ದಾರೆ.

**ರಾಮು:** ನೀನೀಗ ಹೊರಗೆ ನಿಲ್ಲು, ಒಳಗಿನ ಒಡೆದ ಕಪ್ ತರುತ್ತೇನೆ. (ರಾಮು ದುಂಡುಕೋಣೆಯಲ್ಲಿ ಹೋಗುತ್ತಾನೆ.)

**ಆಯಾ:** (ಮುಖ ಸೊಟ್ಟು ಮಾಡುತ್ತ) ನೀನು ಹೊರಗೆ ನಿಲ್ಲು; ಉಹ್ಞಂ! ಎಷ್ಟು ಮುಗ್ಧನಾಗುತ್ತಿದ್ದಾನೆ ಈಗೀಗ, ತೊಯ್ದ ಬೆಕ್ಕಿನ ಹಾಗೆ. ಕಣ್ಣಿಗೆ ಕಣ್ಣು ಕೂಡ ಕೂಡಿಸುತ್ತಿಲ್ಲ. (ಹೊರಗೆ ಹೋಗುತ್ತಾಳೆ.) ಮೆಟ್ಟಿಲುಗಳಿಂದ ಇಳಿಯುತ್ತಿರುವ ರೋಮಾ ಚೇತನ ಕಾಣಿಸುತ್ತಾರೆ. ರೋಮಾ ಸಾಧಾರಣವಾದ ಅಂಗಿ ತೊಟ್ಟು ರಾಧಾ ಆಗಿದ್ದಾಳೆ, ಚೇತನ ಕೃಷ್ಣನ ರೂಪ ಧರಿಸಿದ್ದಾನೆ. ಮಕ್ಕಳ ಹಿಂದೆ-ಹಿಂದೆ ಬರುತ್ತಿರುವ ಶೇಖರ ಮತ್ತು ದಮಯಂತಿ ಕಾಣಿಸುತ್ತಾರೆ. ಅಷ್ಟರಲ್ಲಿ ಒಳಗೆ ದುಂಡು ಕೋಣೆಯಿಂದ ಚೀನಿಮಣ್ಣಿನ ಒಡೆದ ಕಪ್‌ಗಳ ತುಂಡುಗಳನ್ನು ಹಿಡಿದುಕೊಂಡು ರಾಮು ಬರುತ್ತಾನೆ.)

**ಶೇಖರ:** (ಪ್ರೀತಿಯಿಂದ) ರಾಮು.....

**ರಾಮು:** ಈ ಒಡೆದ ಕಪ್‌ನ ತುಂಡುಗಳನ್ನು ಹೊರಗೆ ಹಾಕಲೆಂದು ತಂದೆ, ಸಾಹೇಬ.

**ಚೇತನ:** ಎರಡೆರಡು ತುಂಡುಗಳಿವೆ; ಇವನ್ನು ಹೊಂದಿಸಲಿಕ್ಕೆ ಬರುತ್ತದೆ, ನಾನು

ಕೂಡಿಸುತ್ತೇನೆ.

ರಾಮು: ಒಡೆದು ಹೋಗಿವೆ ಚೇತನ ಬೇಟಾ, ಇವನ್ನು ಹೊರಗೆ ಚೆಲ್ಲುತ್ತೇನೆ, ಬಿಡು. ಮನೆಯಲ್ಲಿ ಈ ಒಡೆದ ತುಂಡುಗಳೇಕೆ ಇರಬೇಕು ? (ಮುಂದೆ ಮುಂದೆ ಮಕ್ಕಳು ಮತ್ತು ಹಿಂದೆ ಹಿಂದೆ ದಮಯಂತಿ ಮತ್ತು ಶೇಖರ ದುಂಡುಕೋಣೆಯಲ್ಲಿ ಹೋಗುತ್ತಾರೆ. ರಾಮು ಒಡೆದ ಕಪ್ಪಿನ ತುಂಡುಗಳನ್ನು ಹೊರಗೆ ಒಯ್ಯುತ್ತಿರುತ್ತಾನೆ. ಅಷ್ಟರಲ್ಲಿ ಪರದೆ ಬೀಳುತ್ತದೆ.)

# ಪಾತ್ರ ಪರಿಚಯ

| | |
|---|---|
| ದಮಯಂತಿ : | ವಿದರ್ಭದ ರಾಜಕುಮಾರಿ |
| ಆಶಾ<br>ಕಾಮನಾ }<br>ಕಲ್ಪನಾ | ದಮಯಂತಿಯ ಸಖಿಯರು |
| ರಾಜಾ ನಳ : | ನಿಷಧದ ನರೇಶ |
| ಮಂತ್ರಿ }<br>ಸಚಿವ | ನಿಷಧದ ರಾಜಪುರುಷರು |
| ಊರ್ವಶೀ : | ರಾಜಾ ನಳನ ದೂತೀ |
| ಪುಷ್ಕರ : | ರಾಜಾ ನಳನ ತಮ್ಮ |
| ಭೀಮರಾಜ : | ವಿದರ್ಭದ ದೊರೆ, ದಮಯಂತಿಯ ತಂದೆ |
| ಇಂದ್ರ<br>ಪವನ }<br>ಅಗ್ನಿ<br>ಜಲ | ದೇವತಾಗಣ |
| | ಇತರ ರಾಜಪುರುಷರು,<br>ಸಖಿಯರು ಮುಂತಾದವರು. |

# ದಮಯಂತಿ: ನಾಟಕದ ಬಗೆಗೆ

**-ಸಂತ್‌ಸಿಂಗ್ ಸೇಖೋ**

ಪ್ರಸ್ತುತ ನಾಟಕ ಮಹಾಭಾರತದ ಒಂದು ಪ್ರಸಿದ್ಧ ಕಥೆ ನಳ ದಮಯಂತಿಯನ್ನು ಆಧರಿಸಿದೆ. ಪ್ರಾಚೀನ ಕಾಲದ ಬಹಳಷ್ಟು ಕತೆಗಳ ಹಾಗೆ, ಈ ಕಥೆಯಲ್ಲಿ ನನಗೆ ಪ್ರತೀಕಾತ್ಮಕತೆಯು ದರ್ಶನವಾಗುತ್ತದೆ, ಅದರ ವಿವೇಚನೆಯನ್ನು ನಾನು ಈ ನಾಟಕದಲ್ಲಿ ಮಾಡಲು ಪ್ರಯತ್ನ ಮಾಡಿದ್ದೇನೆ.

ನನ್ನ ವಿಚಾರದಲ್ಲಿ ಈ ಕಥೆಯು ಭಾವ-ಪ್ರಾಕೃತಿಕ ಶಕ್ತಿಗಳ ಸಹಾಯದಿಂದ ಮನುಷ್ಯನು ಈ ಭೂಮಿಯ ಮೇಲೆ ಅಧಿಕಾರ ಪಡೆಯಲು ಮಾಡಿದ ಸಾಧನವಾಗಿದೆ. ನಳ ಮನುಷ್ಯ, ದಮಯಂತಿ ಭೂಮಿ, ದೇವತೆಗಳು ಪ್ರಕೃತಿಯ ಭಿನ್ನ-ಭಿನ್ನ ಶಕ್ತಿಯಾಗಿದ್ದಾರೆ. ದಮಯಂತಿಯ ತಂದೆ ಭೀಮದೇವ ಭಯ ಮತ್ತು ಅಧಿಕಾರದ ಪ್ರತೀಕವಾಗಿರಬೇಕೆಂದು ನನಗೆ ಪ್ರತೀತವಾಗುತ್ತದೆ. ಇದರಿಂದಲೇ ಈ ಭೂಮಿ ಉತ್ಪನ್ನವಾಗಿದೆ. ದಮಯಂತಿಯ ಸಖಿಯರ ಹೆಸರುಗಳನ್ನು ನನ್ನ ಕಲ್ಪನಾಶಕ್ತಿಗನುಸಾರವಾಗಿ ಇರಿಸಿದ್ದೇನೆ.

ಈ ನಾಟಕವನ್ನು ರಂಗಭೂಮಿಯ ಮೇಲೆ ಅಭಿನಯಿಸುವ ಸಂಬಂಧದಲ್ಲಿ ಅದೆಷ್ಟೋ ಪ್ರಕಾರದ ತೊಂದರೆಗಳು ಬರಬಹುದಾಗಿದೆ. ನಾನು ಈ ಮೊದಲು ಬಹಳ ಸಲ ಹೇಳಿದ್ದೇನೆ, ಈ ತೊಂದರೆ ನಾಟಕದಲ್ಲಿ ರಂಗಭೂಮಿಯ ಅನುಕೂಲತೆಗಳ ಅಭಾವದಿಂದಾಗಿ ಅಲ್ಲ. ಇದು ನಮ್ಮ ರಂಗಭೂಮಿಯ ಅಶಕ್ತತೆಯ ಪರಿಣಾಮ. ಏಕೆಂದರೆ ನಮ್ಮ ರಂಗಭೂಮಿಯಲ್ಲಿ ಯಾವುದೇ ಭವ್ಯ ದೃಶ್ಯವನ್ನು ಪ್ರಸ್ತುತಗೊಳಿಸುವ ಸಾಮರ್ಥ್ಯವಿಲ್ಲ. ಆದರೆ ಕೊಂಚ ಬುದ್ಧಿ ಖರ್ಚು ಮಾಡಿದರೂ ಸಾಕು ನಿರ್ದೇಶಕ ಈ ಎಲ್ಲ ತೊಂದರೆಗಳನ್ನೂ ನಿವಾರಿಸಬಲ್ಲ.

ಅದೆಷ್ಟೋ ವಿಮರ್ಶಕರು, ನಾನು ಬಲವಂತವಾಗಿ ನಮ್ಮ ಪುರಾಣಗಳಿಗೆ ಮಾರ್ಕ್ಸವಾದಿ-ಸಮಾಜವಾದಿ ಅರ್ಥ ಬರುವ ಹಾಗೆ ವ್ಯಾಖ್ಯೆ ನೀಡುತ್ತಿದ್ದೇನೆ ಎಂದು ಆಕ್ಷೇಪ ಮಾಡಬಹುದಾಗಿದೆ. ಅಂಥವರಿಗೆ ನನ್ನ ನಮ್ರ ವಿನಂತಿಯೇನೆಂದರೆ ಐತಿಹಾಸಿಕ ಅಥವಾ ಪೌರಾಣಿಕ ಘಟನೆಗಳಿಗೆ ಪ್ರತಿಯೊಂದು ಕಾಲದಲ್ಲಿ ಆಯಾ ಸಮಯದ ಪ್ರತಿನಿಧಿ ವಿಚಾರಧಾರಾನುಸಾರ ತಿಳಿಯುವ ಪ್ರಯತ್ನ ಮಾಡುವುದು ಕೇವಲ ಉಚಿತವಷ್ಟೇ ಅಲ್ಲ ಅವಶ್ಯಕವೂ ಆಗಿದೆ. ಇತಿಹಾಸ ಅಥವಾ ಪುರಾಣಗಳ ಆಯಾ ಸಮಯದ ಪ್ರತಿನಿಧಿ ದೃಷ್ಟಿಕೋನದ ಹೊರಗೆ ಬೇರೆ ಅರ್ಥ ಹೊರಡುವುದೇ ಇಲ್ಲ. ನಮ್ಮ ಹಳೆಯ ಕಾಲದ ಕಥೆಗಳಲ್ಲಿ ಕಂಡುಬರುವ ಚಮತ್ಕಾರದ ಮುಖವನ್ನೇ ತೆಗೆದುಕೊಂಡು ನೋಡಬಹುದಾಗಿದೆ. ಒಂದು ವೇಳೆ ನಾವು ಇದೇ ಚಮತ್ಕಾರವನ್ನು

ಇದ್ದಕ್ಕಿದ್ದಂತೆ ಯಾವುದೋ ಅತಿ ಮಾನವೀಯ ರೂಪದಲ್ಲಿ ವರ್ಣನೆ ಮಾಡುತ್ತ ಹೋದರೆ, ಇವುಗಳ ಬಗ್ಗೆ ವಿಶ್ವಾಸ ಕಡಿಮೆ ಇರುವ ಕಾರಣ ಇದರ ಸಾರ್ಥಕತೆ ಹಾಗೂ ಮಹತ್ವ ಕಡಿಮೆಯಾಗುವುದು ನಿಶ್ಚಯ. ಶಾಶ್ವತವಾದುದು ಯಾವುದೆಂದರೆ ಯಾವುದರೊಳಗಿಂದ ಎಲ್ಲ ಕಾಲಕ್ಕೂ, ಆಯಾ ಕಾಲದ ವಿಚಾರಗಳ ಗತಿಗನುಸಾರವಾಗಿ ಯಾವುದಾದರೂ ಅರ್ಥ ಹೊರಡುತ್ತಿದೆಯೋ ಅದು. ಯಾವ ಕಾಲದಲ್ಲಿ ಯಾವುದೇ ಕಥೆಯಲ್ಲಿ ಅನುಕೂಲವಾದ ಅರ್ಥ ಆ ಕಾಲಕ್ಕೆ ತಕ್ಕಂತೆ ಹೊರಡುವುದು ನಿಂತು ಹೋಗುತ್ತದೆಯೋ, ಆ ಕಥೆಯು ಅರ್ಥ ಸಮಾಪ್ತಗೊಂಡಂತೆ.

ನನ್ನ ವಿನಂತಿಯೇನಂದರೆ ನಮ್ಮ ಐತಿಹಾಸಿಕ ಹಾಗೂ ಪೌರಾಣಿಕ ವಾರಸುದಾರಿಕೆಯನ್ನು ನಾವು ಕಳೆದುಕೊಳ್ಳುವುದು ಬೇಡ ಹಾಗೂ ಅವುಗಳು ನಿರರ್ಥಕವಾಗದಂತೆ ನೋಡಿಕೊಳ್ಳುವ ಅವಶ್ಯಕತೆಯೂ ಇದೆ. ಅದರಲ್ಲಿಯ ಚಿರಂತನ ಮೌಲ್ಯಗಳನ್ನು ಸಂಪಾದಿಸಲು ಸತತ ಪ್ರಯತ್ನಶೀಲರಾಗೋಣ.

# ಅಂಕ: ಒಂದು

**(ರಾಜಭವನದ ಉದ್ಯಾನ. ಒಂದು ಕುಂಜದಲ್ಲಿ ಫಲಗಳಿಂದ ತುಂಬಿದ ವೃಕ್ಷದಡಿಯಲ್ಲಿ ನಾಲ್ಕು ಜನ ಸುಂದರಿಯರಾದ ತರುಣಿಯರು ಕಾಣಿಸಿಕೊಳ್ಳುತ್ತಾರೆ. ಇವರಲ್ಲಿ ಒಬ್ಬಳು ಅವರೆಲ್ಲರಿಗಿಂತ ಹೆಚ್ಚು ಚೆಲುವೆ ಹಾಗೂ ತೇಜಸ್ವಿನಿಯಾಗಿದ್ದಾಳೆ. ಅವಳೇ ಕುಮಾರಿ ದಮಯಂತಿ. ಉಳಿದವರು-ಅವಳ ಸಖಿಯರು, ಆಶಾ, ಕಾಮನಾ ಹಾಗೂ ಕಲ್ಪನಾ. ಕಲ್ಪನಾಳ ಕೈಯಲ್ಲಿ ಹಾರಾಡುತ್ತಿರುವ ಒಂದು ಹಂಸವಿದೆ ಹಾಗೂ ದಮಯಂತಿಯ ಕೈಯಲ್ಲಿ ಒಂದು ಪತ್ರ. ಅದು ಹಂಸದ ಕಾಲಿಗೆ ಕಟ್ಟಲಾಗಿತ್ತೆಂದು ತೋರುತ್ತದೆ. ಅದನ್ನೇ ಈಗ ದಮಯಂತಿ ಓದಿದ್ದಾಳೆ.)**

**ದಮಯಂತಿ:** ಕಲ್ಪನಾ, ಈ ಪತ್ರ ಬರೆದಿರುವ ಈ ರಾಜಾ ನಳ ಯಾರು ?

**ಕಲ್ಪನಾ:** ಮುಗ್ಧಳಾದ ರಾಜಕುಮಾರಿಯೇ, ತಾವು ಈ ವರೆಗೂ ರಾಜಾ ನಳನ ಹೆಸರನ್ನೂ ಕೇಳಿಲ್ಲವೇ ? ಅವನಂತೂ ಇಡೀ ಆರ್ಯಾವರ್ತದಲ್ಲಿಯೇ ಓರ್ವ ಪ್ರಸಿದ್ಧ ರಾಜನಾಗಿದ್ದಾನೆ. ತಾವು ಬೇಕೆಂತಲೇ ಅವನ ಬಗ್ಗೆ ಏನೂ ಗೊತ್ತಿಲ್ಲದ ಹಾಗೆ ನಟಿಸುತ್ತಿಲ್ಲ ತಾನೇ ?

**ದಮಯಂತಿ:** ಕಲ್ಪನಾ ! ನೀನು ಯಾವಾಗಲೂ ನನ್ನ ಬಗ್ಗೆ ಇಂಥ ಸಂಶಯವನ್ನೇ ವ್ಯಕ್ತಪಡಿಸುತ್ತಿರುವೆ.

**ಕಾಮನಾ:** ಹಾಂ ಕುಮಾರಿ ! ತಾವು ಏನೇ ಹೇಳಿ, ಕಲ್ಪನಾಳಿಗೆ ಅದರಲ್ಲಿ ಏನಾದರೂ ವ್ಯಂಗ್ಯ ಅಥವಾ ಕಟಾಕ್ಷ ಪ್ರತೀತವಾಗುತ್ತದೆ.

**ದಮಯಂತಿ:** ನನ್ನ ಅಂತರಂಗದ ಮಾತನ್ನೇ ಆಡಿದೆ, ಕಾಮನಾ, ಕಲ್ಪನಾ ನನ್ನನ್ನು ಯಾವಾಗಲೂ ಕಾಡುತ್ತಲೇ ಇರುತ್ತಾಳೆ, ರೇಗಿಸುತ್ತಲೇ ಇರುತ್ತಾಳೆ.

**ಆಶಾ:** ಮತ್ತೆ ನಾನು, ರಾಜಕುಮಾರಿ ?

**ದಮಯಂತಿ:** ನೀನು, ಆಶಾ ! ತುಂಬ ಒಳ್ಳೆಯವಳು. ನೀನು ನನ್ನ ಮುಗ್ಧ ಸಖಿ. ನೀನು ಕಾಮನಾಳಿಗಿಂತ ನನಗೆ ಹೆಚ್ಚು ಪ್ರಿಯಳಾಗಿರುವೆ, ಮತ್ತೆ ಕಾಮನಾ, ನನಗೆ ನಿನಗಿಂತ ಹೆಚ್ಚು ಹತ್ತಿರದವಳೆಂದು ಅನ್ನಿಸುತ್ತದೆ.

**ಕಾಮನಾ:** ಓ ! ಕುಮಾರಿ, ತಾವು ನಮ್ಮಿಬ್ಬರ ಮರ್ಯಾದೆ ಕಾಪಾಡಿರಿ !

**ಕಲ್ಪನಾ:** ಹಾಂ ! ಅಂತೆಯೇ, ನಾನು, ಕುಮಾರಿ ತೋರುತ್ತಿರುವ ಅಜ್ಞತೆಯನ್ನು ಒಪ್ಪಲು ಸಿದ್ಧಳಿಲ್ಲ. ಹಾಗೆಂದೇ ನಾನು ಕುಮಾರಿಗೆ, ನಿಮ್ಮಿಬ್ಬರಿಗಿಂತ ಕಡಿಮೆ ಪ್ರಿಯಳಾಗಿದ್ದೇನೆ.

**ದಮಯಂತಿ:** ಅರೆ, ನೀನು ಕೂಡ ನನಗೆ ಅತಿ ಪ್ರಿಯಳಾದವಳೇ, ಆದರೆ ನಿನ್ನ ಬಗ್ಗೆ, ನನಗೆ ಯಾವುದೋ ಗೊತ್ತಿಲ್ಲದ ಭಯ ಯಾವಾಗಲೂ ಕಾಡುತ್ತಿರುತ್ತದೆ. ನನ್ನನ್ನು ಎಲ್ಲಿಯಾದರೂ ನೀನು ಸಿಕ್ಕಿಸಿಯಾ, ಎಂದು ಹೆದರುತ್ತಿರುತ್ತೇನೆ.

**ಕಲ್ಪನಾ:** ಹಾಂ! ಅದನ್ನೇ ನಾನು ಹೇಳುವುದು, ರಾಜಕುಮಾರಿ! ನನ್ನ ಮೇಲೆ ತಮಗೆ ವಿಶ್ವಾಸವಿಲ್ಲ, ಎಲ್ಲಿ ವಿಶ್ವಾಸವಿಲ್ಲವೋ ಅಲ್ಲಿ ಪ್ರೇಮ ಎಲ್ಲಿರುತ್ತದೆ ?

**ದಮಯಂತಿ:** ಕಲ್ಪನಾ! ಒಂದು ಪ್ರೇಮ ಹೀಗೂ ಇರುತ್ತದೆ, ಮನಸ್ಸಿನಲ್ಲಿ ಒಂದು ರೀತಿಯ ಹೆದರಿಕೆ ಇದ್ದೇ ಇರುತ್ತದೆ, ಆದರೆ ಅದರ ಬಗ್ಗೆ ವಿಶ್ವಾಸ ಮಾಡಲಾಗುವುದಿಲ್ಲ.

**ಕಲ್ಪನಾ:** ತಮಗೆ ಮನದ ವಿಚಲತೆಯ ಅನುಭವ, ಅದು ಹೇಗಾಯ್ತು, ರಾಜಕುಮಾರಿ ?

**ದಮಯಂತಿ:** ನೋಡಿದಿಯಾ, ಮತ್ತೆ ಅದೇ ವಕ್ರಪೂರ್ಣ ಮಾತು. ಸಖಿ! ನನಗೆ ಇದರ ಅನುಭವ ಬಹಳ ಇಲ್ಲ. ಏನೆಲ್ಲ ನಾನು ಹೇಳಿದೆನೋ ಅದೆಲ್ಲ ಓದಿದ, ಕೇಳಿದುದರ ಆಧಾರದ ಮೇಲೆ. ಹಾಂ, ಕೊಂಚ ಅನುಭವ ನಿನ್ನೊಂದಿಗೆ ಮಾತನಾಡುವಾಗ ಆದುದು.

**ಕಲ್ಪನಾ:** ಹಾಗಾದರೆ, ಇಂಥ ಪ್ರೇಮಕ್ಕೆ ನಾನು ಈಗ ಏನು ಹೇಳಲಿ ?

**ದಮಯಂತಿ:** ನಾನು ಹೇಳುತ್ತೇನೆ, ಇದನ್ನು ಸತ್ಯವೆಂದು ತಿಳಿ ಕಲ್ಪನಾ. ಈ ಪ್ರೇಮ ನಿಜಕ್ಕೂ ಒಂದು ವಿಚಿತ್ರ ಪ್ರಕಾರದ ಘಟನೆಯಾಗಿದೆ. ಕಾಮನಾ ಹಾಗೂ ಆಶಾರ ಬಗ್ಗೆ ನನ್ನಲ್ಲಿರುವ ಪ್ರೇಮಕ್ಕಿಂತ, ನಿನ್ನ ಬಗ್ಗೆ ನನ್ನಲ್ಲಿರುವ ಪ್ರೇಮ ಯಾವುದೇ ರೀತಿಯಲ್ಲೂ ಕಡಿಮೆಯಾಗಿಲ್ಲ.

**ಕಲ್ಪನಾ:** ತುಂಬ-ತುಂಬ ಧನ್ಯವಾದಗಳು, ಕುಮಾರಿ.

**ದಮಯಂತಿ:** (ನಕ್ಕು) ಹಾಗಾದರೆ ಹೇಳು, ಈ ರಾಜಾ ನಳ ಯಾರು ?

**ಕಲ್ಪನಾ:** ಅವನು ನಿಷಧದ ಬಹುದೊಡ್ಡ ಪ್ರತಾಪಿ ಹಾಗೂ ನವಯುವಕ ರಾಜನಾಗಿದ್ದಾನೆ, ರಾಜಕುಮಾರಿ. ಅವನ ಅರಮನೆಯಲ್ಲಿ ನನ್ನ ಚಿಕ್ಕಮ್ಮ ಹಾಗೂ ಅವಳ ಎಲ್ಲ ಪರಿವಾರ ಜೀವಿಸುತ್ತಿದೆ. ಅವರಿಂದ ಈ ದೊರೆಯ ಬಗ್ಗೆ ನಾನು ಕೇಳಿರುವ ಹೆಗ್ಗಳಿಕೆಯನ್ನು ಒಂದು ವೇಳೆ ತಮಗೆ ನಾನು ಹೇಳಿದರೆ, ತಾವು ನಂಬಲಿಕ್ಕಿಲ್ಲ.

**ಕಾಮನಾ:** ಕುಮಾರಿ! ಈಗ ಕಲ್ಪನಾಳಿಗೆ ಏನೂ ಅನ್ನಬೇಡಿ. ಅವಳು ರಾಜಾ ನಳನ ಹೆಗ್ಗಳಿಕೆಯನ್ನು ಕೇಳಿಸಲಿ.

**ಆಶಾ:** ಕೇಳಿಸಲಿ, ಆದರೆ ನಮ್ಮ ರಾಜಕುಮಾರಿಯ ಯೋಗ್ಯತೆಗೆ ತಕ್ಕುದಾಗಿದ್ದರೆ, ಮಾತ್ರ.

**ದಮಯಂತಿ:** (ಆಶಾಳ ಹೆಗಲ ಮೇಲೆ ಬೀಸಣಿಕೆಯಿಂದ ಹೊಡೆದು) ಹೋಗೆ, ಆಶಾ. ನೀನಂತೂ ಯಾವಾಗಲೂ ಹೀಗೆಯೇ ಮಾತಾಡುತ್ತಿರುವೆ.

**ಕಲ್ಪನಾ:** ಆಡಲಿ ಬಿಡಿ, ಕುಮಾರಿ! ತಾವಂತೂ ಈ ಭೂಮಿಯ ಮೇಲೆ

ಸ್ತ್ರೀರೂಪದಲ್ಲಿ ಅದ್ವಿತೀಯರಾಗಿದ್ದೀರಿ. ಆದರೆ ಪುರುಷರಲ್ಲಿ ರಾಜಾ ನಳನನ್ನು ಸರಿಗಟ್ಟುವವರು, ಬಹಳ ವಿರಳವೆಂದೇ ಹೇಳಬೇಕು.

**ಆಶಾ:** ಹಾಗಾದರೆ ಅವನಿಗಿಂತ ಒಳ್ಳೆಯವನನ್ನು ನಮ್ಮ ರಾಜಕುಮಾರಿಗೆ ತರುವುದಾದರೆ, ದೇವಲೋಕದಲ್ಲಿ ಯಾರನ್ನಾದರೂ ಹುಡುಕಬೇಕಾದೀತು.

**ದಮಯಂತಿ:** ಆಶಾ! ದೇವಲೋಕದ ಮಾತನ್ನಾಡಬೇಡ. ನನಗೆ ದೇವಲೋಕದವರ ಬಗೆಗೆ ಶ್ರದ್ಧೆಗಿಂತ ಭಯವೇ ಹೆಚ್ಚಿದೆ.

**ಕಲ್ಪನಾ:** ಹಾಂ! ಅದಕ್ಕಾಗಿಯೇ ರಾಜಕುಮಾರಿ, ಏಕೆಂದರೆ ತಾವು ತಮ್ಮನ್ನು ದೇವಿಯರಿಗಿಂತ ಹೆಚ್ಚೆಂದು ಭಾವಿಸಿರುವಿರಿ.

**ಕಾಮನಾ:** ಅದು ಸರಿಯಾಗಿಯೇ ಇದೆ. ನಮ್ಮ ರಾಜಕುಮಾರಿಯ ಹೋಲಿಕೆ ಯಾವುದೇ ದೇವಿಯೊಂದಿಗೆ ಸಾಧ್ಯವೇ?

**ದಮಯಂತಿ:** ಕಾಮನಾ, ಇಂಥ ಮಾತನ್ನಾಡಬೇಡ. ನೋಡಿಲ್ಲಿ, ದೇವಿಯರ ಬಗ್ಗೆ ನೀನಾಡಿದ ಅಪಮಾನಕಾರಕ ಮಾತುಗಳಿಂದಾಗಿ ನನಗೆ ಕಂಪನ ಉಂಟಾಗಿದೆ.

**ಕಾಮನಾ:** ಈ ಕಂಪನವಂತೂ ಕುಮಾರಿ, ಸರೋವರದಲ್ಲಿ ಸ್ನಾನಮಾಡಿ ಹೀಗೆ ಗಾಳಿಯಲ್ಲಿ ಕುಳಿತಿರುವುದರಿಂದಾಗಿ ಉಂಟಾಗಿದೆ, ಅಷ್ಟೆ.

**ಕಲ್ಪನಾ:** ಕುಮಾರಿ, ಇದು ವಾಯುದೇವತೆಯ ಆಲಿಂಗನದ ಸ್ವಾದವಾಗಿದೆ.

**ದಮಯಂತಿ:** ಈ ಕಂಪನವನ್ನು ನಾನಿನ್ನು ಸಹಿಸಲಾರೆ. ಏನು ನಿಮಗೆ ಈ ರೀತಿಯಾಗುತ್ತಿಲ್ಲವೆ ಕಲ್ಪನಾ....ಆಶಾ?

**ಕಲ್ಪನಾ:** ನಮ್ಮ ಸೀರೆಗಳು ಕೊಂಚ ದಪ್ಪವಾಗಿವೆ, ಕುಮಾರಿ!

**ಆಶಾ:** ನಿಜ ಹೇಳಬೇಕೆಂದರೆ, ಕುಮಾರಿ, ಕಂಪನ ನಮಗೂ ಆಗುತ್ತಿದೆ.

**ದಮಯಂತಿ:** ಹಾಗಾದರೆ!

**ಕಲ್ಪನಾ:** ಇದಕ್ಕೆ ಉಪಾಯವೆಂದರೆ, ಮತ್ತೆ ಸರೋವರದಲ್ಲಿ ಮುಳುಗುವುದೇ ಆಗಿದೆ. (ನಗುತ್ತ) ಈಗ ತಮ್ಮ ರೂಪವನ್ನು ನೋಡುವ ಸರತಿ ಜಲದೇವತೆಯದಾಗಿದೆ.

**ದಮಯಂತಿ:** (ಅವಳ ಹೆಗಲಿಗೆ ಬೀಸಣಿಕೆಯಿಂದ ಹೊಡೆದು) ನಿನ್ನ ರೂಪವನ್ನಲ್ಲ, ಅಲ್ಲವೆ? ಸರಿ, ಮತ್ತೆ ನಡೆಯುತ್ತೇವೆ ಸರೋವರದಲ್ಲಿ. ಬಾ, ಕಾಮನಾ ಇನ್ನೆರಡು ಮುಳುಗು ಹಾಕೋಣ, ಬಾ. ಆಶಾ, ನೀನು ಈ ಪತ್ರ ಹಿಡಿದುಕೊ.

(ಕಾಮನಾಳ ಕೈ ಹಿಡಿದು ಅವಳನ್ನು ಸರೋವರದೊಳಕ್ಕೆ ಒಯ್ಯುತ್ತಾಳೆ.)

**ಕಲ್ಪನಾ:** ಆಶಾ, ನಿಜವೇನೆಂದರೆ ರಾಜಕುಮಾರಿ, ರಾಜಾ ನಳನನ್ನು ನೋಡಬೇಕೆಂದು ಬಯಸುತ್ತಿದ್ದಾಳೆ.

**ಆಶಾ:** ಸರಿಯೇ. ಆದರೆ ರಾಜಾ ನಳನ ಬಗ್ಗೆ ಏನೂ ಅರಿಯದೇ ಇರುವುದೂ ನಿಜವಾಗಿರಬಹುದು.

**ಕಲ್ಪನಾ:** ನಿಜ, ಏಕೆಂದರೆ ನಮ್ಮಿಂದಲ್ಲದೆ ಇನ್ನಾರಿಂದ ಕೇಳಲು-ಅರಿಯಲು

ಸಾಧ್ಯವಿದೆ, ರಾಜಕುಮಾರಿಗೆ.

**ಆಶಾ:** ಕಾಮನಾ ಕದಾಚಿತ್ ಕೊಂಚ ಹೇಳಿದ್ದರೂ ಹೇಳಿರಬಹುದು.

**ಕಲ್ಪನಾ:** ಸ್ವತಃ ಕಾಮನಾಳಿಗೆ ಬಹಳಷ್ಟು ಗೊತ್ತಿಲ್ಲ. ರಾಜಾ ನಳನ ಬಗ್ಗೆ ನಾನು ಬಹಳಷ್ಟು ಬಲ್ಲೆ. ಆದ್ದರಿಂದ ನನಗನಿಸುವುದೆಂದರೆ, ರಾಜಕುಮಾರಿಗೆ ಅವನೇ ತಕ್ಕ ಹಾಗೂ ಅನುರೂಪನಾದ ವರ. ರಾಜಕುಮಾರಿಗೆ ಅವನ ಬಗ್ಗೆ ತಿಳಿಸುವುದು ಉಚಿತವಾಗಿದೆ.

**ಆಶಾ:** ಹಾಗಾದರೆ ಹೇಳಲ್ಲ. ನಿನ್ನನ್ಯಾರು ತಡೆದಿದ್ದಾರೆ ?

**ಕಲ್ಪನಾ:** ಆದರೂ ನಿನ್ನ ಸಮ್ಮತಿ ಪಡೆಯುವುದು ಅವಶ್ಯವಾಗಿತ್ತು, ಆಶಾ.

**ಆಶಾ:** ನನ್ನ ಸಲಹೆಯೇನೆಂದರೆ, ನೀನು ಕೇವಲ ರಾಜಾ ನಳನ ಬಗ್ಗೆ ರಾಜ ಕುಮಾರಿಗೆ ಹೇಳುವುದೇ ಅಲ್ಲ, ಇವಳ ಉತ್ಸುಕತೆಯನ್ನೂ ಹೆಚ್ಚಿಸುವುದಾಗಿದೆ. ಈಗಾಗಲೇ ಇವಳು ಹದಿನೆಂಟು ವರ್ಷದವಳಾಗಲಿದ್ದಾಳೆ. ಈಗ ಇವಳು ರಾಜಾ ನಳ ಅಥವಾ ಇನ್ನಾವುದಾದರೂ ರಾಜಕುಮಾರನ ಬಗ್ಗೆ ಉತ್ಸುಕಳಾಗಬೇಕು.

**ಕಲ್ಪನಾ:** ಒಳ್ಳೇದು, ನನ್ನ ಅಭಿಪ್ರಾಯಕ್ಕೆ ನಿನ್ನ ಸಮರ್ಥನೆ ಬೇಕಾಗಿತ್ತು ನನಗೆ. (ಕೂಗಿ) ರಾಜಕುಮಾರಿ! ಬನ್ನಿ, ಬನ್ನಿ ಈಗಂತೂ ಜಲದೇವತೆಯೂ ಸಂತುಷ್ಟವಾಗಿರಬೇಕು. ನನಗಂತೂ ಈ ಹಂಸವನ್ನು ಹಿಡಿದು ಹಿಡಿದು ಜೀವ ರೋಸಿದೆ.

**ದಮಯಂತಿ:** (ಸರೋವರದಿಂದ ಹೊರಗೆ ಬರುತ್ತ) ನನಗಾಗಿ ಅದೇನು ಷಡ್ಯಂತ್ರ ರಚಿಸುತ್ತಿರುವೆ, ನಾನಿಲ್ಲದಾಗ ?

**ಕಲ್ಪನಾ:** ಇದೆ, ಇನ್ನೇನು, ರಾಜಾ ನಳನೊಂದಿಗೆ ರಾಜಕುಮಾರಿಯ ಪರಿಚಯ ಮಾಡಿಸಬೇಕೆಂಬುದು.

**ದಮಯಂತಿ:** (ಕೊಂಚ ಅಚ್ಚರಿಯಿಂದ) ಪರಿಚಯ ? ಏನು, ರಾಜಾ ನಳ ಇಲ್ಲಿಯೇ ಎಲ್ಲಿಯಾದರೂ ಬಂದಿದ್ದಾರೇನು ?

**ಕಲ್ಪನಾ:** ಇಷ್ಟೊಂದು ಆತುರಳಾಗಬೇಡ ರಾಜಕುಮಾರಿ! ಕರೆದಾಗ ಅವರು ಬಂದೂ ಬರಬಹುದು.

**ದಮಯಂತಿ:** ಅವರನ್ನು ಕರೆಯುವವರು ಯಾರು ?

**ಕಲ್ಪನಾ:** ನಾವು ಇನ್ನಾರು ?

**ಆಶಾ:** ನಾವು ಕರೆಯುತ್ತೇವೆ, ಇನ್ನಾರು ?

**ಕಾಮನಾ:** ಹಾಂ! ಹಾಂ! ಈಗ ಯಾವುದಾದರೂ ರಾಜಕುಮಾರನನ್ನು ಕರೆಯುವುದೇ ಉಚಿತ. ನಡಿ, ರಾಜಾ ನಳನೇ ಇರಲಿ.

**ದಮಯಂತಿ:** ಕಾಮನಾ! ನೀನೂ ಇವರೊಂದಿಗೇ ಸೇರಿದಿಯಾ ? ನಾನಂತೂ ನಿನ್ನನ್ನು ಆಶಾಳಿಗಿಂತ ಹೆಚ್ಚು ಮುಗ್ಧಳೆಂದು ತಿಳಿದಿದ್ದೆ.

**ಕಲ್ಪನಾ:** ನಾವೆಲ್ಲ ಸರತಿಯಂತೆ ಮುಗ್ಧ ಹಾಗೂ ಸರತಿಯಂತೆ ಚತುರೆಯರಾಗು ತ್ತೇವೆ, ರಾಜಕುಮಾರಿ. ಕೇವಲ ತಾವು ಮಾತ್ರ, ಸದಾಕಾಲ ಮುಗ್ಧರಾಗಿರುತ್ತೀರಿ !

**ದಮಯಂತಿ:** ನೋಡಿದಿಯಾ, ಮತ್ತೆ ಅದೇ ವ್ಯಂಗ್ಯದ ಮಾತು. ಕಲ್ಪನಾ, ನಿಜವಾಗಿಯೂ ನಿನ್ನೊಂದಿಗೆ ನನ್ನ ಜಗಳವಾಗುತ್ತದೆ.

**ಕಲ್ಪನಾ:** ತಾವು ನನ್ನನ್ನು ಈಗ ಬಯ್ದರೂ ಚಿಂತೆಯಿಲ್ಲ, ಆದರೆ ನಳನ ಬಗ್ಗೆ ನಾನು ಕೇಳಿರುವುದನ್ನೆಲ್ಲ ನನಗೆ ಹೇಳಗೊಡಿ.

**ದಮಯಂತಿ:** ಕೇಳಿಸುವುದೇ ಇಲ್ಲವಲ್ಲ, ಬರೀ ಮಾತನ್ನು ದುಂಡುಗಟ್ಟುತ್ತ ಹೋಗುತ್ತಿರುವೆ.

**ಕಲ್ಪನಾ:** ತಮ್ಮಲ್ಲಿ ಉತ್ಸುಕತೆಯನ್ನು ಜಾಗ್ರತಗೊಳಿಸಿಯೇ ಏನಾದರೂ ಹೇಳುವುದು ಉಚಿತವಾಗುತ್ತದೆ, ತಾನೇ. ಈಗ ಆ ಕೆಲಸ ಆಗಿದೆ.

**ದಮಯಂತಿ:** ಹಾಗಾದರೆ, ಮತ್ತೆ.

**ಕಲ್ಪನಾ:** ಕೇಳಿ, ಹಾಗಾದರೆ. ಈ ಮಹಾರಾಜಾಧಿರಾಜ ನಿಷಧ ದೇಶದ ರಾಜನಾಗಿದ್ದಾನೆ.

**ದಮಯಂತಿ:** ಇದನ್ನು ನೀನು ಮೊದಲೇ ಹೇಳಿರುವೆಯಲ್ಲ!

**ಕಲ್ಪನಾ:** (ನಕ್ಕು) ಸರಿ, ಇದನ್ನು ತಾವು ನೆನಪಿನಲ್ಲಿಟ್ಟಿದ್ದೀರಿ. ಇನ್ನು ಮುಂದೆ ನಾನು ಹೇಳುವುದನ್ನೆಲ್ಲ ತಾವು ನೆನಪಿನಲ್ಲಿಟ್ಟುಕೊಳ್ಳುತ್ತೀರಿ ಎಂದು ಆಶಿಸುತ್ತೇನೆ.

**ಕಾಮನಾ:** ಏ, ಇನ್ನೂ ಬರೀ ಮಾತು; ಸಾಕು! ನಿನಗೆ ಏನೆಲ್ಲ ಗೊತ್ತಿದೆಯೋ ರಾಜ ನಳನ ಬಗ್ಗೆ, ಅದನ್ನೆಲ್ಲ ಹೇಳು.

**ಕಲ್ಪನಾ:** ಆತ, ತುಂಬ ಎತ್ತರ-ಉದ್ದ ಹಾಗೂ ಕೆಂಪು ಬಣ್ಣದ ದಷ್ಟ-ಪುಷ್ಟ, ಇಪ್ಪತ್ತು ವರ್ಷದ ನವಯುವಕ.

**ಆಶಾ:** ಹಾಂ! ಹಾಂ!, ಎಷ್ಟಾದರೂ ರಾಜ-ಪುತ್ರನಲ್ಲವೇ.

**ಕಲ್ಪನಾ:** ಬ್ರಹ್ಮವಿದ್ಯೆಯಲ್ಲಿ ಪ್ರವೀಣ, ಶಸ್ತ್ರ ವಿದ್ಯೆಯಲ್ಲಿ ನಿಪುಣ, ಧರ್ಮಶಾಸ್ತ್ರ ಹಾಗೂ ರಾಜ-ತಂತ್ರ ಎರಡರ ವಿಶೇಷಜ್ಞ. ಆತ ಎಷ್ಟು ಆರೋಗ್ಯವಂತನಾಗಿದ್ದಾನೋ ಅಷ್ಟೇ ಪ್ರಮಾಣದಲ್ಲಿ ಮನ ಹಾಗೂ ಬುದ್ಧಿಯಲ್ಲೂ ಉಜ್ವಲ.

**ದಮಯಂತಿ:** ತಗೋ, ಭಾರೀ ಸ್ತುತಿ ಮಾಡಿದಳು! ಇದೇನು ಮಹಾ, ಓರ್ವ ಸಾಧಾರಣ ರಾಜಕುಮಾರನಲ್ಲೂ ಈ ಎಲ್ಲ ಗುಣಗಳು ಇರುತ್ತವೆ.

**ಕಾಮನಾ:** ಇವೆಲ್ಲವುಗಳಲ್ಲಿ ವಿಚಿತ್ರತೆ ಏನಿದೆ, ಕಲ್ಪನಾ ?

**ಕಲ್ಪನಾ:** ಮೊದ ಮೊದಲು ಸಾಧಾರಣ ಸೌಂದರ್ಯದ ವರ್ಣನೆ ಆವಶ್ಯಕವಾಗಿತ್ತು, ಕಾಮನಾ. ಈಗ ವಿಚಿತ್ರತೆಯ ಕಡೆಗೆ ಬರುತ್ತೇನೆ.

**ಆಶಾ:** ಹಾಂ! ವಿಚಿತ್ರತೆ ಇಲ್ಲದೆ ನಮ್ಮ ರಾಜಕುಮಾರಿಯ ಮೇಲೆ ರಾಜಾ ನಳನದಾಗಲಿ ಅಥವಾ ಇನ್ನಾವುದೇ ರಾಜಕುಮಾರರದೇ ಆಗಲಿ ಪ್ರಭಾವ ಬೀಳಲು ಸಾಧ್ಯವಿಲ್ಲ.

**ಕಲ್ಪನಾ:** ವಿಚಿತ್ರ ಗುಣಗಳೂ ಬೇಕಾದಷ್ಟಿವೆ ರಾಜಾನಳನಲ್ಲಿ. ಮಹಾಶಕ್ತಿಶಾಲಿ ಧನುರ್ಧಾರಿಯಾಗಿದ್ದಾನೆ. ಪ್ರತಿಯೋಗಿತಾದಲ್ಲಿ ಅದೆಷ್ಟೋ ಸಲ ವಾಯುದೇವನನ್ನು ಸೋಲಿಸಿದ್ದಾನೆ.

**ದಮಯಂತಿ:** ಏನು, ವಾಯುದೇವನನ್ನು ಪರಾಜಿತಗೊಳಿಸುವಂಥ ಧನುರ್ಧಾರಿ ಯಾಗಿದ್ದಾನೆಯೇ ?

**ಕಲ್ಪನಾ:** ಹಾಂ ! ರಾಜಕುಮಾರಿ ! ಧನುರ್ವಿದ್ಯೆಯಲ್ಲಿ ವಾಯುದೇವನು ಕೂಡ ನಳನಿಗೆ ಭಯಪಡುತ್ತಾನೆ.

**ಆಶಾ:** ಅಪಾರ ಮಹಿಮಾಶಾಲಿಯಾಗಿದ್ದಾನೆ ರಾಜಾ ನಳ. ಆದರೆ ನಮ್ಮ ರಾಜಕುಮಾರಿಯ ಮನಸ್ಸಿಗೆ ಒಪ್ಪಿಗೆಯಾಗಬೇಕಾದರೆ ಇದಕ್ಕಿಂತಲೂ ಹೆಚ್ಚಿನ ವಿಚಿತ್ರತೆ ಬೇಕು.

**ಕಲ್ಪನಾ:** ನದಿ-ಸರೋವರಗಳಲ್ಲಿ ಆತನ ಈಜುಗಾರಿಕೆ ಅತಿ ಅದ್ಭುತ. ಒಂದು ಕ್ಷಣದಲ್ಲಿ ನದಿಯಾಚೆ ಇರುತ್ತಾನೆ. ಬಾಹು-ಬಲ ಎಷ್ಟೆಂದರೆ, ನದಿಯ ಪ್ರವಾಹವನ್ನೇ ತಡೆಯಬಲ್ಲುದು, ಅಷ್ಟೇ ಅಲ್ಲ ನದಿಯ ಪ್ರವಾಹವನ್ನು ಸಾಗರ ಮುಖದಿಂದ ತಿರುಗಿಸಿ ಹೊಲ-ಉದ್ಯಾನಗಳಿಗೆ ನೀರುಣಿಸುತ್ತದೆ.

**ಆಶಾ:** ಅಂದ ಮೇಲೆ, ಅವನ ರಾಜ್ಯದಲ್ಲಿ ವನಸ್ಪತಿ, ಹೂ-ಹಣ್ಣು ಹಾಗೂ ಅನ್ನಕ್ಕೆ ಯಾವ ಕೊರತೆಯೂ ಇರಲಿಕ್ಕಿಲ್ಲ.

**ಕಲ್ಪನಾ:** ಹೌದು ! ನಿಷಧ ದೇಶದ ಪ್ರಜೆಗಳು ಅತ್ಯಂತ ಸುಖಿಗಳಾಗಿದ್ದಾರೆ. ಅವರಿಗೆ ಅನ್ನ, ಜಲ, ವಸ್ತ್ರ ಮತ್ತು ಆವಾಸದ ಯಾವ ಕೊರತೆಯೂ ಇಲ್ಲ.

**ದಮಯಂತಿ:** ಒಳ್ಳೇದು ! ನಿಷಧ ದೇಶದ ಪ್ರಜೆಗಳು ಸುಖವಾಗಿದ್ದಾರೆ, ಎಂದೆ. ಇದರಲ್ಲಿ ಆಶ್ಚರ್ಯವೇನಿದೆ ? ಇದನ್ನೆಲ್ಲ ಮಾಡಬೇಕಾದುದು ರಾಜನ ಧರ್ಮವಾಗಿದೆ.

**ಕಲ್ಪನಾ:** ನಮ್ಮ ವಿದರ್ಭದಲ್ಲಿ....

**ದಮಯಂತಿ:** (ಒಮ್ಮೆಲೇ ಮಾತು ಬದಲಿಸಿ) ನಮ್ಮ ವಿದರ್ಭದಲ್ಲಿ ನದಿಗಳ ಪ್ರವಾಹ ತಿರುಗಿಸಿ, ಹೊಲಗಳಿಗೆ ನೀರುಣಿಸುವ ಅವಶ್ಯಕತೆಯೇ ಇಲ್ಲ. ನಮ್ಮಲ್ಲಿ ಸಾಕಷ್ಟು ಮಳೆಯಾಗುತ್ತದೆ.

**ಆಶಾ:** ಹಾಂ ! ಇಂದ್ರದೇವ ನಮ್ಮ ಬಗ್ಗೆ ವಿಶೇಷ ಕೃಪಾ-ಭಾವ ಇರಿಸುತ್ತಾನೆ.

**ಕಲ್ಪನಾ:** ಆದರೆ, ಇಂದ್ರದೇವನ ಕೃಪಾ ಭಾವದ ಮೇಲೆಯೇ ನಿರ್ಭರವಾಗಿರುವುದು ಪೂರ್ಣ ಬುದ್ಧಿ ಮತ್ತೆ ಅಲ್ಲ, ಆಶಾ. ಇಂದ್ರದೇವನದೇನು ಭರವಸೆ, ಕ್ರೋಧ ಬಂದು ಯಾವಾಗ ಆತ ಜಲ-ಥಲ ಏಕಾಕಾರ ಮಾಡುವನೋ ಯಾರು ಬಲ್ಲರು ? ಯಾವಾಗ ಪ್ರಜೆಗಳು ಸತ್ಯಾನಾಶವಾಗುವರೋ ಯಾರು ಬಲ್ಲರು ? ಮತ್ತೆ ಆ ಅಹಲ್ಯಾಳ ವಿಷಯ....

**ದಮಯಂತಿ:** ಏನು ? ಅಹಲ್ಯೆಯ ವಿಷಯ ? ನನ್ನ ಬಗ್ಗೆ ಇಂಥ ದುಃಸ್ಸಾಹಸ ಮಾಡಿದರೆ ಅವನ ಕಪಾಳಕ್ಕೆ ಹೊಡೆದು ಮುಖವನ್ನೇ ಬೇರೆಡೆ ತಿರುಗಿಸುತ್ತೇನೆ.

**ಕಲ್ಪನಾ:** ಇದನ್ನು ಕಾಲವೇ ಹೇಳಬಲ್ಲುದು. ಆದರೆ ನಾವೇಕೆ ದೇವತೆಗೆ ಆಹ್ವಾನ ಕೊಡಬೇಕು ?

**ಕಾಮನಾ:** ಆಹ್ವಾನ ಹೇಗೆ ಇದು ? ನೀನೇ ಅಪಶ್ರೀಯ ವಿಷಯ ಹೇಳಿ ರಾಜಕುಮಾರಿಯನ್ನು ಉತ್ತೇಜಿತಗೊಳಿಸಿದೆ.

**ದಮಯಂತಿ:** (ಕೊಂಚ ಹೆದರಿ) ಸರಿ; ಈ ಮಾತುಗಳನ್ನು ಇಲ್ಲಿಗೆ ನಿಲ್ಲಿಸಿ. ಮುಂದೆ ಹೇಳು, ಕಲ್ಪನಾ.

**ಕಲ್ಪನಾ:** ಮಹಾಕಲಾವಿದ. ಅಗ್ನಿರಥವನ್ನು ಕೂಡ ಸಿದ್ಧಗೊಳಿಸುವ ಸಂಕಲ್ಪ ಹೊಂದಿದ್ದಾನೆ. ಆತ ಅನೇಕ ನಮೂನೆಯ ಅಗ್ನಿ ಬಾಣಗಳನ್ನು ಸಿದ್ಧಗೊಳಿಸಿದ್ದಾನೆ. ಅವನ ರಾಜ್ಯದ ಬಹುಭಾಗದಲ್ಲಿ ಬೆಟ್ಟಗಳು ದೂರವಿರುವುದರಿಂದ, ಅಲ್ಲಿಯ ಜನ ತಮ್ಮ ಮನೆಗಳ ಗೋಡೆಗಳನ್ನು ಹಸಿಮಣ್ಣಿನ ಹೆಂಟೆಗಳಿಂದ ಕಟ್ಟುತ್ತಿದ್ದರು. ಆತ ಈ ಹೆಂಟೆಗಳನ್ನು ಸುಟ್ಟು ಕೆಂಪು ಕಲ್ಲಿನ ಹಾಗೆ ಮಾಡುವ ಯಂತ್ರ ಸಿದ್ಧಗೊಳಿಸಿದ್ದಾನೆ. ಇದರ ತಾತ್ಪರ್ಯವೇನೆಂದರೆ ಆತ, ಅಗ್ನಿದೇವನನ್ನು ತನ್ನ ವಶದಲ್ಲಿಯೇ ಇರಿಸಿಕೊಂಡ ಹಾಗಿದೆ.

**ಕಾಮನಾ:** ನಮ್ಮ ವಿದರ್ಭದಲ್ಲಿ ಬೇಕಾದಷ್ಟು ಕಲ್ಲು, ಹೆಂಟೆ ಸುಡುವ ಅವಶ್ಯಕತೆಯೇ ನಮಗಿಲ್ಲ.

**ಆಶಾ:** ಆದರೂ, ನಮಗೆ ಈ ಕಲೆ ಗೊತ್ತಿಲ್ಲವಲ್ಲ.

**ದಮಯಂತಿ:** ಈ ರೀತಿಯಾಗಿ ವಾಯು, ಜಲ ಮತ್ತು ಅಗ್ನಿ ಮೂರೂ ದೇವತೆ, ರಾಜಾ ನಳನಿಂದ ಪರಾಜಿತಗೊಂಡಿವೆಯೆಂದು ತಿಳಿಯಬಹುದಾಗಿದೆ.

**ಕಲ್ಪನಾ:** ಮತ್ತೇನು ?

**ದಮಯಂತಿ:** ಹಾಗಾದರೆ, ಅವನು ಬಹು ಪ್ರತಾಪಿ ದೊರೆಯೆ !

**ಕಲ್ಪನಾ:** ನಿಜವಾಗಿಯೆಂದರೆ, ಹೀಗೆಯೇ ಇರುವುದು.

**ಕಾಮನಾ:** ಇಂದ್ರದೇವನೊಂದಿಗೆ ಅವನ ಯಾವ ರೀತಿಯ ಸಂಬಂಧ ಇದೆ ? ಅವನು ಇಂದ್ರದೇವನನ್ನು ಪರಾಜಿತಗೊಳಿಸಿದ್ದಾನೆಯೇ ?

**ಕಲ್ಪನಾ:** ಇಂದ್ರದೇವನನ್ನು ಮನುಷ್ಯರಾರೂ ಸೋಲಿಸಲಾರರು.

**ಆಶಾ:** ಇಂದ್ರದೇವನ ಪ್ರಭುತ್ವವನ್ನು ಮನ್ನಿಸುವುದೇ ಇಲ್ಲ ಎನ್ನುವವರು ಅಸುರರು.

**ಕಲ್ಪನಾ:** ಯಾವುದೇ ಮನುಷ್ಯ, ಇಂದ್ರನ ಪ್ರಭುತ್ವವನ್ನು ಮನ್ನಿಸುವುದಿಲ್ಲ ಎನ್ನುವ ಸಾಹಸ ಮಾಡಿದರೆ ಸಾಕು, ಅವನಿಗೆ ಅಧೋಗತಿ ಪ್ರಾಪ್ತವಾಗುತ್ತದೆ. ಇಂದ್ರದೇವನ ಪ್ರಭುತ್ವವನ್ನು ಸ್ವತಃ ಭಗವಾನ್ ಸ್ಥಾಪಿತಗೊಳಿಸುತ್ತಾನೆ.

**ದಮಯಂತಿ:** ಆದರೆ ನಾನು, ಇಂದ್ರದೇವನನ್ನು ಸೋಲಿಸುವಂಥ ಹಾಗೂ ಅವನೆ ದುರಿನಲ್ಲಿ ವಿಚಲಿತನಾಗದಂಥ ಮನುಷ್ಯನೊಂದಿಗೆ ವಿವಾಹ ವಾಗುತ್ತೇನೆ.

**ಕಲ್ಪನಾ:** (ಕೊಂಚ ಚಿಂತಿತ ಸ್ವರದಲ್ಲಿ) ರಾಜಕುಮಾರಿ ! ತಾವು ರಾಜ ನಳನಿಗೆ

ಆಹ್ವಾನ ನೀಡಿದರೆ ಆತ ಇಂದ್ರದೇವನ ಪ್ರಭುತ್ವವನ್ನು ವಿರೋಧಿಸಬಹುದಾಗಿದೆ.

**ಕಾಮನಾ:** ನಮ್ಮ ರಾಜಕುಮಾರಿಯ ಬಗ್ಗೆ ರಾಜಾ ನಳನಿಂದ ನಡೆಯಬೇಕಾದ ಪರೀಕ್ಷೆಯೆಂದರೆ ಇದೆ ಆಗಿದೆ.

**ದಮಯಂತಿ:** (ಆತ್ಮವಿಶ್ವಾಸದಿಂದ) ಹಾಂ!, ನಾನು ರಾಜಾ ನಳನನ್ನು ಇಂದ್ರದೇವನ ವಿರೋಧಿಯನ್ನಾಗಿ ಮಾಡುತ್ತೇನೆ.

**ಕಲ್ಪನಾ:** (ನಗುತ್ತ) ಮೊದಲು ತಾವು ರಾಜಾ ನಳನನ್ನು ಒಪ್ಪಿಕೊಳ್ಳಿಯಾದರೂ ಒಪ್ಪಿಕೊಳ್ಳಿ, ರಾಜಕುಮಾರಿ. ನಂತರ ಅವನನ್ನು ಏನಾದರೂ ಮಾಡಿ.

**ದಮಯಂತಿ:** (ಲಜ್ಜಾಪೂರ್ಣ ನಗೆಯೊಂದಿಗೆ) ಹಾಂ, ಇದನ್ನು ನಾನು ಮರೆತೇ ಬಿಟ್ಟಿದ್ದೆ. ಬಹುಶಃ ಸ್ವಯಂವರದಲ್ಲಿ ರಾಜಾ ನಳ ನನಗೆ ಸ್ವೀಕಾರ್ಯ ಎನ್ನಿಸದೆ ಹೋದರೆ ?

**ಕಲ್ಪನಾ:** ಅಥವಾ ಯಾವುದೇ ಕಾರಣದಿಂದ ಅವನೇ ಸ್ವಯಂವರಕ್ಕೆ ಬರದೆ ಹೋದರೆ.

**ಕಾಮನಾ:** ಇದು ಹೇಗೆ ಆಗಲು ಸಾಧ್ಯ ? ರಾಜಕುಮಾರಿ ದಮಯಂತಿಯ ಸ್ವಯಂವರ ನಡೆದಾಗ ರಾಜಾನಳ ಅದರಲ್ಲಿ ಭಾಗವಹಿಸುವುದಿಲ್ಲ ವೆಂದರೆ ? ಏನೇ ಆದರೂ ಅವನು ಅದರಲ್ಲಿ ಭಾಗವಹಿಸಲೇಬೇಕು.

**ಆಶಾ:** ಹಾಂ! ರಾಜಾ ನಳ ಸ್ವಯಂವರಕ್ಕೆ ಅವಶ್ಯ ಬರುತ್ತಾನೆ ಹಾಗೂ ರಾಜಕುಮಾರಿಗೆ ಸ್ವೀಕಾರ್ಯವೂ ಆಗುತ್ತಾನೆ.

**ಕಲ್ಪನಾ:** ನಾನು ಹೇಳುವ ಅಭಿಪ್ರಾಯ ಕೊಂಚ ಬೇರೆಯಾಗಿತ್ತು.

**ಕಾಮನಾ:** ಈ ಪತ್ರದಲ್ಲಿ ರಾಜ ನಳ ಏನು ಬರೆದಿದ್ದಾನೆಂಬುದು ನಿನಗೆ ಗೊತ್ತಿದೆ.

**ಕಲ್ಪನಾ:** ನನಗೆ ಗೊತ್ತಿದೆ, ಆದರೆ ನೀನು ಹೇಳಿದರೆ ಹೆಚ್ಚು ಒಳ್ಳೇದು.

**ಕಾಮನಾ:** ಇದರಲ್ಲಿ ರಾಜಾ ನಳ ತನ್ನ ಪ್ರೇಮಾತುರ ಅವಸ್ಥೆಯ ವರ್ಣನೆ ಮಾಡಿದ್ದಾನೆ.

**ಕಲ್ಪನಾ:** ಹಂಸದೊಂದಿಗೆ ಬೇರೆ ಇನ್ನಾವ ಸಂದೇಶ ಕಳಿಸಲು ಸಾಧ್ಯ ? ನನಗಿದು ಗೊತ್ತಿತ್ತು, ಕಾಮನಾ. ಆದರೆ ಇದನ್ನು ನಿನ್ನಿಂದ ಹೇಳಿಸಬೇಕೆಂದು ಇಚ್ಛಿಸಿದ್ದೆ. ನಮ್ಮ ರಾಜಕುಮಾರಿ ಈ ಮಾತಿಗೆ ಮೌನವೇಕಿದ್ದಾಳೆ ? ಆಕೆಯ ಕಣ್ಣುಗಳು ಅದೇಕೆ ಕೆಳಗೆ ಬಾಗಿವೆ ?

**ಆಶಾ:** ಕೆಳಗೆ ಬಾಗದೆ ಇನ್ನೇನು ಮಾಡುತ್ತವೆ ? ರಾಜಾ ನಳ ಪ್ರೇಮಯಾಚಿಸಿ ಬರೆದಿರಬೇಕು.

**ಕಲ್ಪನಾ:** ರಾಜಕುಮಾರಿ! ಸಖಿಯರಲ್ಲಿ ಇದೆಂಥ ನಾಚಿಕೆ ? ನಮಗೆಲ್ಲ ಗೊತ್ತಾಗುತ್ತಲಿದೆ, ಆದರೆ ತಮ್ಮ ಥರಥರ ನಡುಗುವ ಧ್ವನಿಯಲ್ಲಿ ಈ ಕಥೆಯನ್ನು ಕೇಳಬಯಸುತ್ತೇವೆ.

**ದಮಯಂತಿ:** ಏನು ಕೇಳಬಯಸುತ್ತೀರಿ ? ಇದು ಪ್ರೇಮ-ಯಾಚನೆ ಅಲ್ಲ ಪ್ರೇಮಬಾಣ ಸಖಿ! ರಾಜಾ ನಳ ಪ್ರೇಮ-ಬಂಧನದಲ್ಲಿ ಸಿಲುಕಿಲ್ಲ, ಈಗ ನಾನು ಸಿಲುಕಿದ್ದೇನೆ.

**ಕಲ್ಪನಾ:** ಒಂದೇ ಒಂದು ಪತ್ರದಿಂದ ಈ ಅವಸ್ಥೆಯೇ, ರಾಜಕುಮಾರಿ, (ತಿಳಿವಳಿಕೆಯ ಸ್ವರದಲ್ಲಿ) ಈ ಪತ್ರದ ಹಿಂದೆ ಬಹುಶಃ ಇನ್ನೇನೋ ಬೇರೆ ರಹಸ್ಯವೂ ಇರಬೇಕು.

**ದಮಯಂತಿ:** (ಕೊಂಚ ರೇಗಿ) ಹಾಂ! ಬಹುಶಃ ಇನ್ನೂ ರಹಸ್ಯವಿರಬೇಕು, ಅದು ಇದಾಗಿದೆ, ರಾಜಾ ನಳ ನನ್ನ ಹಂಸದ ಮೇಲೆ ಅಧಿಕಾರ ಪಡೆದಿದ್ದಾನೆ, ಅದನ್ನು ತನ್ನ ಹತ್ತಿರ ಇಟ್ಟುಕೊಂಡು ತನ್ನ ಹಂಸವನ್ನು ಇತ್ತ ಕಳಿಸಿದ್ದಾನೆ.

**ಆಶಾ:** ಅವನ ಹಂಸ ಇತ್ತ ಹೇಗೆ ಬಂತು ?

**ದಮಯಂತಿ:** ಈ ಮಾತಿನ ಬಗ್ಗೆಯೇ ನಾನು ಚಕಿತಳಾಗಿರುವುದು.

**ಕಲ್ಪನಾ:** ತಮ್ಮ ಹಂಸ ಅತ್ತ ನಳನ ಉದ್ಯಾನದಲ್ಲಿ ಹೇಗೆ ಹೋಯಿತು ?

**ದಮಯಂತಿ:** ಆ ಹಂಸದೊಂದಿಗೆ ನಾನೇನು ಯಾವುದಾದರೂ ಸಂದೇಶ ಕಳಿಸಿದ್ದೇನೆಯೆ ? ನನ್ನ ಹಂಸ ಹೀಗೆಯೇ ಹಾರುತ್ತ ಹಾರುತ್ತ ಅವನ ಉದ್ಯಾನದೊಳಕ್ಕೆ ಹೋಗಿರಬಹುದು.

**ಕಲ್ಪನಾ:** ಬಹುಶಃ ಅವನ ಹಂಸವೂ ಹಾಗೆಯೇ ಹಾರುತ್ತ ಹಾರುತ್ತ ಇತ್ತ ಬಂದಿರಬಹುದು.

**ದಮಯಂತಿ:** ಆದರೆ ಈ ಪತ್ರವನ್ನು ಹಂಸ ಹೇಗೆ ತಂದಿತು ?

**ಕಲ್ಪನಾ:** (ನಸುನಕ್ಕು) ಇದುವೇ ರಾಜಾ ನಳನ ಕಲೆಯಾಗಿದೆ. ಅವನು ಬೇರೆ-ಬೇರೆ ರಾಜ್ಯಗಳಿಗೆ ಹೋಗಲು, ಬೇರೆ ಬೇರೆ ಹಂಸಗಳನ್ನು ತರಬೇತಿಗೊಳಿಸಿದ್ದಾನೆ. ವಿದರ್ಭಕ್ಕೆ ಹೋಗಲು ತರಬೇತಿ ಪಡೆದ ಈ ಹಂಸ ಈ ಪತ್ರವನ್ನು ತೆಗೆದುಕೊಂಡು ಬಂದಿದೆ.

**ದಮಯಂತಿ:** ಆದರೆ ಈ ಹಂಸವನ್ನು ಯಾರಾದರೂ ಬೇರೆ ರಾಜಪುರುಷ ಹಿಡಿದು ತಂದೆಯವರ ಹತ್ತಿರ ಒಯ್ದಿದ್ದರೆ ?

**ಕಲ್ಪನಾ:** ಹಾಗಾಗಿದ್ದರೆ ಏನಾಗುತ್ತಿತ್ತು ? ಅದರಲ್ಲಿ ಪ್ರೇಮದ ಯಾಚನೆ ಮಾತ್ರ ಇದೆ. ಮಹಾರಾಜ ಭೀಮಸೇನ, ಈ ಯಾಚನೆಯನ್ನು ಅದೇಕೆ ಅನುಚಿತವೆಂದು ತಿಳಿಯುತ್ತಾರೆ ? ರಾಜಾ ನಳನಂಥ ಅಳಿಯ ಸುಲಭವಾಗಿ ಸಿಗಲು ಸಾಧ್ಯವೇ ?

**ದಮಯಂತಿ:** (ಸಂತಸಗೊಂಡು) ನೀನಂತೂ, ನನ್ನ ಸಖಿ ಅಲ್ಲ, ರಾಜಾ ನಳನ ಸಖಿಯ ಹಾಗೆ ಮಾತಾಡುತ್ತಿರುವೆ !

**ಕಲ್ಪನಾ:** ಸಖಿಯಂತೂ ನಾನು ನಿಮ್ಮವಳೆ, ಆದರೆ ನಿಮ್ಮಿಂದಾಗಿ ರಾಜಾ ನಳನ ಸಖಿಯಾಗುವ ಆಶೆ ಹೊತ್ತಿದ್ದೇನೆ, ನನಗೆ ವಿಶ್ವಾಸವೂ ಇದೆ, ನನ್ನ ಈ ಆಶೆ ಬಹಳ ತೀವ್ರ ಕೈಗೂಡುತ್ತದೆ-ಎನ್ನುವಲ್ಲಿ. (ಕಣ್ಣು ಹೊಡೆದು) ನಿಮ್ಮ ಹಂಸವೂ ಒಂದೇ ಹೋಗಿರಲಿಕ್ಕಿಲ್ಲ, ಯಾವುದಾದರೂ ಪರಿಣತಿ ಪಡೆದ ಹಂಸದೊಂದಿಗೇ ಹೋಗಿರಬೇಕು.

**ದಮಯಂತಿ:** ಹಾಂ! ಕಳವಿನಿಂದ ಏನೂ ಹೋಗಿಲ್ಲ. ತಂದೆಯವರು ತಮ್ಮ ಹಂಸವನ್ನೂ ಯಾವುದೋ ಕಾರಣಕ್ಕಾಗಿ ಅತ್ತ ಹೋಗಲು ಬಿಟ್ಟಿದ್ದರು.

ನಾನು ಕೂಡ ಮೋಜಿಗಾಗಿ ಅದರೊಂದಿಗೆ ನನ್ನ ಹಂಸವನ್ನೂ ಜೊತೆ ಮಾಡಿದೆ. ಆದರೆ ನಾನು ಅದರೊಂದಿಗೆ ಯಾವ ಸಂದೇಶವನ್ನೂ ಕಳಿಸಿರಲಿಲ್ಲ.

**ಕಲ್ಪನಾ:** ತಮ್ಮ ಹಂಸವೇ ಒಂದು ಸಂದೇಶ.

**ದಮಯಂತಿ:** (ಚಂಚಲಳಾಗಿ) ಹಾಂ!, ನೀನಂತೂ ಏನೆಲ್ಲ ಅನ್ನುವೆ.

**ಕಲ್ಪನಾ:** (ಅದೇ ರೀತಿ) ಇಲ್ಲ, ನಾನು ಎಲ್ಲವನ್ನೂ ಅನ್ನುವುದಿಲ್ಲ. ಆದರೆ ಈಗ ಇಷ್ಟೇ ಹೇಳಿ, ಆ ಹಂಸ ಮರಳುವ ಬಗೆ ಹೇಗೆ?

**ದಮಯಂತಿ:** ನೀನು ಹೇಳು, ಅದು ಯಾವ ರೀತಿ ಬರಬಹುದು, ನಾನು ಯಾವ ರೀತಿ ಅದನ್ನು ಮರಳುವಂತೆ ಮಾಡಲಿ.

**ಕಲ್ಪನಾ:** ಒಂದು ಪ್ರಾರ್ಥನಾ ಪತ್ರ ಬರೆದು ಅದನ್ನು ಈ ಹಂಸದ ಕಾಲಿಗೆ ಕಟ್ಟಿ ಕಳಿಸಿಬಿಡಿ. ಪ್ರಾರ್ಥನಾ ಪತ್ರದಲ್ಲಿ ನಮ್ಮ ಹಂಸವನ್ನು ಮರಳಿ ಕಳಿಸುವ ವಿಷಯವೂ ಅಡಕವಾಗಿರಲಿ.

**ಕಾಮನಾ:** ನಮ್ಮ ಹಂಸವನ್ನು ಅವರು ಮರಳಿಸುವವರೆಗೂ ನಾವೇಕೆ ಇದನ್ನು ಹಿಡಿದಿಡಬಾರದು?

**ದಮಯಂತಿ:** ಹಾಂ! ಹಾಂ! ಇದು ಕೂಡ ಸರಿಯಾದುದೇ.

**ಕಲ್ಪನಾ:** ಆ ಹಂಸ ಬರುವುದರೊಳಗಾಗಿ ತಾವು ಪತ್ರ ಬರೆದರೆ, ನಳನಿಂದ ಇನ್ನೊಂದು ಪತ್ರ ತಮಗೆ ಬರುವುದೆಂದು ಆಶಿಸಿದ್ದೀರಿ. ತಾವು ತಮ್ಮ ಹಂಸವನ್ನು ಪತ್ರ ತರಲೆಂದೇ ಕಳಿಸಿದ್ದೀರಿ.

**ದಮಯಂತಿ:** ವ್ಯಂಗ್ಯ ಮಾಡುವುದನ್ನು ನೀನು ಬಿಟ್ಟುಕೊಡುವುದೇ ಇಲ್ಲ.

**ಕಲ್ಪನಾ:** ಆದರೆ ಅವನು ತನ್ನ ಚಾತುರ್ಯ ತೋರಿಸಿದ್ದಾನೆ. ಈಗ ಅವನು ತಮ್ಮಿಂದ ಪತ್ರ ಬರಲೆಂದು ಬಯಸಿದ್ದಾನೆ.

**ಕಾಮನಾ:** ಹಾಗಾದರೆ ರಾಜಕುಮಾರಿ ಪತ್ರ ಬರೆದು ಕಳಿಸಬೇಕೆ? ಒಂದು ಸಾಧಾರಣ ಪತ್ರ ಮುಖೇನ ನಮ್ಮ ಹಂಸವನ್ನು ತರಿಸಿಕೊಳ್ಳುವಲ್ಲಿ ಯಾವ ದೋಷವೂ ಇಲ್ಲ.

**ಕಲ್ಪನಾ:** ಇಲ್ಲ, ಯಾವ ದೋಷವೂ ಇಲ್ಲ.

**ದಮಯಂತಿ:** ಆದರೆ ನಿನ್ನ ಮನಸ್ಸಿನಲ್ಲಿ ಏನೋ ಅಶಂಕೆ ಇದೆ, ಹೇಳುತ್ತಿಲ್ಲ ಏಕೆ ಸಖಿ?

**ಕಲ್ಪನಾ:** ರಾಜಾ ನಳ ತಮ್ಮ ಹಂಸದೊಂದಿಗೇ ಏಕೆ ಪತ್ರ ಕಳಿಸಬಾರದು, ತನ್ನ ಹಂಸದೊಂದಿಗೆ ಏಕೆ ಕಳಿಸಬೇಕು? ಎಂದು ವಿಚಾರಿಸುತ್ತಿದ್ದೇನೆ. ಈ ರೀತಿ ಇದು ಬೇರೆ ಯಾರ ಕೈಗಾದರೂ ಸಿಕ್ಕಿ ಯಾವುದಾದರೂ ಉಪದ್ರವ ಉಂಟುಮಾಡಬಹುದಾಗಿತ್ತು.

**ಆಶಾ:** ಹೀಗೆ ಏನು ಆಗುತ್ತಿತ್ತು? ರಾಜಾ ನಳ ಈ ರೀತಿಯಾಗಿ ತನ್ನ ಚಾತುರ್ಯ ಮತ್ತು ಕಾರ್ಯಕೌಶಲ್ಯದ ಪ್ರಮಾಣ ನೀಡಬೇಕೆಂದು ಬಯಸಿರಬೇಕು.

**ಕಲ್ಪನಾ:** ಆದರೆ ಅವನ ಆ ಗುಣದಲ್ಲಿ ಒಂದು ಅವಗುಣವೂ ಇದೆ. ಅದೇ

ಮಾತನ್ನೇ ನಾನು ಈಗ ಹೇಳಲಿದ್ದೆ.

ಆಶಾ: ಹೇ! ಅವನಲ್ಲಿ ಅಂಥ ಅವಗುಣವಿದೆ ಏನು?

ಕಾಮನಾ: ಕುರುಡ, ಕಿವುಡ, ಕುಂಟ, ಬುದ್ಧಿಹೀನನಲ್ಲದಿದ್ದರೆ ಓರ್ವ ರಾಜಾನಲ್ಲಿ ಇನ್ನಾವ ಅವಗುಣ ಇರಲು ಸಾಧ್ಯ!

ಕಲ್ಪನಾ: ಅವನಿಗೆ ಜೂಜಾಟ ಆಡುವ ಹುಚ್ಚು.

ದಮಯಂತಿ: ಛೈ! ಜೂಜಾಟ ಆಡುವುದು!

ಆಶಾ: ಆದರೆ ಜೂಜು ಆಡುವುದು ಅದು ರಾಜರ ಆಟವೇ ಆಗಿದೆ. ಇದು ಅವರ ಕರ್ಮವಾಗಿದೆ. ರಾಜ ದೊಡ್ಡವನಾಗಿದ್ದಷ್ಟೂ ಅವನ ಜೂಜು ದೊಡ್ಡದಾಗಿರುತ್ತದೆ.

ಕಾಮನಾ: ಹೌದು ಮತ್ತೆ. ಯಾವುದಾದರೂ ಕಂಗಾಲ ಜೂಜು ಆಡುತ್ತಾನೇನು? ಇದಂತೂ ರಾಜರ ಆಟವೇ ಆಗಿದೆ.

ದಮಯಂತಿ: ಆದರೆ ನನಗೆ ಜೂಜು ಅಂದರೆ ತುಂಬ ಹೆದರಿಕೆ ಆಗುತ್ತದೆ. (ನಡುಗುತ್ತಾಳೆ) ನೋಡಲ್ಲ, ಅದರ ಹೆಸರು ಕೇಳಿದರೇ ನಡುಗು ಆರಂಭವಾಯಿತು.

ಕಾಮನಾ: ನಡುಗು, ಬಹುಶಃ ಜಲದೇವತೆ ಹುಟ್ಟಿಸಿದುದು ಆಗಿರಬೇಕು. ಬಹುಹೊತ್ತಿನಿಂದ ತಾವು ಪವನದೇವನ ಆಲಿಂಗನದಲ್ಲಿ ಇದ್ದೀರಿ ಹಾಗೂ ಜಲದೇವತೆಗೆ ಇದರಿಂದ ಈರ್ಷೆಯಾಗಿದೆ.

ಆಶಾ: ಬನ್ನಿ, ರಾಜಕುಮಾರಿ! ಈ ಸಲ ನಾನು ತಮ್ಮೊಂದಿಗೆ ಸ್ನಾನಕ್ಕೆ ಬರುವೆ.

ದಮಯಂತಿ: ನಡಿ, ಹಾಗಾದರೆ!

(ಇಬ್ಬರೂ ಸರೋವರದಲ್ಲಿ ಇಳಿಯುತ್ತಾರೆ)

ಕಾಮನಾ: ಯಾವ ಪುರುಷ ಜೂಜು ಆಡುವುದಿಲ್ಲವೋ ಅವನೆಂಥ ಪುರುಷ ಕಲ್ಪನಾ? ಅವನು ಪ್ರೇಮದಲ್ಲಿ ಏನುಮಾಡಿ ತೋರಿಸಬಲ್ಲ? ಪ್ರೇಮವೂ ಕೂಡ ಒಂದು ರೀತಿಯ ಜೂಜೇ ಆಗಿದೆ.

ಕಲ್ಪನಾ: ಪ್ರೇಮದಲ್ಲಿ ಸೋಲಿರುವುದಿಲ್ಲ, ಕಾಮನಾ. ಕೇವಲ ಗೆಲವೇ ಗೆಲವು!

ಕಾಮನಾ: ಅದು ಹೇಗೆ ಕಲ್ಪನಾ? ಈ ಎಷ್ಟೆಲ್ಲ ರಾಜರು ರಾಜಕುಮಾರಿ ಅವರ ಸ್ವಯಂವರದಲ್ಲಿ ಬರುತ್ತಾರೆ, ರಾಜಕುಮಾರಿಯಂತೂ ಜಯಮಾಲೆಯನ್ನು ಯಾವುನಾದರೊಬ್ಬನ ಕೊರಳಿಗೆ ಮಾತ್ರ ಹಾಕುತ್ತಾಳೆ. ಹೀಗೆ ಆದಾಗ ಉಳಿದವರ ಸೋಲಲ್ಲದೆ ಇನ್ನೇನು?

ಕಲ್ಪನಾ: ಅಲ್ಲ ಕಾಮನಾ, ಮೊದಲನೆಯ ಮಾತೆಂದರೆ ಅವರೆಲ್ಲರೂ ರಾಜಕುಮಾರಿಯವರ ಪ್ರೇಮಿಗಳಾಗಿರುವುದಿಲ್ಲ. ಬಹಳಷ್ಟು ಜನ ವಿಜಯ ಭಾವನೆಯಿರಿಸಿಕೊಂಡು ಬಂದವರಿರುತ್ತಾರೆ, ಇನ್ನು ಕೆಲವರು ಗೆಲ್ಲುತ್ತೇವೆ-ಎಂಬ ಮನೋಭಾವನೆಯಿಂದ ಬಂದವರಿರುತ್ತಾರೆ. ಇಂಥವರಿಗೆ ಗೆಲವು ಆಗದಿದ್ದರೂ ಅವರದೇನೂ ಹೋಗಬೇಕಾಗಿಲ್ಲ, ಒಂದು ವೇಳೆ ನಿಜವಾದ ಪ್ರೇಮಿ ಇದ್ದರೂ ಅವನು ರಾಜಕುಮಾರಿಯ ಇಚ್ಛೆಯನ್ನು ಗೌರವಿಸಿ ತನ್ನ ಮನಸ್ಸಿಗೆ ಸಮಾಧಾನ ಹೇಳಿಕೊಳ್ಳುತ್ತಾನೆ.

ಕಾಮನಾ: ಇದೇ ರೀತಿ ಸೋತ ಜೂಜುಗಾರನೂ ತನ್ನ ಮನಸ್ಸಿಗೆ ಸಾಂತ್ವನ ಹೇಳಿಕೊಳ್ಳಬಹುದು.

ಕಲ್ಪನಾ: ಆದರೆ ಇಲ್ಲಿ ಗೆಲ್ಲುವವನ ಬಗ್ಗೆ ಯಾವುದೇ ರೀತಿಯ ಪ್ರೇಮಭಾವ ವಿರುವುದಿಲ್ಲ, ತನ್ನ ಪ್ರಿಯತಮೆಯ ಬಗ್ಗೆ ಪ್ರೇಮಿಯಲ್ಲಿರುವ ಆತ್ಮೀಯತೆ ಇರುವುದಿಲ್ಲ.

ಕಾಮನಾ: ಇದು ಆದರ್ಶವಾದದ ಮಾತಾಯಿತು, ಕಲ್ಪನಾ ನಾವಂತೂ ಪ್ರೇಮವನ್ನೂ ಜೂಜು ಎಂದೇ ತಿಳಿಯುತ್ತೇವೆ ಹಾಗೂ ಜೂಜನ್ನೂ ಜೂಜೆಂದೇ ತಿಳಿಯುತ್ತೇವೆ. ಎರಡರಲ್ಲಿನ ಸೋಲೂ ಬಹಳ ಕೆಟ್ಟದ್ದು, ಸೋಲಾದರೆ ಏನು ಮಾಡುವುದು ? ಆದರೆ ಇವರಿಬ್ಬರೂ ಆಟ ಆಡಲೇ ಬೇಕು.

ಕಲ್ಪನಾ: ಹಾಗಾದರೆ ನೀನೂ ಆಡುತ್ತಿಯಾ ?

ಕಾಮನಾ: ನಾನು ರಾಜರ ಮಾತನಾಡುತ್ತಿರುವೆ. ನನಗೆ ಒಂದು ವೇಳೆ ಇಂಥ ಅವಕಾಶ ಸಿಕ್ಕರೆ ನಾನೆಂದು ಹಿಂದೆ ಉಳಿಯಬಲ್ಲೆ !

ಕಲ್ಪನಾ: ಆಗಲಿ ಕಾಮನಾ, ಈಗ ಈ ಚರ್ಚೆ ಬಿಡು, ರಾಜಕುಮಾರಿ ದಮಯಂತಿ ಹಾಗೂ ರಾಜಾ ನಳನ ಬಗ್ಗೆ ವಿಚಾರ ಮಾಡೋಣ.

ಕಾಮನಾ: ಈಗ ವಿಚಾರ ಎಂಥದು ? ಇವರಿಬ್ಬರ ಜೋಡಿ ತುಂಬ ಸುಂದರ ವಾದುದು. ಇವರಿಬ್ಬರನ್ನೂ ವಿವಾಹ ಬಂಧನದಲ್ಲಿ ಬಂಧಿಸಲು ನಮ್ಮ ಪೂರ್ಣ ಶಕ್ತಿ ವಿನಿಯೋಗಿಸೋಣ.

ಕಲ್ಪನಾ: ಇಷ್ಟೆಲ್ಲ ಶಕ್ತಿ ವಿನಿಯೋಗದ ಅವಶ್ಯಕತೆಯಾದರೂ ಏನಿದೆ ? ರಾಜಕುಮಾರಿ ತಮ್ಮ ಮನಸ್ಸನ್ನು ನಿಶ್ಚಿತಗೊಳಿಸುವುದು ಅವಶ್ಯ. ತಂದೆ-ತಾಯಿಗಳು ಅವಳ ಇಚ್ಛೆಯನ್ನು ಪೂರ್ಣಗೊಳಿಸುವಲ್ಲಿಯೇ ತಮ್ಮ ಆನಂದವಿದೆಯೆಂದು ತಿಳಿಯುತ್ತಾರೆ. ಇವಳಿಗಾದರೂ ಯಾವುದರ ಬಗ್ಗೆ ಸಂಕೋಚಪಡಬೇಕಾಗಿದೆ ? ರಾಜಕುಮಾರಿಗೆ ರಾಜ ನಳನಂಥ ವರ ಇಡೀ ಭಾರತದಲ್ಲಿ ಇನ್ನೊಬ್ಬನಿಲ್ಲ.

ಕಾಮನಾ: ಏ ಇಂಥ ಅಹಂಕಾರದ ಮಾತನ್ನು ಆಡಬೇಡ. ದೇವತೆಗಳಿಗೆ ಇದರಿಂದ ಈರ್ಷೆ ಹುಟ್ಟುತ್ತದೆ. ಯಾರಿಗೆ ತಕ್ಕವರು ಮರ್ತ್ಯ ಲೋಕದಲ್ಲಿ ಕಡಿಮೆ ಇರುತ್ತಾರೋ, ಅಂಥವರಿಗೆ ದೇವತೆಗಳು ಗಂಟುಬೀಳುತ್ತಾರೆ.

ಕಲ್ಪನಾ: ನಿನ್ನ ಮಾತು ನಿಜವಾಗಿದೆ, ಕಾಮನಾ. ಒಂದು ವೇಳೆ ಇಂದ್ರದೇವನ ಇಚ್ಛೆ ಈ ಕಡೆ ಉಂಟಾದರೆ ತುಂಬ ಕಷ್ಟ.

ಕಾಮನಾ: ಹಾಗಾದರೆ ಕೂಡಲೇ ಸ್ವಯಂವರ ಏರ್ಪಡಿಸುವಂತೆ ಇವಳ ಮನವೊಲಿಸು. (ಕಲ್ಪನಾಳ ಕೈಯಲ್ಲಿರುವ ಹಂಸ ರೆಕ್ಕೆ ಬಡಿಯುತ್ತದೆ.)

ಕಲ್ಪನಾ: (ಕೂಗಿ) ರಾಜಕುಮಾರಿ, ಈ ಹಂಸ ಈಗ ಹಾರಲು ತುಂಬ ಚಡಪಡಿಸುತ್ತಲಿದೆ. ಈ ರೀತಿ ಇದು ಚಡಪಡಿಸುತ್ತಿದ್ದರೆ ನನ್ನ ಕೈಯಿಂದ ಹಾರಿ ಹೋಗುತ್ತದೆ. ಯಾರಿಗಾದರೂ ಇದರ ಮುಖಾಂತರ

ಸಂದೇಶ ಕಳಿಸುವುದಿದ್ದರೆ ಬೇಗ ಬನ್ನಿ.

ಕಾಮನಾ: (ಅವಳ ಬಾಯ ಮೇಲೆ ಬೆರಳಿಡುತ್ತ) ಏ, ಇಷ್ಟು ಜೋರಾಗಿ ಮಾತನಾಡದಿರು, ಗೋಡೆಗಳಿಗೂ ಕಿವಿ ಇರುತ್ತವೆ.

(ದಮಯಂತಿ ಹಾಗೂ ಆಶಾ ಸರೋವರದಿಂದ ಹೊರಗೆ ಬರುತ್ತಾರೆ)

ದಮಯಂತಿ: (ಅಪಾರ ಸ್ನೇಹಮಯತೆಯಿಂದ) ಇದೇನು ಗದ್ದಲ ನಡೆಸಿರುವೆ, ಕಲ್ಪನಾ ? ಕಾಮನಾಳಿಂದ ಇಂಥ ಚಂಚಲತೆಯನ್ನು ಆತುರತೆಯನ್ನು ನಾನು ನಿರೀಕ್ಷಿಸಬಲ್ಲೆ, ಆದರೆ ನೀನು ಕೂಡ ಅವಳ ಹಾಗೆ ಚಂಚಲಳಾಗತೊಡಗಿರುವೆ.

ಕಲ್ಪನಾ: (ನಕ್ಕು) ರಾಜಕುಮಾರಿ, ಪ್ರೇಮದಲ್ಲಿ ಕಲ್ಪನಾ ಕೂಡ ಕಾಮನಾಳ ಹಾಗೆ ಚಂಚಲ ಹಾಗೂ ಆತುರಳಾಗಿ ವರ್ತಿಸುತ್ತಾಳೆ.

ದಮಯಂತಿ: ಎಂಥ ಪ್ರೇಮ ? ಯಾರಿಗಾಗಿದೆ ಈ ಪ್ರೇಮದ ರೋಗ ?

ಕಲ್ಪನಾ: ಕಲ್ಪನಾಳಿಗೆ, ಕಾಮನಾಳಿಗೆ, ಆಶಾಳಿಗೆ ಹಾಗೂ ಅವರ ಸ್ವಾಮಿನಿಗೆ.

ದಮಯಂತಿ: (ಬೀಸಣಿಗೆ ಎತ್ತಿ ಅವಳ ಭುಜಕ್ಕೆ ಹೊಡೆಯುತ್ತಾಳೆ) ಸ್ವಾಮಿನಿ ಇಷ್ಟು ಅಪಕ್ವವಲ್ಲ !

ಕಲ್ಪನಾ: ಯಾವಾಗ ಪಕ್ವಳಾದಳು, ಸ್ವಾಮಿನಿ ? ಈಗ ಬಹು ಕಷ್ಟದಿಂದ ಕೇವಲ ಹದಿನೇಳು ವರ್ಷ ತುಂಬಿವೆ.

ದಮಯಂತಿ: ಸರಿ, ಬಹಳ ಮಾತು ಬೇಡ, ಏನಾದರೂ ಕೆಲಸದ ಮಾತು ಹೇಳು.

ಕಲ್ಪನಾ: ಕೆಲಸದ ಮಾತೆಂದರೆ, ಈ ಹಂಸದೊಂದಿಗೆ ಕಳಿಸುವ ಆ ಕಾಗದ ಕೊಡಿ. ಈಗ ಇದು ತುಂಬ ಆತುರಗೊಂಡಿದೆ.

(ಕಲ್ಪನಾಳ ಕೈಯಲ್ಲಿರುವ ಹಂಸ ರೆಕ್ಕೆ ಬಡಿಯುತ್ತದೆ.)

ದಮಯಂತಿ: (ಕಾಮನಾಳಿಗೆ) ಕಾಮನಾ, ನೀನು ಹೋಗಿ ಆ ಕುಂಜದಲ್ಲಿರುವ ಚೌಕಿಯೊಳಗಿಂದ ಒಂದು ಕಾಗದ ತೆಗೆದುಕೊಂಡು ಬಾ.

ಆಶಾ: ಪತ್ರವನ್ನು, ರಾಜಕುಮಾರಿ ಮೊದಲೇ ಬರೆದಿಟ್ಟಿರಬೇಕು.

ದಮಯಂತಿ: ಪತ್ರ, ಬರೀ ಬಿಳೀ ಕಾಗದ. ನನಗೆ ಅದರಲ್ಲಿ ಬರೆಯುವುದೇನಿದೆ ?

ಕಲ್ಪನಾ: ಹಾಂ ! ಬಿಳಿ ಕಾಗದ, ತಿಳಿದುಕೊಳ್ಳುವವರಿಗೆ ಅದು ಒಳ್ಳೆಯ ಸಂದೇಶ ನೀಡುತ್ತದೆ.

ದಮಯಂತಿ: ಹಾಂ ! ಬಿಳೀ ಕಾಗದವನ್ನೇ ಇದರ ಕಾಲಿಗೆ ಕಟ್ಟಿಬಿಡುವೆ. ಯಾರಿಗೆ ಹೇಗೆ ಬೇಕೋ ಹಾಗೆ ಅರ್ಥಮಾಡಿಕೊಳ್ಳಲಿ. ನಾವು ಮಾತ್ರ ಯಾವುದೇ ರೀತಿಯಲ್ಲೂ ಸಿಕ್ಕು ಹಾಕಿಕೊಳ್ಳುವುದಿಲ್ಲವಲ್ಲ.

ಕಲ್ಪನಾ: ರಾಜಕುಮಾರಿ, ತಮ್ಮ ಇಚ್ಛೆಯಾದರೂ ಏನು ?

ದಮಯಂತಿ: ನನ್ನ ಇಚ್ಛೆ ಇನ್ನೂ ನಿಶ್ಚಿತವಾಗಿಲ್ಲ. (ಸುಮ್ಮನೆ, ಆಶಾಳಿಂದ ಮುಚ್ಚಿಡ ಬಯಸುತ್ತಾಳೆ, ಆದರೆ ಈ ಸಖಿಯರಿಂದ ಯಾವುದನ್ನೂ ಗುಪ್ತವಾಗಿಡಲು ಸಾಧ್ಯವಿಲ್ಲ.) ಮೊದಲ ಮಾತೆಂದರೆ ಕಲ್ಪನಾ, ನಾನು ರಾಜಾ ನಳನನ್ನು ಏಕಾಂತದಲ್ಲಿ ಭೇಟಿಯಾಗಲಿಚ್ಛಿಸುತ್ತೇನೆ. ಆ ನಂತರವೆ ನಾನು ನಿಶ್ಚಿತಗೊಳಿಸುವೆ.

**ಕಲ್ಪನಾ:** ಹಾಗಾದರೆ ಸ್ವಯಂವರ ನೆರವೇರಿಸುವಂತೆ ಮಹಾರಾಜರಿಗೆ ವಿನಂತಿ ಮಾಡಿಕೊಳ್ಳಿ.

**ದಮಯಂತಿ:** ಇಷ್ಟು ಅವಸರ ಏನಿದೆ ?

**ಕಲ್ಪನಾ:** ಹಾಗಲ್ಲ ರಾಜಕುಮಾರಿ, ಮೊದಲು ಸ್ವಯಂವರ ಘೋಷಣೆಯಾಗಲಿ, ಅಂದರೆ ರಾಜ ನಳನ ಉತ್ಸುಕತೆ ಪ್ರಬಲಗೊಳ್ಳುತ್ತದೆ.

**ದಮಯಂತಿ:** ನೀನು ಹೇಗೆ ಉಚಿತವೆಂದು ತಿಳಿಯುತ್ತೀಯೋ, ಹಾಗೆ ಮಾಡೋಣ.

**ಕಲ್ಪನಾ:** ಹಾಗಾದರೆ, ಏಕಾಂತದಲ್ಲಿ ಭೇಟಿಯಾಗಲು ರಾಜಾ ನಳನಿಗೆ ಸಂದೇಶ ಯಾವ ರೀತಿ ಕಳಿಸುವುದು ? ಪತ್ರದಲ್ಲಿ ಬರೆಯುವುದು ಉಚಿತವಲ್ಲ.

**ಕಾಮನಾ:** (ಕುಂಜದಿಂದ ಪತ್ರ ತರುತ್ತಾಳೆ) ಪತ್ರದಲ್ಲಿ ಏನೂ ಬರೆಯಕೂಡದು, ಅದು ಹಾಗೇ ಇರಲಿ.

**ಕಲ್ಪನಾ:** ಸರಿ, ನಾನು ಸ್ವತಃ ರಾಜಾ ನಳನಿಗೆ ಸಂದೇಶ ತಲುಪಿಸುವೆ.

**ಆಶಾ:** ನಾನು ಈ ಸೇವೆ ಮಾಡಬಲ್ಲೆ.

**ದಮಯಂತಿ:** ಬೇಡ ಆಶಾ, ನೀನು ನನ್ನ ಮನದ ಇಂಗಿತವನ್ನು ಹೆಚ್ಚು ಸ್ಪಷ್ಟಗೊಳಿಸಿ ಬಿಡುವೆ. ನೀನಂತೂ ಯಾವಾಗಲೂ ಆತುರದವಳು. ಸಂದೇಶ ತಲುಪಿಸಲು ಕಲ್ಪನಾಳೇ ಯೋಗ್ಯಳಾಗಿದ್ದಾಳೆ.

**ಕಾಮನಾ:** ಅದೂ ಅಲ್ಲದೆ ರಾಜಾನಳನ ರಾಜ-ದರ್ಬಾರದಲ್ಲಿ ಮೊದಲಿನಿಂದಲೂ ಇವಳಿಗೆ ಪರಿಚಿತರೂ ಇದ್ದಾರೆ.

**ಕಲ್ಪನಾ:** ಸರಿ, ಹಾಗಾದರೆ ಇದು ನಿಶ್ಚಯವಾಯಿತು. ಪತ್ರಕೊಡಿ, ಅದನ್ನು ಹಂಸದ ಪಾದಕ್ಕೆ ಕಟ್ಟುತ್ತೇನೆ.
(ಆಶಾ ಕಾಮನಾಳಿಂದ ಪತ್ರ ಪಡೆದು ಹಂಸದ ಕಾಲಿಗೆ ಕಟ್ಟುತ್ತಾಳೆ; ಹಾಗೂ ಕಲ್ಪನಾಳ ಕೈಯಿಂದ ಹಂಸ ತೆಗೆದುಕೊಳ್ಳುತ್ತಾಳೆ.)

**ಆಶಾ:** ಈಗ ಹಂಸವನ್ನು ಬಿಡಲೇ, ರಾಜಕುಮಾರಿ !

**ಕಲ್ಪನಾ:** ತಡೆ, ಆ ಹಂಸವನ್ನು ಸ್ವತಃ ರಾಜಕುಮಾರಿ ತಮ್ಮ ಕೈಯಿಂದಲೇ ಹಾರಿ ಬಿಡಲಿ. (ಆಶಾ, ಹಂಸವನ್ನು ರಾಜಕುಮಾರಿಯ ಕೈಗೆ ಕೊಡುತ್ತಾಳೆ ಅವಳು ಅದನ್ನು ಪ್ರೀತಿ ತುಂಬಿದ ಕಣ್ಣಿನಿಂದೊಮ್ಮೆ ನೋಡಿ ಹಂಸವನ್ನು ಬಿಟ್ಟುಬಿಡುತ್ತಾಳೆ.)

**- ತೆರೆ -**

# ಅಂಕ: ಎರಡು

(ರಾಜಾ ನಳನ ರಾಜಭವನದ ಒಂದು ಸದನ. ರಾಜಾ ನಳ ಹಾಗೂ ಅವನ ಆಪ್ತ ಮಂತ್ರಿಯ ಪ್ರವೇಶ)

ನಳ: ಹಾಗಾದರೆ, ಮಂತ್ರಿಗಳೇ ಇಂದಿನ ಪತ್ರಗಳಲ್ಲಿ ರಾಜಕುಮಾರಿ ದಮಯಂತಿಯ ಸ್ವಯಂವರದ ಶುಭ ಸೂಚನೆ ಬಂದಿದೆಯೇ?

ಮಂತ್ರಿ: ಹೌದು, ಮಹಾರಾಜ! ಸ್ವಯಂವರದ ಸೂಚನೆ ಎಂದೇಕೆ ಹೇಳುತ್ತೀರಿ? ಪ್ರಾರಂಭದಲ್ಲಿಯೇ ಶುಭ ಶಕುನ ತೋರುತ್ತಲಿದೆ.

ನಳ: (ನಕ್ಕು) ಆಶಾವಾದಿಯಾಗಿರುವುದು ಶುಭಗುಣವಾಗಿದೆ. ಆದರೆ ಇದು ಅತಿಯಾಗಬಾರದು.

ಮಂತ್ರಿ: ಇದು ಅತಿಯಲ್ಲ ಮಹಾರಾಜ. ತಮ್ಮ ಸಂದೇಶದಿಂದಾಗಿಯೇ ಇದು ಸಾಧ್ಯವಾಗಿದೆ.

ನಳ: (ಸ್ವಗತ) ನನ್ನ ಸಂದೇಶವೂ ಅವಳ ಸಂದೇಶದ ಉತ್ತರವೇ ಆಗಿತ್ತು. ಮೊದಲಿನ ಸಂದೇಶವಂತೂ ರಾಜಕುಮಾರಿಯದೇ ಆಗಿತ್ತು.

ಮಂತ್ರಿ: ಇದು ಕೂಡ ಸರಿಯಾಗಿದೆ. ಮೊದಲು ಯಾವಾಗಲೂ ಪಾತ್ರದಿಂದಲೇ ಆಗುತ್ತದೆ, ವಸ್ತುವಿನದು ಏನಿದೆ?

ನಳ: ಆದರೆ ವಸ್ತುವಿಗೂ ಪಾತ್ರದ ಅವಶ್ಯಕತೆ ಇರುತ್ತದೆ, ಮಂತ್ರಿ! ಇಲ್ಲಿ ಪಾತ್ರ ಮತ್ತು ವಸ್ತುವಿನ ತುಲನೆ ಅಷ್ಟು ಸಮಂಜಸವಲ್ಲ. ಇಲ್ಲಿಯಂತೂ ಭೂಮಿ ಮತ್ತು ರೈತನ ತುಲನೆ ಸರಿಯಾದುದು.

ಮಂತ್ರಿ: ಸರಿಯಾಗಿದೆ, ಮಹಾರಾಜ. ತಾವು ತಮ್ಮ ಮಂತ್ರಿಗಿಂತ ಹೆಚ್ಚು ಬುದ್ಧಿಶಾಲಿಗಳೂ, ಶ್ರೇಷ್ಠ ಕವಿಗಳೂ ಆಗಿರುವಿರಿ. ಆದರೆ ಅದೆಷ್ಟೋ ಸಲ ಭೂಮಿ ರೈತನಿಗಾಗಿ ಮೊದಲೇ ಸಿದ್ಧವಾಗಿರುವುದಿಲ್ಲ, ಸಿದ್ಧಮಾಡಿ ಕೊಳ್ಳಬೇಕಾಗುತ್ತದೆ; ಅಡವಿಯನ್ನು ಕಡಿದು ಉಳುವುದಕ್ಕಾಗಿ ಭೂಮಿ ಸಿದ್ಧಗೊಳಿಸಿದ ಹಾಗೆ.

ನಳ: ಅದು ಕೂಡ ಅಂಥ ವಿಪರೀತ ವಿಷಯವೇನಲ್ಲ. ಅಲ್ಲಿ ಭೂಮಿ ಮೊದಲೇ ಯಾರಿಂದಲೋ ಉಪದ್ರವ ಹಾಗೂ ಸಂಘರ್ಷದಿಂದಾಗಿ ಪೀಡೆಗೆ ಒಳಗಾಗಿರುತ್ತದೆ. ಅಲ್ಲಿ ರೈತ ಈ ಪೀಡೆಯಿಂದ ಭೂಮಿಯನ್ನು ಮುಕ್ತಗೊಳಿಸಬೇಕಾಗುತ್ತದೆ. ಆದರೆ ಇಲ್ಲಿಯ ಭೂಮಿಯನ್ನು ಯಾರೂ ಮುಟ್ಟಿಲ್ಲ ಕೂಡ ಮತ್ತು ಕುಮಾರಿಯಾಗಿದ್ದಾಳೆ.

ಮಂತ್ರಿ: ಇಲ್ಲಿಯ ರೈತ ಕೂಡ ಉಪಭುಕ್ತನಲ್ಲ.

ನಳ: ಆದರೆ ಆತನಲ್ಲಿ ಯೋಗ್ಯತೆ ಇದೆ, ಬುದ್ಧಿ ಇದೆ, ಬಲವಿದೆ. ಸರಿ ತಾನೇ ? (ನಗುತ್ತಾನೆ) ನಾನೇಕೆ ನಗುತ್ತಿರುವೆ, ಗೊತ್ತೇನು ?

ಮಂತ್ರಿ: ನಿಮ್ಮ ಬಗೆಗೆ ಈ ಮಾತುಗಳನ್ನು ನಾನು ಹೇಳಬೇಕಾಗಿತ್ತು. ಆದರೆ ನನ್ನ ಮಂದಬುದ್ಧಿಯಿಂದಾಗಿ ಮಹಾರಾಜರು ಸ್ವತಃ ಈ ಮಾತುಗಳನ್ನು ಹೇಳಬೇಕಾಗಿ ಬಂತು.

ನಳ: ನೀನು ಹೀಗೂ ತಿಳಿಯಬಹುದು, ಈ ಭೂಮಿಯ ಒಡೆಯನಾಗಲು ಮಹಾರಾಜ ಬಹಳ ಆತುರರಾಗಿದ್ದಾರೆ.

ಮಂತ್ರಿ: ಅದು ಕೂಡ ಉಚಿತವಾಗಿದೆ, ಮಹಾರಾಜ! ತಮ್ಮ ವಯಸ್ಸಿಗೆ ಈ ಅಧಿಕಾರವಿದೆ.

ನಳ: ನನ್ನ ಎಲ್ಲ ಆತುರತೆಗೆ ಇದೇ ಕಾರಣವೇನು ?

ಮಂತ್ರಿ: ಅಲ್ಲ ಮಹಾರಾಜ! ತಮ್ಮ ಹಾಗೂ ರಾಜಕುಮಾರಿಯ ಆಪ್ತ ಸಖಿ ಕಲ್ಪನಾ ತೆಗೆದು ಕಳಿಸಿದ ಆ ಚಿತ್ರವೂ ಕಾರಣವಾಗಿರಬಹುದು.

ನಳ: ಮಂತ್ರಿ, ಕೇವಲ ಚಿತ್ರ ನೋಡಿಯೇ ನಿರ್ಣಯ ತೆಗೆದುಕೊಳ್ಳುವುದು ಉಚಿತವೇನು ?

ಮಂತ್ರಿ: ತಮ್ಮ ಸಖಿ, ಕಲ್ಪನಾ, ಮೋಸ ಹಾಗೂ ತಪ್ಪು ಮಾಡಲಾರಳು, ಮಹಾರಾಜ.

ನಳ: ಕಲ್ಪನಾಳಿಂದ ತಪ್ಪು ಆಗಬಹುದು, ಆದರೆ ಮೋಸ ಆಗಲಾರದು.

ಮಂತ್ರಿ: ಮತ್ತೆ ಇದಕ್ಕೆ ಬೇರೆ ಉಪಾಯವೇನು ?

ನಳ: (ನಕ್ಕು) ಇದರ ಉಪಾಯ ನೀವು ಹುಡುಕಿ. ಇದುವೇ ರಾಜ್ಯದ ಮಂತ್ರಿಗಳ ಕರ್ತವ್ಯ.

ಮಂತ್ರಿ: ಮಹಾರಾಜ, ಈ ಸಮಸ್ಯೆ ಬಿಡಿಸುವ ಕಾರ್ಯದಲ್ಲಿ ನಾನು ಕೇವಲ ಸಹಾಯಕ ಮಂತ್ರಿ. ಮುಖ್ಯ ಮಂತ್ರಿ, ಮಹಾರಾಜರ ಹೃದಯವೇ ಆಗಿದೆ.

ನಳ: ಸ್ವಯಂವರಕ್ಕೆ ಮೊದಲು ರಾಜಕುಮಾರಿಯನ್ನು ಏಕಾಂತದಲ್ಲಿ ಒಮ್ಮೆ ನೋಡಬೇಕೆಂದು, ನನ್ನ ಹೃದಯ ಹೇಳುತ್ತದೆ.

ಮಂತ್ರಿ: ಅಂದರೆ, ರೈತನಿಗೆ, ಮೊದಲು ಹೋಗಿ ಭೂಮಿಯನ್ನು ನೋಡ ಬೇಕಾಗಿದೆ. ಆದರೆ, ಮಹಾರಾಜ! ಈ ಮಾತು ರಾಜರುಗಳಿಗೆ ಯೋಗ್ಯವಾದುದಲ್ಲ.

ನಳ: ಏಕೆ ?

ಮಂತ್ರಿ: ರಾಜರಿಗೆ ಒಂದೇ ಭೂಮಿಯಲ್ಲಿ ಬೀಜ ಹಾಕಬೇಕಾದ ಪ್ರಮೇಯ ವೇನಿಲ್ಲ, ಒಂದರಲ್ಲಿ ಮನಸ್ಸಿಗೆ ಬರದಿದ್ದಲ್ಲಿ ಬೇರೆ ಭೂಮಿಯಲ್ಲಿ ಬೀಜವನ್ನು ಹಾಕಬಹುದಾಗಿದೆ.

ನಳ: ಆದರೆ ಯಾವ ಭೂಮಿಯಲ್ಲಿ ತನ್ನ ವ್ಯಕ್ತಿತ್ವದ ಭವನ ನಿಲ್ಲಿಸ ಬೇಕೆಂದಿರುವನೋ ಅದರ ಬಗ್ಗೆ ರಾಜನಿಗೂ ಕಾಳಜಿ ಇರುವುದು ಅವಶ್ಯವಾಗುತ್ತದೆ.

ಮಂತ್ರಿ: ಮಹಾರಾಜ, ರಾಜರುಗಳಿಗೆ ವ್ಯಕ್ತಿತ್ವದ ಅವಶ್ಯಕತೆ ಏಕೆ ಬೇಕು ?

ನಳ: (ನಕ್ಕು) ಏನು ? ರಾಜರೆಂದರೆ ಮಂತ್ರಿಗಳು ಊದುವ ವಾದ್ಯವೇನು ?

ಮಂತ್ರಿ: ಮಂತ್ರಿಗಳದಲ್ಲ ಮಹಾರಾಜ, ಪ್ರಜೆಗಳದ್ದು. ರಾಜಾ, ಪ್ರಜೆಗಳ ಭಾವನೆಗಳನ್ನು, ಉದ್ಗಾರಗಳನ್ನು ಉದ್ಘೋಷ ಮಾಡುವ ವಾದ್ಯವೇ ಆಗಿರುತ್ತಾನೆ.

ನಳ: ಹಾಗಾದರೆ, ವ್ಯಕ್ತಿತ್ವದ ಉಪಹಾರ ಬಹುಶಃ ನಮ್ಮ ರಾಜರುಗಳ ಶ್ರೇಣೀ ಕರ್ತವ್ಯವಾಗಿದೆ.

ಮಂತ್ರಿ: ಮಹಾರಾಜರು ಬಲ್ಲವರೇ ಆಗಿದ್ದಾರೆ.
(ಬಾಗಿಲ ಮೇಲೆ ಠಕ್ ಠಕ್ ಸಪ್ಪಳವಾಗುತ್ತದೆ.)

ನಳ: ಬರಬೇಕು. (ಓರ್ವ ಸಖಿಯ ಪ್ರವೇಶ.)

ಸಖಿ: ಮಹಾರಾಜ, ತಮ್ಮನ್ನು ಕಾಣಬೇಕೆಂದು ಅಪಾರ ಚೆಲುವೆಯಾದ ಹೆಣ್ಣೊಬ್ಬಳು ವಿರಾಜಮಾನಳಾಗಿದ್ದಾಳೆ.

ನಳ: (ನಕ್ಕು) ಅಪಾರ ಚೆಲುವೆಯಾದ ಹೆಣ್ಣು ?

ಸಖಿ: ಹಾಂ! ಮಹಾರಾಜ! ಈಗ ಕೆಲ ಕಾಲದ ಹಿಂದೆ ಇಲ್ಲಿಯೇ ರಾಜ-ಸಭೆಯಲ್ಲಿದ್ದ ಸಖಿಯೇ ಆಗಿರಬೇಕು.

ನಳ: ಕಲ್ಪನಾ ?

ಸಖಿ: ಹೆಸರು ಮಾತ್ರ ಈ ದಾಸಿಗೆ ಗೊತ್ತಿಲ್ಲ, ಮಹಾರಾಜ. ಆದರೆ ಆಕೆಯ ಗುರುತಾಗಿ ಈ ಉಂಗುರ ನೀಡಿದ್ದಾಳೆ.

ನಳ: (ಉಂಗುರ ನೋಡಿ) ಸರಿ, ಒಳಗೆ ಕಳಿಸು.

ಮಂತ್ರಿ: ಮಹಾರಾಜ, ನಾನು ಹೊರಗೆ ಹೋಗುವುದು ಲೇಸು!

ನಳ: ಇಲ್ಲ! ನಿಮ್ಮೆದುರಿನಲ್ಲಿಯೇ ನಾವು ಕಲ್ಪನಾಳೊಂದಿಗೆ ಮಾತನಾಡುತ್ತೇವೆ. (ಕಲ್ಪನಾಳ ಪ್ರವೇಶ)

ಕಲ್ಪನಾ: ವಂದನೆಗಳು, ಮಹಾರಾಜರಿಗೆ ಜಯವಾಗಲಿ.
(ಕಲ್ಪನಾ ಮಹಾರಾಜರ ಪಾದಕ್ಕೆ ಹಣೆ ಹಚ್ಚಿ ನಮಸ್ಕರಿಸುತ್ತಾಳೆ. ನಳ ಅವಳ ಹಣೆ ಹಿಡಿದು ಕೂಡಿಸುತ್ತಾನೆ. ಮತ್ತೆ ಅವಳನ್ನು ಆಸನದ ಮೇಲೆ ಕೂಡಲು ಹೇಳುತ್ತಾನೆ. ಅವಳು ಆಸನದತ್ತ ಹೋಗುತ್ತಾಳೆ. ಆದರೆ ಕೂಡುವುದಿಲ್ಲ. ನಳ ಕೂಡುವಂತೆ ಅವಳಿಗೆ ಒತ್ತಾಯ ಮಾಡುವುದಿಲ್ಲ. ಮಂತ್ರಿ ಕಲ್ಪನಾಳತ್ತ ನೋಡುತ್ತಾನೆ. ಅವಳು ಅವನಿಗೆ ನಮಸ್ಕರಿಸುತ್ತಾಳೆ-ತಲೆಬಾಗಿ)

ನಳ: ಹೇಗೆ ಬರೋಣವಾಯಿತು, ಸಖಿ ?

ಕಲ್ಪನಾ: ಮಹಾರಾಜರ ಪ್ರತಾಪ, ದಾಸಿ ಇಲ್ಲಿಗೆ ಬರುವ ಕಾರಣಗಳಲ್ಲಿ ಅದೂ ಒಂದು. ಮಹಾರಾಜರಿಗೆ ತಲುಪಿಸಬೇಕಾದ ಒಂದು ಸಂದೇಶವನ್ನು ತಂದಿರುವೆ. ಮಹಾರಾಜರು ಅದನ್ನು ಕೇಳುವ ಮುನ್ನ ಅನ್ಯರು ಯಾರೂ ಕೇಳಬಾರದು. ಹಾಗೆ ಮಾಡಿದರೆ ಸಂದೇಶ ಕಳಿಸಿರುವ ವ್ಯಕ್ತಿಯ ಭಾವನೆಗಳಿಗೆ ಯೋಗ್ಯ ಗೌರವ ಸಲ್ಲಿಸಿದಂತಾಗುವುದಿಲ್ಲ.

ಹೀಗೆ ಹೇಳಿದ್ದಕ್ಕಾಗಿ ಮಹಾರಾಜರು ಅನ್ಯಥಾ ಭಾವಿಸಬಾರದಾಗಿ ಪ್ರಾರ್ಥಿಸುತ್ತೇನೆ.
(ನಳ ನಗುತ್ತಾನೆ.)

**ಮಂತ್ರಿ:** ಮಹಾರಾಜ, ನಾನಂತೂ ಇಲ್ಲಿಂದ ಹೋಗಲು ಮೊದಲೇ ಅಪ್ಪಣೆ ಕೇಳಿದ್ದೆ. (ಎದ್ದು ಹೊರಟು ಹೋಗುತ್ತಾನೆ)

**ನಳ:** ಅಮಾತ್ಯರೇ, ದೂರ ಹೋಗಬೇಡಿ. ನಿಮ್ಮೊಂದಿಗೆ ಮಂತ್ರಾಲೋಚನೆ ಮಾಡಬೇಕಾದ ಅವಶ್ಯಕತೆ ಬಂದರೂ ಬಂದೀತು.

**ಮಂತ್ರಿ:** (ಹೋಗುತ್ತ) ನಾನು ಸಮೀಪದ ಸದನದಲ್ಲಿದ್ದುಕೊಂಡೇ ಮಹಾ ರಾಜರ ಅಪ್ಪಣೆಯ ಪ್ರತೀಕ್ಷೆ ಮಾಡುವೆ.

**ನಳ:** (ನಗುತ್ತ, ಕಲ್ಪನಾಳಿಗೆ) ಹಾಂ, ಸಖಿ ಈಗ ಹೇಳು ಏನದು ಸಂದೇಶ ?

**ಕಲ್ಪನಾ:** ನಾನು ಕಳುಹಿದ ಚಿತ್ರ ಮಹಾರಾಜರ ಮೇಲೆ, ಎಂಥ ಪ್ರಭಾವ ಬೀರಿದೆ ಎಂಬುದನ್ನು, ಮಹಾರಾಜರು ಮೊದಲು ಹೇಳುವ ಕೃಪೆ ಮಾಡಬೇಕು.

**ನಳ:** ಚಿತ್ರ, ಯಾವುದೋ ಅತ್ಯಂತ ಸುಂದರಿಯ ಪ್ರತಿಬಿಂಬವಾಗಿದೆ.

**ಕಲ್ಪನಾ:** ಮಹಾರಾಜ, ರಾಜಕುಮಾರಿ ಈ ಚಿತ್ರಕ್ಕಿಂತಲೂ ಅದೆಷ್ಟೋ ಪಟ್ಟು ಚೆಲುವೆಯಾಗಿದ್ದಾಳೆ. ಅಲ್ಲದೆ ಆಕೆಯ ಮನ ಮತ್ತು ಬುದ್ಧಿಯ ಅನುಪಮವಾದ ಗುಣಗಳನ್ನು ಈ ಚಿತ್ರ ಪ್ರತಿಬಿಂಬಿಸಲಾರದು.

**ನಳ:** ಕಲ್ಪನಾ, ಮನ ಮತ್ತು ಬುದ್ಧಿಯ ಅನುಪಮ ಗುಣ ರಾಜಕುಮಾರಿಯಲ್ಲಿ ಏನಿರುತ್ತವೆ ? ಸ್ತ್ರೀ ಪ್ರಕೃತಿ. ಇಂತಿರುವಾಗ ಮನ ಮತ್ತು ಬುದ್ಧಿಯ ಗುಣ ನೋಡುವುದು ಅಧಿಕ ಪ್ರಸಂಗಿತನವಲ್ಲವೇ ?

**ಕಲ್ಪನಾ:** ಹಾಗಾದರೆ, ಮಹಾರಾಜರು, ಈ ಚಿತ್ರದಲ್ಲಿ ನೋಡಿದ ಸೌಂದರ್ಯದಿಂದಲೇ ಸಂತೋಷಪಡಬೇಕು ! ಬಾಹ್ಯ ರೂಪದಲ್ಲೂ ಕೂಡ ರಾಜಕುಮಾರಿ ಈ ಚಿತ್ರಕ್ಕಿಂತ ಅದೆಷ್ಟೋ ಪಟ್ಟು ಸುಂದರಿಯಾಗಿದ್ದಾಳೆ. ಏಕೆಂದರೆ, ನನ್ನ ಚಿತ್ರಕಲೆ ಪೂರ್ಣರೂಪದಲ್ಲಿ ಯಥಾರ್ಥವಾಗಲಿಲ್ಲ. ಆದರೆ ಮಹಾರಾಜ.....

**ನಳ:** 'ಆದರೆ'ಯ ಅರ್ಥವೇನು ?

**ಕಲ್ಪನಾ:** ಮಹಾರಾಜ, ಸ್ತ್ರೀ ಪ್ರಕೃತಿಯಲ್ಲ, ಪ್ರಕೃತಿಯನ್ನು ಸ್ತ್ರೀಯೊಂದಿಗೆ ತುಲನೆ ಮಾಡಬಹುದೆಂದು ನನ್ನ ವಿನಂತಿ.

**ನಳ:** ಹೇಳಿದ್ದನ್ನು ಈ ರೀತಿ ತಿರುವು ಮುರುವು ಮಾಡಿದರೆ ಆಗುವ ಅಂತರವಾದರೂ ಏನು ?

**ಕಲ್ಪನಾ:** ಬಹಳ ಅಂತರವಿದೆ, ಮಹಾರಾಜ, ಈ ಎರಡೂ ಹೇಳಿಕೆಯಲ್ಲಿ ತಮಗೂ ಇದು ಗೊತ್ತಿಲ್ಲದಿಲ್ಲ, ತಾವು ನನ್ನ ಬಾಯಿಂದ ಕೇಳಬಯಸಿದ್ದೀರಿ, ಅಷ್ಟೆ.

**ನಳ:** ಹಾಗೆಂದೇ ತಿಳಿ.

**ಕಲ್ಪನಾ:** ಮನುಷ್ಯ ಪ್ರಕೃತಿಯಲ್ಲಿ ಮನ ಮತ್ತು ಬುದ್ಧಿಯ ಗುಣ ವಿಕಸಿತ

ಹಾಗೂ ಅಭಿವ್ಯಕ್ತಿಗೊಳಿಸಬೇಕೆಂದು ಬಯಸುತ್ತಾನೆ. ಹೆಚ್ಚೆಚ್ಚು ಬಯಸುತ್ತ ಹೋಗುತ್ತಾನೆ. ಅವನ ಮನದಲ್ಲಿ ಹೆಣ್ಣಿನ ಬಗೆಗೆ ತನ್ನಲ್ಲಿರುವ ಪ್ರೇಮ ಭಾವದ ಹಾಗೆ ಪ್ರಕೃತಿಯ ಬಗೆಗೆ ಅವನಲ್ಲಿ ಪ್ರೇಮಭಾವವಿದೆ. ಇದಕ್ಕಾಗಿಯೇ ಪ್ರಕೃತಿಯ ಸಂಬಂಧದಲ್ಲಿ ಮನುಷ್ಯನಿಗೆ ಪುರುಷನೆಂದು ಕರೆದು, ವಿಶಿಷ್ಟತೆಯನ್ನು ಕೊಡಮಾಡಲಾಗಿದೆ.

**ನಳ:** (ನಕ್ಕು) ಹಾಗಾದರೆ ನಿನ್ನ ರಾಜಕುಮಾರಿ, ಮನುಷ್ಯ ಮಾಡಬೇಕೆಂದಿರುವ ಪ್ರಕೃತಿಯ ಹಾಗೆ, ಈ ಮೊದಲೇ ಇದ್ದಾಳೆಂದು ಹಾಗಾಯ್ತು.

**ಕಲ್ಪನಾ:** ಹಾ! ಮಹಾರಾಜ! ತಾವು ರಾಜಕುಮಾರಿ ದಮಯಂತಿಯ ಚೆಲುವನ್ನು, ಈಗ ಅವರಿರುವುದಕ್ಕಿಂತ ಹೆಚ್ಚು ಸುಂದರಗೊಳಿಸುವುದನ್ನು ತಾವು ಕಲ್ಪಿಸಲೂ ಸಾಧ್ಯವಿಲ್ಲ.

**ನಳ:** ನಮ್ಮ ಸಖಿ ಕಲ್ಪನಾ, ದಮಯಂತಿಯ ದಾಸಿಯಾಗಿ ಬಿಟ್ಟಿದ್ದಾಳೆಂದು ತೋರುತ್ತದೆ.

**ಕಲ್ಪನಾ:** ಮಹಾರಾಜ, ಕಲ್ಪನಾ ರಾಜಕುಮಾರಿಯ ದಾಸಿಯಾಗಿಯೂ ತಮ್ಮ ದಾಸಿಯೇ ಆಗಿದ್ದಾಳೆ.

**ನಳ:** ಆದರೆ ಕಲ್ಪನಾ, ರಾಜಕುಮಾರಿ ದಮಯಂತಿ ನಮ್ಮ ಸಂಗಾತಿಯಾಗಿ ಇನ್ನೂ ಹೆಚ್ಚು ಚೆಲುವೆಯಾಗಲಾರಳೆಂದು ನೀನು ಹೇಗೆ ಹೇಳುವೆ ?

**ಕಲ್ಪನಾ:** ಆ ಮಾತು ಬೇರೆ, ಮಹಾರಾಜ.

**ನಳ:** ಆ ಮಾತು ಎಂದರೆ ?

**ಕಲ್ಪನಾ:** ಆ ಅವಸ್ಥೆಯಲ್ಲಿ ತಮ್ಮ ಸೌಂದರ್ಯವೂ ಆಕೆಯ ಸೌಂದರ್ಯದಲ್ಲಿ ಬೆರೆತುಕೊಳ್ಳಬಹುದಾಗಿದೆ.

**ನಳ:** ಅದು, ಆ ಅವಸ್ಥೆ ಸುಂದರಮಯವಾಗುತ್ತದೆ ತಾನೇ ?

**ಕಲ್ಪನಾ:** ಸರಿಯಾಗಿದೆ ಮಹಾರಾಜ. ಆದರೆ ಇದರಿಂದಾಗಿ ರಾಜಕುಮಾರಿಯ ಈಗಿರುವ ಸೌಂದರ್ಯವನ್ನು ಕಡೆಗಣಿಸುವಂತಿಲ್ಲ.

**ನಳ:** ಎಂದೂ ಇಲ್ಲ. ಸಂದೇಶ ಮತ್ತೇನಿದೆ ?

**ಕಲ್ಪನಾ:** ಇನ್ನೊಂದು ಸಂದೇಶವೆಂದರೆ, ರಾಜಕುಮಾರಿ ಸ್ವಯಂವರಕ್ಕಿಂತ ಮುನ್ನ ರಹಸ್ಯವಾಗಿ ತಮ್ಮನ್ನು ಕಾಣಬೇಕೆಂದು ಇಚ್ಛಿಸಿದ್ದಾಳೆ.

**ನಳ:** ವಾಹ್! ಇದು ಹೇಗೆ ಸಾಧ್ಯ ? ರಾಜಮನೆತನದ ಕಟ್ಟಳೆಯ ಹೊರಗೆ, ಅವಳ ಕೌಮಾರ್ಯ ಈ ಮಾತಿಗೆ ಒಪ್ಪಿಗೆ ಹೇಗೆ ನೀಡುತ್ತದೆ ?

**ಕಲ್ಪನಾ:** ಮಹಾರಾಜ, ಸ್ತ್ರೀ ಕೇವಲ ಪ್ರಕೃತಿ ಅಲ್ಲ. (ಮುಗುಳ್ನಗುತ್ತ) ಅವಳು ಒಳಮುಚುಗದ ಎಲೆ ಅಲ್ಲ, ಮುಟ್ಟಿದ ಕೂಡಲೇ ಮುದುಡಿ ಹೋಗಲು.

**ನಳ:** ಮುಟ್ಟುವದು ! ಏನನ್ನು ಮುಟ್ಟುವುದು ?!

**ಕಲ್ಪನಾ:** ತಮ್ಮ ಕಣ್ಣಿನ ಸ್ಪರ್ಶ, ಮಹಾರಾಜ ! ಇದಕ್ಕಿಂತ ಹೆಚ್ಚಿನ ಸ್ಪರ್ಶ ಈಗ

ರಾಜಕುಮಾರಿಯು ಕಲ್ಪನೆಯಲ್ಲೂ ಬಂದಿಲ್ಲ.

ನಳ: ತನ್ನನ್ನು ತೋರಿಸುವುದಕ್ಕಿಂತ ನನ್ನನ್ನು ನೋಡುವ ಭಾವ ಇದರಲ್ಲಿದೆ ಎಂದಂತಾಯಿತು, ಅಲ್ಲವೇ ? ನೀನು, ನನ್ನ ಚಿತ್ರ ಮಾಡಿಕೊಟ್ಟಿರ ಬೇಕಲ್ಲ !

ಕಲ್ಪನಾ: ಕೊಟ್ಟಿದ್ದೇನೆ ಮಹಾರಾಜ, ಅಷ್ಟೇ ಅಲ್ಲ ಆ ಚಿತ್ರ ನೋಡಿ ರಾಜ ಕುಮಾರಿಯು ನಯನ-ಪ್ರಾಣ ಗದ್ಗದಿತವಾಗಿತ್ತು.

ನಳ: ಮತ್ತೆ ಆಕೆ ನನ್ನನ್ನು ಸಾಕಾರ ರೂಪದಲ್ಲಿ ನೋಡಬಯಸಿದ್ದಾಳೇನು ?

ಕಲ್ಪನಾ: ಒಂದು ವೇಳೆ ಮಹಾರಾಜರು ಈ ವ್ಯಾಖ್ಯೆಯಿಂದ ಪ್ರಸನ್ನ ರಾಗುವುದಾದರೆ, ಇದನ್ನು ಒಪ್ಪಿಕೊಳ್ಳುವಲ್ಲಿ ನನಗೆ ಯಾವ ಆಪತ್ತಿಯೂ ಇಲ್ಲ.

ನಳ: ಪ್ರಸನ್ನತೆಯೇನೋ ಆಗುತ್ತದೆ. ಆದರೆ ಕೊಂಚ ಅನುಚಿತವೆಂದೂ ಅನ್ನಿಸುತ್ತದೆ, ಓರ್ವ ಸ್ತ್ರೀ, ಅವಳು ರಾಜಕುಮಾರಿ ದಮಯಂತಿಯೇ ಆಗಿರಲಿ, ನನ್ನಂಥ ದೊರೆಯನ್ನು ತನ್ನಷ್ಟಕ್ಕೇ ತಾನು ಅರ್ಪಿಸಿಕೊಳ್ಳುವ ಪೂರ್ವದಲ್ಲಿ ಪ್ರತ್ಯಕ್ಷವಾಗಿ ನೋಡಬೇಕೆಂದು ಬಯಸುವುದು. ಎಲ್ಲಕ್ಕಿಂತ ಮೊದಲು, ಇಡೀ ದೇಶದಲ್ಲಿ ಹಬ್ಬಿರುವ ತನ್ನ ಪ್ರತಾಪ ದಿಂದಲೇ ಅವಳಿಗೆ ನನ್ನ ಬಗ್ಗೆ ಸಂಪೂರ್ಣ ಶ್ರದ್ಧೆ ಉಂಟಾಗಬೇಕಿತ್ತು. ಕೊರತೆ ಎನ್ನಿಸಿದ್ದು ನಿನ್ನ ವರ್ಣನೆ, ನಿನ್ನ ಮಾತುಗಳಿಂದ ಪೂರ್ಣಗೊಳ್ಳಬೇಕಾಗಿತ್ತು. ಇದಕ್ಕಿಂತ ಇನ್ನೂ ಮುಂದೆ ಹೋಗಿ ನೀನು ನನ್ನ ಚಿತ್ರ ನಿರ್ಮಿಸಿ ಕೊಟ್ಟಿರುವೆ. ಇಷ್ಟೆಲ್ಲ ಆಗಿಯೂ ಅವಳು ಇನ್ನೂ ಸಂತುಷ್ಟಗೊಂಡಿಲ್ಲವೆಂದರೆ ಇದು ನನ್ನ ಪೌರುಷದ, ನನ್ನ ಪ್ರತಾಪದ ಅನಾದರ ಅಲ್ಲವೇನು ? (ಕೃತ್ರಿಮ ಕ್ರೋಧದಿಂದ ಮುಖವನ್ನು ಕೆಂಪಾಗಿಸಿಕೊಳ್ಳುತ್ತಾನೆ)

ಕಲ್ಪನಾ: (ಕೊಂಚ ಹೆದರಿಕೊಂಡು) ಮಹಾರಾಜ, ಕ್ರೋಧಗೊಳ್ಳದಿರಿ. ಈ ರೀತಿ ಭೇಟಿಮಾಡುವ ವಿಚಾರವನ್ನು ಬಿಟ್ಟುಬಿಡುವಂತೆ ಹೇಳುತ್ತೇನೆ. ರಾಜಕುಮಾರಿಗೆ ತನ್ನನ್ನು ತಾನು ಮಹಾರಾಜರಿಗೆ ಸಮರ್ಪಿಸಿ ಕೊಳ್ಳುವಲ್ಲಿ ಲವಲೇಶವೂ ಸಂಕೋಚವಿಲ್ಲವೆಂಬುದನ್ನು ಮಹಾ ರಾಜರು ಬಲ್ಲರು. ಸ್ವಯಂವರದ ರಚನೆ, ರಾಜ-ಮರ್ಯಾದೆಯ ಅವಶ್ಯಕತೆಯ ಅಂಗ ಮಾತ್ರ.

ನಳ: ಬೇಡವೆಂದು ಹೇಳುವ ಅವಶ್ಯಕತೆ ಇಲ್ಲ. ರಾಜಕುಮಾರಿ ನಿಃಸಂಕೋಚವಾಗಿ ನನ್ನನ್ನು ನೋಡಲಿ. ನಾನು ರಹಸ್ಯ ಭೇಟಿಗಾಗಿ ಸಿದ್ಧವಾಗಿದ್ದೇನೆ.

ಕಲ್ಪನಾ: ಆದರೆ, ಮಹಾರಾಜ, ಬಹುಶಃ ರಾಜಕುಮಾರಿಯ ಉದ್ದೇಶ, ಈ ಗುಪ್ತ ಭೇಟಿಯಲ್ಲಿ ತನ್ನನ್ನು ಪ್ರತ್ಯಕ್ಷ ತೋರಿಸಿ, ಮಹಾರಾಜರಿಂದ ನಿಶ್ಚಿತ ಹಾಗೂ ಶಾಶ್ವತವಾದ ಸ್ವೀಕೃತಿ ಪಡೆಯಬೇಕೆಂಬುದು ಆಗಿರಬಹುದು.

**ನಳ:** ನನಗೆ ಅವಳು ಸಂಪೂರ್ಣ ಸ್ವೀಕಾರ-ಎಂಬುದನ್ನು ಈ ಭೇಟಿಯಲ್ಲಿ ಅರಿಯುವುದಲ್ಲದೆ, ಭವಿಷ್ಯದಲ್ಲಿ ನಾನು ಇವಳಿಂದ ವಿಮುಖನಾಗಿ, ಬೇರೆ ಮದುವೆ ಮಾಡಿಕೊಳ್ಳದಂತೆ, ನನ್ನಿಂದ ಆಶ್ವಾಸನೆ ಪಡೆಯಬೇಕೆಂದು, ಬಯಸಿದ್ದಾಳೆಂದು ಇದರ ಅಭಿಪ್ರಾಯವೇ ?

**ಕಲ್ಪನಾ:** ದಾಸಿ ನಿರುತ್ತರಳಾಗಿದ್ದಾಳೆ. ನನ್ನ ಅನ್ಯ ಉತ್ತರದಿಂದ ದೊರೆಗಳು ಸಿಟ್ಟಾಗಬಹುದೆಂದು ಹೆದರಿದ್ದೇನೆ. ಮಹಾರಾಜರ ಆಜ್ಞೆ ಹೇಗಿದೆಯೋ, ಅದೆಲ್ಲ ರಾಜಕುಮಾರಿಗೆ ಸ್ವೀಕಾರ ಎಂದು ಇಷ್ಟೇ ಹೇಳಬಲ್ಲೆ.

(ಇದ್ದಕ್ಕಿದ್ದಂತೆ ಭಾರೀ ಸಪ್ಪಳ, ಮಾಳಿಗೆಯ ಮೇಲೆಯೇ ಸಿಡ್ಲು ಬಿದ್ದ ಹಾಗೆ. ಭಯಾನಕವಾದ ಬೆಳಕು. ಕಲ್ಪನಾ, ಭಯಭೀತಳಾಗಿ ಸದನದಿಂದ ಹೊರಗೆ ಓಡಿಹೋಗುತ್ತಾಳೆ. ಸದನದ ಎಲ್ಲ ಬಾಗಿಲುಗಳೂ ಧಡ ಧಡ ಎಂದು ಬಡಿದುಕೊಂಡು ಮುಚ್ಚಿಕೊಳ್ಳುತ್ತವೆ. ಮಾಳಿಗೆಯಿಂದ ಓರ್ವ ಅತ್ಯಂತ ಪ್ರತಾಪಿ ಪುರುಷ-ಆಕೃತಿಯ ಅವತರಣ, ಅವನೆದುರಿನಲ್ಲಿ ನಳ ಬಾಗಿ ನಮಸ್ಕರಿಸುತ್ತಾನೆ. ಅವನು ನಳನನ್ನು ಎತ್ತಿ ನಿಲ್ಲಿಸುತ್ತಾನೆ. ಇಬ್ಬರೂ ಇನ್ನೂ ನಿಂತಿರುತ್ತಾರೆ. ಅಷ್ಟರಲ್ಲಿ ಬಲಗಡೆಯ ಬಾಗಿಲದ ಹಿಂದಿನಿಂದ ಯಾರೋ ಕಟ್ ಕಟ್ ಎಂದು ಬಾರಿಸುತ್ತಾರೆ. ಬಾಗಿಲನ್ನು ಹೀಗೆ ಬಾರಿಸುವವ ನಳನ ಮಂತ್ರಿಯಾಗಿದ್ದಾನೆ; ಕಲ್ಪನಾ ಒಳಗೆ ಬಂದುದರಿಂದ ಹತ್ತಿರದ ಸದನದೊಳಕ್ಕೆ ಹೋಗಿದ್ದ.)

**ಮಂತ್ರಿ:** (ಬಾಗಿಲನ್ನು ಪರದೆಯ ಹಿಂದಿನಿಂದ ಬಾರಿಸುತ್ತ) ಮಹಾರಾಜ, ಮಹಾರಾಜ! ಸೌಖ್ಯವಾಗಿದ್ದೀರಿ ತಾನೇ ? ಮಹಾರಾಜರ ಸ್ವಾಸ್ಥ್ಯ ಚೆನ್ನಾಗಿದೆಯಲ್ಲವೇ ? (ಬಾಗಿಲನ್ನು ದೂಡುತ್ತಾನೆ ಆದರೆ ಬಾಗಿಲು ತೆಗೆಯುವುದಿಲ್ಲ)

**ನಳ:** ನಾನು ಚೆನ್ನಾಗಿಯೇ ಇದ್ದೇನೆ, ಮಂತ್ರಿಗಳೇ! ನೀವು ಯಾರೂ ಚಿಂತಿಸಬೇಡಿ. ನೀವು ಮೊದಲು ಕುಳಿತ ಸ್ಥಳದಿಂದಲೇ ನನ್ನ ಆಜ್ಞೆಗಾಗಿ ಕಾಯುತ್ತ ಇರಿ. ನಾನು ದೇವತೆಯ ಸಮ್ಮುಖದಲ್ಲಿದ್ದೇನೆ.

(ಎರಡನೆಯ ಬಾಗಿಲ ಮೇಲೂ ಇದೇ ರೀತಿಯ ಕಟ್ ಕಟ್ ಸಪ್ಪಳ. ಈಕೆ, ಕಲ್ಪನಾ.)

**ಕಲ್ಪನಾ:** (ಪರದೆಯ ಹಿಂದಿನಿಂದ ಬಾಗಿಲು ಬಡಿಯುತ್ತ) ಮಹಾರಾಜ, ಕ್ಷಮಿಸಿ, ಆ ಭಾರೀ ಸಪ್ಪಳಕ್ಕೆ ಹೆದರಿ ನಾನು ತಮ್ಮ ಸೇವೆಯಲ್ಲಿದ್ದವಳು ಹೊರಗೆ ಓಡಿ ಬಂದೆ. ತಾವು ಸೌಖ್ಯದಿಂದ ಇದ್ದೀರಿ ತಾನೇ ? ಮಹಾರಾಜ, ಬಾಗಿಲು ತೆರೆದರೆ ನಾನು ಮತ್ತೆ ತಮ್ಮ ಸೇವೆಯಲ್ಲಿ ಉಪಸ್ಥಿತಳಾಗುತ್ತೇನೆ.

**ನಳ:** ಚಿಂತಿಸದಿರು, ಕಲ್ಪನಾ. ನಾನು ಕುಶಲವಾಗಿದ್ದೇನೆ. ದೇವತೆಯ ಸಮ್ಮುಖದಲ್ಲಿದ್ದೇನೆ. ನೀನು ಈಗ ಎಲ್ಲಿರುವೆಯೋ ಅಲ್ಲಿಯೇ ಇದ್ದು

ನನ್ನ ಆಜ್ಞೆಗಾಗಿ ಪ್ರತೀಕ್ಷೆ ಮಾಡು. (ದೇವತೆಯೊಂದಿಗೆ) ಏನು ಆಜ್ಞೆ ದೇವ ? ದರ್ಶನ ನೀಡಿದ್ದೀರಿ, ನಾನು ಪರಮ ಭಾಗ್ಯಶಾಲಿ.
(ಈ ದೇವತೆ, ಮಾಳಿಗೆಯಿಂದ ಆ ಭಾರೀ ಸಪ್ಪಳ ಹಾಗೂ ಬೆಳಕಿನಿಂದ ಇಳಿದಾತ ಇಂದ್ರ, ಸಿಡಿಲು ಹಾಗೂ ಮಳೆಯ ದೇವತೆ !)

ಇಂದ್ರ: ರಾಜಾ ನಳ, ನಾನು ಇಂದ್ರ.

ನಳ: ನಮಸ್ಕಾರ, ದೇವ, ನಮ್ಮ ಭಾಗ್ಯ, ತಮ್ಮ ಪುರವನ್ನು ಬಿಟ್ಟು ಈ ಮರ್ತ್ಯ ಲೋಕದಲ್ಲಿ ಬರುವ ತೊಂದರೆ ತೆಗೆದುಕೊಂಡಿರಿ, ನಮ್ಮ ಉದ್ಧಾರಕ್ಕಾಗಿ. ದಯಮಾಡಿಸಿ, ಈ ಆಸನದಲ್ಲಿ ಆಸೀನರಾಗಿ.

ಇಂದ್ರ: ಅಷ್ಟು ಸಮಯವಿಲ್ಲ, ಕೆಲ ಕ್ಷಣ ನಿನ್ನೊಂದಿಗೆ ಮಾತನಾಡುವುದಿದೆ; ನಿಂತೇ ಮಾತಾಡೋಣ !

ನಳ: ದೇವನಿಚ್ಛೆ ! ಅಪ್ಪಣೆಯಾಗಲಿ, ಅದಕ್ಕೂ ಮೊದಲು ಸೋಮರಸ ಪಾನ....! (ಹತ್ತಿರದ ಚೌಕಿಯ ಮೇಲಿದ್ದ ಸೋಮರಸದಿಂದ ತುಂಬಿದ್ದ ಪಾತ್ರೆಯನ್ನು ಇಂದ್ರನ ಮುಂದೆ ಹಿಡಿಯುತ್ತಾನೆ. ಇಂದ್ರ ಪಾತ್ರೆಯನ್ನು ತೆಗೆದುಕೊಂಡು ಮತ್ತೆ ಚೌಕಿಯ ಮೇಲೆ ಇರಿಸುತ್ತಾನೆ.)

ಇಂದ್ರ: ಬೇಡ, ನನಗೆ ಯಾವುದೇ ಜಲಪಾನದ ಅವಶ್ಯಕತೆ ಇಲ್ಲ.

ನಳ: ದೇವತೆಗಳ ಅವಶ್ಯಕತೆಯನ್ನು ಪೂರೈಸಲು ನಾವು ಯಾರು ? ತಾವು ಈ ಪಾತ್ರೆಯನ್ನು ಬಾಯಿಗೆ ಹಚ್ಚಿಕೊಂಡಿದ್ದರೂ ನಮ್ಮ ಮಾನವಿರುತ್ತಿತ್ತು.

ಇಂದ್ರ: ಆಗಲಿ, ಮರುಳುವ ಕಾಲದಲ್ಲಿ ಬಹುಶಃ ಎರಡು ಗುಟುಕು ಕುಡಿಯುತ್ತೇನೆ.

ನಳ: ಅಷ್ಟೇ ಸಾಕು, ಅದುವೇ ನಮ್ಮ ಭಾಗ್ಯ ! ಮತ್ತೆ, ಏನು, ಅಪ್ಪಣೆಯಾಗಬೇಕು.

ಇಂದ್ರ: ನಳ, ದಮಯಂತಿಯ ಮದುವೆಗಾಗಿ ಸ್ವಯಂವರದ ವ್ಯವಸ್ಥೆಯಾಗಲಿದೆ ಎಂದು ಕೇಳಿದ್ದೇವೆ, ಅದರಲ್ಲಿ ಅವಳು ನಿನ್ನನ್ನು ವರನನ್ನಾಗಿ ಆರಿಸಲಿದ್ದಾಳೆಂದೂ ಕೇಳಿದ್ದೇವೆ.

ನಳ: ದೇವಜ್ಞಾನ ವಾಸ್ತವಿಕವಾಗಿಯೇ ಇರುತ್ತದೆ. ಇದು ನನ್ನ ಪರಮ ಭಾಗ್ಯ. ನಾನು ದೇವನಿಂದ ಈ ಆಯ್ಕೆಗಾಗಿ, ಶುಭಾಶಯ ಹಾಗೂ ಆಶೀರ್ವಾದ ಬೇಡುತ್ತೇನೆ.

ಇಂದ್ರ: ಆದರೆ ನಾನು ಈ ಆಯ್ಕೆಗಾಗಿ ಆಶೀರ್ವಾದ ನೀಡಲು ಬಂದಿಲ್ಲ.

ನಳ: (ಎದ್ದು) ಅಂದರೆ ! ಹಾಗಾದರೆ, ದೇವ, ತಮ್ಮ ಆಜ್ಞೆಯಾದರೂ ಏನು ?

ಇಂದ್ರ: ನೀನು ಆ ಸ್ವಯಂವರದಲ್ಲಿ ಹೋಗಬೇಡ !

ನಳ: (ಆತುರತೆಯಿಂದ) ಆದರೆ, ನಾನು ಅಲ್ಲಿ ಹೋಗದೆ ಇರುವುದು ರಾಜಾ ಭೀಮಸೇನನ ಅನಾದರವಾಗುತ್ತದೆ. ನಾನು ಸ್ವಯಂವರದಲ್ಲಿ ಹೋಗಬಾರದೆಂದು, ಯಾವ ಕಾರಣಕ್ಕಾಗಿ ಆಜ್ಞೆ ಮಾಡುತ್ತೀರಿ ?

ಇಂದ್ರ: ನೀನು, ದಮಯಂತಿಯನ್ನು ವಿವಾಹವಾಗಲು ಯೋಗ್ಯನಿಲ್ಲ.

ನಳ: (ಕೊಂಚ ವಿಚಾರಕ್ಕೊಳಗಾಗಿ) ಭಾರತ ವರ್ಷದಲ್ಲಿ ಅವಳಿಗೆ ಇನ್ನಾರು ಯೋಗ್ಯ ಪುರುಷನಿದ್ದಾನೆ ?

ಇಂದ್ರ: ಯಾವ ಪುರುಷನೂ ದಮಯಂತಿಯನ್ನು ವರಿಸಲು ಯೋಗ್ಯನಾಗಿಲ್ಲ.

ನಳ: ನಾನು, ದೇವನ ಆಶಯ ತಿಳಿಯಲಿಲ್ಲ.

ಇಂದ್ರ: ನನ್ನ ಆಶಯ, ದಮಯಂತಿ ನನಗೆ ತಕ್ಕವಳು.

ನಳ: (ಅಚ್ಚರಿಯಿಂದ) ಏನಿದು, ದೇವ, ದಮಯಂತಿ ತಮಗೆ, ತಕ್ಕವಳೇ ?

ಇಂದ್ರ: ನನ್ನ ಶಬ್ದ ಸ್ಪಷ್ಟವಾಗಿದೆ.

ನಳ: ಆದರೆ, ದೇವ, ತಮ್ಮ ದೇವಪುರಿಯಲ್ಲಿ ಸ್ತ್ರೀ-ರೂಪದ ಕೊರತೆ ಎಲ್ಲಿ ? ಹೀಗಿರುವಾಗ ತಾವು ಮರ್ತ್ಯಲೋಕದ ಮೇಲೆ ಏಕೆ ದೃಷ್ಟಿ ಹಾಕಿದಿರಿ ?

ಇಂದ್ರ: ದೇವ-ಲೋಕವೂ ನಮ್ಮದು, ಅದರಂತೆ ಮರ್ತ್ಯ-ಲೋಕವೂ ನಮ್ಮದೇ !

ನಳ: ಆದರೆ ಮರ್ತ್ಯ-ಲೋಕದ ಸುಖವನ್ನು ಮನುಷ್ಯ ಜೀವಿಗಳಿಗೆ ತಾವು ಬಿಟ್ಟುಕೊಟ್ಟಿದ್ದೀರಿ.

ಇಂದ್ರ: ಇದು ನಮ್ಮ ಇಚ್ಛೆಯ ಮೇಲೆ ನಿರ್ಭರವಾಗಿದೆ. ನಾವು ಬಯಸಿದಾಗ, ಮನುಷ್ಯ ಜೀವಿಗಳಿಗೆ ದಾನಮಾಡಿದ ಸುಖವನ್ನು ಮರಳಿ ಪಡೆಯುತ್ತೇವೆ.

ನಳ: (ವ್ಯಾಕುಲನಾಗಿ) ದೇವ, ನಾನು ಇದನ್ನೇನು ಕೇಳುತ್ತಿದ್ದೇನೆ ? ದೇವ, ದಮಯಂತಿ ಇಲ್ಲದೆ ನಾನು ಜೀವಿಸಲಾರೆ, ದೇವ, ಒಂದು ವೇಳೆ ದಮಯಂತಿ ನಿಮಗೇ ಯೋಗ್ಯಳೆಂದು ಅನ್ನಿಸಿದ್ದರೆ, ಅವಳನ್ನು ಮರ್ತ್ಯಲೋಕಕ್ಕೇ ಕಳಿಸಬಾರದಾಗಿತ್ತು. ದೇವ, ದಯದೋರಿ !

ಇಂದ್ರ: (ನಕ್ಕು) ಯಾರ ಮೇಲೆ ದಯೆದೋರಲಿ ? ನಿನ್ನ ಮೇಲೆಯೋ ಅಥವಾ ದೇವತೆಗಳ ಮೇಲೆಯೋ ?

ನಳ: ಇನ್ನುಳಿದ ದೇವತೆಗಳೆಂದರೆ ? ಅಭಿಪ್ರಾಯ ತಿಳಿಯದಾದ.

ಇಂದ್ರ: ದಮಯಂತಿಗಾಗಿ ಕಂಪನ ಕೇವಲ ನನ್ನ ಹೃದಯದಲ್ಲಿ ಮಾತ್ರವಿಲ್ಲ, ಪವನ ದೇವ, ಅಗ್ನಿ ದೇವ, ಜಲದೇವ ಕೂಡ ಅವಳಿಗಾಗಿ ವ್ಯಾಕುಲಗೊಂಡಿದ್ದಾರೆ.

ನಳ: ಪವನ, ಅಗ್ನಿ, ಜಲ ?

ಇಂದ್ರ: ಹಾಂ ! ನಾವು ನಾಲ್ಕು ಮಂದಿ, ಸ್ವಯಂವರದಲ್ಲಿ ಹೋಗುವುದೆಂದು ನಿರ್ಣಯಿಸಿದ್ದೇವೆ. ದಮಯಂತಿ ಯಾರನ್ನು ಬೇಕಾದರೂ ಒಪ್ಪಿಕೊಳ್ಳಲಿ, ಉಳಿದವರಿಗೆ ಅದರಿಂದ ಯಾವ ಆತಂಕವೂ ಇಲ್ಲ. ಆದರೆ ನಿನ್ನನ್ನು ದಮಯಂತಿಗೆ ಅಯೋಗ್ಯನೆಂದು ತಿಳಿದು ಸ್ವಯಂವರದಲ್ಲಿ ಭಾಗವಹಿಸಬೇಡವೆಂದು ಹೇಳುತ್ತೇನೆ ಹಾಗೂ ಭಾಗವಹಿಸದಂತೆ ತಡೆಯುತ್ತೇನೆ.

ನಳ: ದೇವ, ನಾನು ದಮಯಂತಿಗೆ ಯೋಗ್ಯನಾಗಿರದಿದ್ದರೆ ಅವಳು ನನ್ನನ್ನು,

ತನ್ನ ವರನೆಂದು ಆರಿಸದಿರಲಿ.

**ಇಂದ್ರ:** ದಮಯಂತಿಗೆ ಅಷ್ಟು ತಿಳುವಳಿಕೆ ಇಲ್ಲ. ಅವಳು ಪ್ರಕೃತಿ, ಅವಳು ಅಜ್ಞಾನಿಯಾಗಿದ್ದಾಳೆ.

**ನಳ:** ಆದರೆ ಭಗವಾನ್, ತಾವು ಅವಳಲ್ಲಿ ಜ್ಞಾನ ಹುಟ್ಟಿಸಬಹುದಲ್ಲ.

**ಇಂದ್ರ:** ನಾವು ಏನು ಮಾಡಬಲ್ಲೆವು ಎಂಬುದು ನಮಗೆ ಗೊತ್ತಿದೆ, ಇದು ನಿನ್ನ ಸಮಸ್ಯೆಯಲ್ಲ.

**ನಳ:** ಇದು ನನ್ನ ಸಮಸ್ಯೆ ಅಲ್ಲವೆ ?

**ಇಂದ್ರ:** ದೇವತೆ ಏನು ಮಾಡಬಲ್ಲ ಹಾಗೂ ಏನು ಮಾಡಲಾರ ಎಂಬುದನ್ನು ನೀನು ಅರಿಯಬೇಕು !

**ನಳ:** (ಪೌರುಷದಿಂದ ತಪ್ತನಾಗಿ) ಇಲ್ಲ, ಇದು ನನ್ನ ಸಮಸ್ಯೆಯಾಗಿದೆ. (ಎತ್ತರದ ದನಿಯಲ್ಲಿ) ದೇವ, ಏನು ಮಾಡುತ್ತಾನೆಂಬುದನ್ನು ನಾನು ತಿಳಿದುಕೊಂಡಿದ್ದೇನೆ, ಏನು ಮಾಡುವುದಿಲ್ಲವೆಂಬುದನ್ನೂ ಅರಿತು ಕೊಂಡಿದ್ದೇನೆ. ದೇವತೆ, ಪ್ರಕೃತಿಯಲ್ಲಿ ಬುದ್ಧಿ ಹುಟ್ಟಿಸಲಾರದು.

**ಇಂದ್ರ:** ನಿನ್ನ ಈ ಮಾತುಗಳು, ದೇವತೆಗಳ ಅಪಮಾನ ಮಾಡುತ್ತಲಿವೆ.

**ನಳ:** (ಅತ್ತ ಧ್ಯಾನ ನೀಡದೆ, ತನ್ನದರಲ್ಲಿಯೇ ತಾನು) ದೇವತೆಗಳು ಏನು ಮಾಡಲಾರರು ಎಂಬುದನ್ನು ನಾನು ಅರಿತುಕೊಂಡಿದ್ದೇನೆ. ದೇವತೆ, ಪ್ರಕೃತಿಯ ಮನದಲ್ಲಿ ಬುದ್ಧಿಯನ್ನು ಉತ್ಪನ್ನ ಮಾಡಲಾರರು. ದೇವತೆ, ಪ್ರಕೃತಿಯಿಂದ ತನ್ನ ಇಚ್ಛೆಯಂತೆ ಏನನ್ನೂ ಮಾಡಿಸಲಾರ.

**ಇಂದ್ರ:** ಬಾಯಿಮುಚ್ಚು, ಇಲ್ಲದಿದ್ದರೆ ದೇವತೆಯ ಶಾಪಕ್ಕೆ ಗುರಿಯಾಗುವೆ.

**ನಳ:** ನನಗೆ ದೇವತೆಯ ಶಾಪ ತಟ್ಟಿ ಆಗಿದೆ. ದೇವ, ದಮಯಂತಿ ನನ್ನವಳಾಗುವುದರಿಂದ ತಡೆ ಒಡಿದಿದ್ದೀರಿ. ಒಂದು ವೇಳೆ ದೇವತೆ, ಪ್ರಕೃತಿಯಿಂದ ತನ್ನ ಇಚ್ಛೆಯಂತೆ ಏನನ್ನೂ ಮಾಡಿಸಲಾರನಾದರೆ, ಮನುಷ್ಯನೂ ದೇವತೆಯ ಆಜ್ಞೆಯನ್ನು ಉಲ್ಲಂಘಿಸಬಹುದಾಗಿದೆ.

**ಇಂದ್ರ:** ಒಂದು ವೇಳೆ, ಇನ್ನೂ ಹೆಚ್ಚು ಮಾತನಾಡಿದೆಯಾದರೆ ನಾನು ಶಾಪ ಕೊಡುತ್ತೇನೆ.

**ನಳ:** (ಎತ್ತರದ ದನಿಯಲ್ಲಿ) ನಾನು ಶಾಪಕ್ಕೆ ಹೆದರುವುದಿಲ್ಲ, ನನಗೆ ಇನ್ನೂ ಏನು ಶಾಪ ಕೊಡುವುದಿದೆ ? ದೇವತೆ, ಪ್ರಕೃತಿಯ ಎದುರಿನಲ್ಲಿ ವಿವಶನಾಗಿದ್ದಾನೆ. ಮನುಷ್ಯರಾದ ನಾವೋ ಪ್ರಾರ್ಥನೆ ಸಲ್ಲಿಸಿ, ಹಣೆ ತಿಕ್ಕಿ ದಣಿದು ಹೋಗುತ್ತೇವೆ, ಆದರೂ ನಮ್ಮ ಇಚ್ಛೆ ಪೂರ್ಣಗೊಳ್ಳುವುದಿಲ್ಲ. ನಾವು ದೇವತೆಗಳಿಂದ ಹಸಿರಿಗಾಗಿ ಬೇಡುತ್ತೇವೆ, ಬರ ಬೀಳುತ್ತದೆ. ಮಳೆಗಾಗಿ ಬೇಡುತ್ತೇವೆ, ಭೂಮಿ ಒಣಗುತ್ತದೆ. ಮಗನಿಗಾಗಿ ಪ್ರಾರ್ಥಿಸುತ್ತೇವೆ, ಮಗಳು ಆಗುತ್ತಾಳೆ. ಮಗಳಿಗಾಗಿ ಪ್ರಾರ್ಥಿಸಿದರೆ, ಏನೊಂದೂ ಆಗುವುದಿಲ್ಲ. ನಾನು ಅರಿತಿದ್ದೇನೆ, ನಾನು ಅರಿತಿದ್ದೇನೆ, ದೇವತೆ, ಪ್ರಕೃತಿಯಿಂದ ತನ್ನ ಇಚ್ಛೆಯನ್ನು ಪೂರೈಸಿಕೊಳ್ಳಲಾರ. ಇದಕ್ಕಾಗಿಯೇ ಮನುಷ್ಯರಾದ ನಮ್ಮ

ಪ್ರಾರ್ಥನೆಗಳು ಎಂದೂ ಪೂರ್ಣಗೊಳ್ಳುವುದಿಲ್ಲ.

**ಇಂದ್ರ:** (ಒಂದು ವಜ್ರದ ಕಾಠಿಣ್ಯ ಹಾಗೂ ಹೊಳಪಿನ ರೀತಿಯಲ್ಲಿ) ರಾಜಾ ನಳ, ಪ್ರಜ್ಞೆ ತಪ್ಪಬೇಡ, ದೇವ-ಆಜ್ಞೆಯ ಅವಹೇಳನದ ಸಾಹಸ ಮಾಡಬೇಡ.

**ನಳ:** (ಅಂಜುತ್ತ) ಹಾಂ! ದೇವ, ನನಗೆ ಗೊತ್ತಿದೆ ನಿಮ್ಮೆದುರಿನಲ್ಲಿ ನಾನು ಬಲಹೀನ. ನೀವು ನನ್ನ ಪ್ರಾರ್ಥನೆಗಳನ್ನು ಸ್ವೀಕಾರ ಮಾಡಿದಿರೋ ಇಲ್ಲವೋ, ನಾನು ನಿಮ್ಮೆದುರಿನಲ್ಲಿ ತುಚ್ಛ. ನಾನು ನಿಮ್ಮ ಶಾಪಕ್ಕೆ ಹೆದರುತ್ತೇನೆ. ನಿಮ್ಮ ಗರ್ಜನೆಗೆ ಹೆದರುತ್ತೇನೆ. ನಿಮ್ಮ ಪ್ರಕಾಶಕ್ಕೆ ಹೆದರುತ್ತೇನೆ, ನಾನು ಸಿಡಿಲಿಗೆ, ಮಿಂಚಿಗೆ ಹೆದರುತ್ತೇನೆ. ನಿಮ್ಮ ಆಜ್ಞೆಯನ್ನು ಮನ್ನಿಸದೆ ನನಗೆ ಬೇರೆ ಗತಿಯಿಲ್ಲ.

**ಇಂದ್ರ:** ಸರಿ ಹಾಗಾದರೆ, ನನ್ನ ಆಜ್ಞೆಯನ್ನು ಒಪ್ಪು.

**ನಳ:** (ಅದೇ ರೀತಿಯಲ್ಲಿ) ನಾನು ಬೆಂಕಿಗೆ ಹೆದರುತ್ತೇನೆ, ಅದು ಅರಣ್ಯವನ್ನು ಸುಡುತ್ತದೆ, ಹೊಲವನ್ನು ಸುಡುತ್ತದೆ, ಮನುಷ್ಯ ಮಾಡಿದ ಮನೆಗಳನ್ನು ಸುಡುತ್ತದೆ.

**ಇಂದ್ರ:** ಹಾಂ, ಅದೇ ಅಗ್ನಿಯ ದೇವತೆ, ನೀನು ದಮಯಂತಿಯ ಸ್ವಯಂವರದಲ್ಲಿ ಹೋಗಬಾರದೆಂದು ಬಯಸುತ್ತದೆ.

**ನಳ:** (ಕೇಳಿಯೂ ಕೇಳದವರಂತೆ) ನಾನು ಬಿರುಗಾಳಿಗೆ ಹೆದರುತ್ತೇನೆ. ಚಂಡಮಾರುತಕ್ಕೆ ಹೆದರುತ್ತೇನೆ, ಇದು ನನ್ನ ರಾಜ್ಯದಲ್ಲಿ ವನದಲ್ಲಿರುವ ವೃಕ್ಷಗಳನ್ನು ಉರುಳಿಸುತ್ತದೆ, ನನ್ನ ರಾಜ್ಯದ ತೋಟದಲ್ಲಿ ಪಕ್ವವಾಗುವ ಮುನ್ನವೇ ಹಣ್ಣುಗಳನ್ನು ಸೂರೆಮಾಡುತ್ತದೆ, ನನ್ನ ರೈತರ ಹೊಲಗಳಲ್ಲಿ ಹೂಗಳನ್ನು ಉದುರಿಸಿ ಅದರಲ್ಲಿ ಕಾಳು ಆಗದಂತೆ ಮಾಡುತ್ತದೆ.

**ಇಂದ್ರ:** ಹಾಂ, ಅದೇ ಚಂಡಮಾರುತ, ಬಿರುಗಾಳಿಯ ದೇವತೆ, ಪವನ, ದಮಯಂತಿಯ ಸ್ವಯಂವರದಲ್ಲಿ ಹೋಗಬೇಡವೆಂದು ನಿನಗೆ ಆಜ್ಞೆ ನೀಡುತ್ತಲಿದೆ.

**ನಳ:** (ಅದೇ ಸ್ವರದಲ್ಲಿ) ನಾನು ಮಹಾಪೂರಕ್ಕೆ ಹೆದರುತ್ತೇನೆ, ನಾನು ನೀರಿನ ಅವ್ಯಾಹತ ಪ್ರವಾಹಕ್ಕೆ ಹೆದರುತ್ತೇನೆ, ಇದು ನನ್ನ ರೈತರ ಹೊಲಗಳನ್ನು ಹಾಳುಮಾಡುತ್ತದೆ, ನನ್ನ ಪ್ರಜೆಗಳ ಮನೆಗಳನ್ನು, ಪಟ್ಟಣಗಳನ್ನು ಮುಳುಗಿಸಿ ಹಾಳು ಮಾಡುತ್ತದೆ, ನನ್ನ ಪ್ರಜೆಗಳ ಗಂಡು ಮಕ್ಕಳನ್ನು-ಹೆಣ್ಣು ಮಕ್ಕಳನ್ನು, ಅವರು ಸ್ನಾನ ಮಾಡುತ್ತಿರುವಾಗ, ಆಡುತ್ತಿರುವಾಗ-ಮುಳುಗಿಸಿ ಉಸಿರುಗಟ್ಟಿಸಿ ಕೊಲ್ಲುತ್ತದೆ.

**ಇಂದ್ರ:** ಹಾಂ, ಅದೇ ಮಹಾಪೂರದ ದೇವತೆ, ಜಲ, ದಮಯಂತಿಯ ಸ್ವಯಂವರದಲ್ಲಿ ಹೋಗಬೇಡವೆಂದು ನಿನಗೆ ಆಜ್ಞೆ ನೀಡುತ್ತಲಿದೆ.

**ನಳ:** ನಾನು ದೇವತೆಗಳಿಗೆ ಹೆದರುತ್ತೇನೆ. ನಾನು ದಮಯಂತಿಯ ಸ್ವಯಂವರದಲ್ಲಿ, ಹೋಗಬಾರದೆಂದು ದೇವತೆಗಳ ಆಜ್ಞೆಯಾದರೆ

ನಾನು ಹೋಗುವುದಿಲ್ಲ. ಆದರೆ, ದಮಯಂತಿ ಯಾವುದೇ ದೇವತೆಯನ್ನೂ ಆರಿಸಿಕೊಳ್ಳದೆ ಹೋದರೆ ? ದಮಯಂತಿ ಒಂದು ವೇಳೆ ಪ್ರಕೃತಿಯಾಗಿದ್ದರೆ, ಅವಳು ದೇವತೆಗಳ ಇಚ್ಛೆಯನ್ನು ಪೂರ್ಣಗೊಳಿಸಲು ನಿರಾಕರಿಸಬಹುದಾಗಿದೆ.

ಇಂದ್ರ: (ಕೆಲ ಕಾಲ ಯೋಚನೆಯಲ್ಲಿ ಮುಳುಗಿ) ಇವನ ಈ ಮಾತು ಸರಿಯಾಗಿದೆ (ಮತ್ತೆ ಸ್ವಲ್ಪ ಯೋಚಿಸಿ) ರಾಜಾ ನಳ, ದಮಯಂತಿಯ ಸ್ವಯಂವರದಲ್ಲಿ ಹೋಗಬಾರದೆಂಬ ಆಜ್ಞೆಯೂ ನಿನಗಿಲ್ಲ.

ನಳ: (ದುಗುಡದೊಂದಿಗೆ) ಹಾಗಾದರೆ ದೇವ, ಏನು ಮಾಡಲಿ ? ಹೋಗಲಿಕ್ಕೂ ಆಜ್ಞೆ ಇಲ್ಲ, ಹೋಗದೆ ಇರಲಿಕ್ಕೂ ಆಜ್ಞೆ ಇಲ್ಲ.

ಇಂದ್ರ: ನೀನು ಸ್ವಯಂವರದಲ್ಲಿ ಹೋಗಬೇಕು, ಅವಶ್ಯವಾಗಿ ಹೋಗಬೇಕು. ಮಹಾರಾಜ ಭೀಮಸೇನನ ಅನಾದರವಾಗಬೇಕೆಂದು ನಾವು ಬಯಸುವುದಿಲ್ಲ. ಆದರೆ ಇದು ನಿಜ ತಾನೆ, ಸ್ವಯಂವರಕ್ಕಿಂತ ಮೊದಲೇ ನೀನು ರಹಸ್ಯವಾಗಿ ದಮಯಂತಿಯನ್ನು ಭೇಟಿಮಾಡಲು ಹೊರಟಿರುವುದು ?

ನಳ: ದೇವ ನೀವು ಏನು ಹೇಳುತ್ತಿರುವಿರೋ ಅದು ಸತ್ಯವಾಗಿದೆ.

ಇಂದ್ರ: ಆ ಭೇಟಿಯಲ್ಲಿ ನೀನು ಇಂಥ ರೂಪವನ್ನು ಧರಿಸು, ಅದನ್ನು ನೋಡಿದ ಆಕೆ ನಿನ್ನನ್ನು ತಿರಸ್ಕರಿಸಿರಬೇಕು.

ನಳ: ದೇವ, ಇದು ತುಂಬ ಕಠೋರ ಆಜ್ಞೆ. ಅವಳು ನನ್ನನ್ನು ತಿರಸ್ಕರಿಸುವಂಥ ಯಾವ ರೂಪವನ್ನು ಧರಿಸಲಿ, ಅದೂ ನಿಷ್ಫಲ ಆಗಲಿ.

ಇಂದ್ರ: ಸರಿ ಹಾಗಾದರೆ, ಹೀಗೆ ಬೇಡ. ನಿನ್ನನ್ನು ಹೀನ ಮಾಡಿ ನಾವು ಪ್ರಸನ್ನರಾಗಲಾರೆವು. ನೀನು ರಹಸ್ಯ ಭೇಟಿಯಲ್ಲಿ, ಅವಳೇ ನಿನಗೆ ಒಪ್ಪಿಗೆ ಇಲ್ಲವೆಂದು ಹೇಳಿಬಿಡು. ಅಲ್ಲದೆ, ಕೇಳಿದಷ್ಟು ನೀನು ಸುಂದರಳಾಗಿಲ್ಲವೆಂದೂ ಹೇಳು.

ನಳ: ದೇವ, ತಾವು ಸ್ವತಃ ಸರ್ವಜ್ಞರಿದ್ದೀರಿ, ಪ್ರೇಮದಲ್ಲಿ ಬಂಧಿತವಾದ ಆತ್ಮಗಳು ಈ ರೀತಿಯಾಗಿ ವರ್ತಿಸಲಾರವು.

ಇಂದ್ರ: ಈ ರೀತಿಯಾಗಿಯೂ ಸರಿ ಹೋಗದೆ ಹೋದರೆ, ನೀನು, ಒಂದು ಘೋರವಾದ ಶಾಪಕ್ಕೆ ಗುರಿಯಾಗಿರುವುದಾಗಿ ಅವಳಿಗೆ ಹೇಳು ಹಾಗೂ ಅದರ ಪರಿಹಾರಕ್ಕೆ ಅಲೌಕಿಕವಾದ ತಪಸ್ಸು ಅಥವಾ ಬಲಿದಾನದಿಂದ ದೇವತೆಯನ್ನು ಒಲಿಸಿಕೊಳ್ಳಬೇಕೆಂದು ಹೇಳು, ಅದಕ್ಕಾಗಿ ಅಲೌಕಿಕ ಬಲಿದಾನ ನೀಡುವುದೆಂದರೆ ಸ್ವಯಂವರದಲ್ಲಿ ದಮಯಂತಿ ನಿನ್ನನ್ನು ಬಿಟ್ಟು ದೇವತೆಯನ್ನು ಒರಿಸುವುದಾಗಿದೆ. ಇದಕ್ಕೆ ನೀನು ದಮಯಂತಿಯನ್ನು ಒಪ್ಪಿಸಬೇಕು, ಅದೂ ಅಲ್ಲದೆ ನಿನ್ನ ಬಗ್ಗೆ ಅವಳಲ್ಲಿರುವ ಪ್ರೇಮ ಹಾಗೂ ಸದ್ಭಾವನೆಯ ಕರ್ತವ್ಯವೂ ಆಗಿದೆ. ಹೀಗೆ ಮಾಡಿದರೆ ಮಾತ್ರ ನಿನ್ನ ಮೇಲಿನ ಶಾಪ ಕಳೆಯುವುದಾಗಿಯೂ

ಅವಳಿಗೆ ಹೇಳು.

**ನಳ:** ದೇವ! ದಯೆದೋರು! ಇಂಥ ಘೋರ ತಪಸ್ಸನ್ನು ನನ್ನಿಂದಾಗಲಿ ಅಥವಾ ದಮಯಂತಿಯಿಂದಾಗಲಿ ಮಾಡಿಸಬೇಡಿ. ದೇವ, ಒಂದು ವೇಳೆ ತಮಗೆ ದಮಯಂತಿಯಲ್ಲಿ ಅನುರಾಗವಿದ್ದಲ್ಲಿ ಅವಳನ್ನು ಪಡೆಯಲು ಬೇರೆ ಉಪಾಯ ಯೋಚಿಸಿ.

**ಇಂದ್ರ:** (ಹೆದರುತ್ತ) ಹಾಗಾದರೆ ನೀನು, ಇದಾವುದಕ್ಕೂ ಸಿದ್ಧನಿಲ್ಲ, ಅಲ್ಲವೇ ?

**ನಳ:** ನಾನು ದೇವತೆಯ ಆಜ್ಞೆಯನ್ನು ಅದು ಹೇಗೆ ಮೀರಬಲ್ಲೆ ? ಆದರೆ ನಾನು ದಮಯಂತಿಗೆ ದ್ರೋಹವನ್ನೂ ಮಾಡಲಾರೆ.

**ಇಂದ್ರ:** ನೀನು ಇದಕ್ಕೆ ದಮಯಂತಿಯೊಂದಿಗೆ ದ್ರೋಹ ಬಗೆದಂತೆ ಎಂದು ಭಾವಿಸುವೆಯಾ ?

**ನಳ:** ಹಾಂ, ದೇವ! ನಾನು, ಇದು ದಮಯಂತಿಗೆ ದ್ರೋಹವೆಂದೇ ತಿಳಿಯುವೆ.

**ಇಂದ್ರ:** ನೀನು ಈಗಾಗಲೇ ದಮಯಂತಿ ನಿನ್ನವಳಾಗಿಬಿಟ್ಟಿದ್ದಾಳೆಂದು ತಿಳಿದಿರುವೆ. ನೀನು ದೇವತೆಗಳ ಶಕ್ತಿಯನ್ನು ತುಚ್ಛವೆಂದು ತಿಳಿದಿರುವೆ. ದೇವತೆ, ದಮಯಂತಿಯ ಮನಸ್ಸನ್ನು ಪರಿವರ್ತಿಸಿ ನಿನ್ನನ್ನು ಪ್ರೀತಿಸದಂತೆ ಮಾಡಬಹುದಾಗಿದೆ.

**ನಳ:** ಹೀಗೆ ಮಾಡುವುದು, ದೇವ, ನಿಮಗೆ ಒಳ್ಳೆಯದು. ನನಗೆ ಇದು ಒಪ್ಪಿಗೆ. ತಾವೇ, ಅವಳು ನನ್ನನ್ನು ಪ್ರೀತಿಸದಂತೆ ಮಾಡಿ.

**ಇಂದ್ರ:** ನೀನು, ದೇವತೆಗಳಿಗೆ ಆಹ್ವಾನ ನೀಡುತ್ತಿರುವೆ. ಆಗಲಿ, ಈ ಗರ್ವ, ಅಹಂಕಾರದ ಫಲವನ್ನು ನೀನು ಭೋಗಿಸಬೇಕಾಗುತ್ತದೆ. ನಾನು ನಿನ್ನ ಬಗ್ಗೆ ತುಂಬ ಕುಪಿತನಾಗಿ ಹೋಗುತ್ತಿರುವೆ.

(ಸಿಡಿಲಿನ ಭೀಷಣ ಗರ್ಜನೆ ಹಾಗೂ ಪ್ರಕಾಶದಲ್ಲಿ ಇಂದ್ರದೇವ ಲೋಪವಾಗುತ್ತಾನೆ. ರಾಜಾ ನಳ ನೆಲಕ್ಕೆ ಮುಖ ಹಚ್ಚಿ ಬೀಳುತ್ತಾನೆ, ಕೆಲ ಹೊತ್ತು ಹಾಗೇ ಬಿದ್ದಿರುತ್ತಾನೆ. ಎಲ್ಲ ದ್ವಾರಗಳು ತಮ್ಮಷ್ಟಕ್ಕೆ ತಾವೇ ತೆರೆಯುತ್ತವೆ, ಮಂತ್ರಿ ಹಾಗೂ ಕಲ್ಪನಾ ಬೇರೆ ಬೇರೆ ದಿಕ್ಕಿನಿಂದ ಒಳಗೆ ರಾಜಾ ನಳನ ಹತ್ತಿರಕ್ಕೆ ಬರುತ್ತಾರೆ ಹಾಗೂ ಅವನನ್ನು ಎತ್ತಿ ಕೂಡಿಸುತ್ತಾರೆ.)

**ಮಂತ್ರಿ:** ಮಹಾರಾಜ, ಇಂಥ ಸಿಡಿಲು, ಮಿಂಚು, ಗರ್ಜನೆಯನ್ನು ಜೀವನದಲ್ಲಿ ಎಂದೂ ನೋಡಿರಲಿಲ್ಲ, ಕೇಳಿರಲಿಲ್ಲ. ಮಹಾರಾಜ, ಸೌಖ್ಯ ತಾನೇ ?

**ಕಲ್ಪನಾ:** ಮಹಾರಾಜ, ದಾಸಿಯ ಉಸಿರುಗಟ್ಟಿಹೋಗಿತ್ತು, ಬಾಗಿಲು ಮುಚ್ಚಿ ಕೊಂಡಾಗಿನಿಂದ. ಸಿಡಿಲು, ಮಿಂಚುಗಳ ಆರ್ಭಟ ಕೇಳಿಸುತ್ತಲೇ ಇತ್ತು. ತಮ್ಮ ಸ್ವಾಸ್ಥ್ಯ ಚೆನ್ನಾಗಿದೆ, ಅಲ್ಲವೇ ?

**ನಳ:** ಚಿಂತಿಸಬೇಕಾಗಿಲ್ಲ, ನಾನು ಎಲ್ಲ ರೀತಿಯಿಂದಲೂ ಚೆನ್ನಾಗಿದ್ದೇನೆ. ದೇವತೆಯೊಂದಿಗೆ ಕೊಂಚ ವಾದ-ವಿವಾದವಾಯಿತು, ಅಷ್ಟೆ.

**ಕಲ್ಪನಾ:**
**ಮಂತ್ರಿ** } ದೇವತೆಯೊಂದಿಗೆ ವಾದ-ವಿವಾದ! ಮಹಾರಾಜರು, ಸೌಖ್ಯವಾಗಿರಲಿ! ಇಂದ್ರದೇವನ ಕ್ರೋಧದಿಂದ, ಮಹಾರಾಜರನ್ನು ದೇವರು ಕಾಪಾಡಲಿ.

**ನಳ:** ಕಲ್ಪನಾ, ಅಮಾತ್ಯರೇ, ಪ್ರಜೆ ಮತ್ತು ರಾಜನ ಮಧ್ಯದಲ್ಲಿ ದೇವರು ರಾಜನೊಂದಿಗೆ, ಆದರೆ ರಾಜಾ ಮತ್ತು ದೇವತೆಯ ಮಧ್ಯದಲ್ಲಿ ದೇವರು ದೇವತೆಗಳ ಕಡೆಗೆ. ದೇವರು ನಿರ್ಬಲರೊಂದಿಗಲ್ಲ, ಬಲವಾನರೊಂದಿಗಿರುತ್ತಾನೆ.

**ಮಂತ್ರಿ:** ಹೀಗೆ ಹೇಳಬೇಡಿ, ಮಹಾರಾಜ. ದೇವರು ಏನೆಲ್ಲ ಮಾಡುತ್ತಾನೋ, ಅದು ಒಳ್ಳೆಯದಕ್ಕಾಗಿಯೇ ಎಂದು ತಿಳಿಯಬೇಕು. ದೇವರೊಂದಿಗೆ ರೋಷ ವ್ಯರ್ಥವಾದುದು, ಆತನ ದ್ವಾರದಲ್ಲಿ ಪ್ರಾರ್ಥನೆಯೇ ಯೋಗ್ಯವಾದುದು.

**ನಳ:** ಮಂತ್ರಿಗಳೇ, ಕಲ್ಪನಾ, ಪ್ರೇಮದಲ್ಲಿ ಬಂಧಿತನಾದವನು ಮತ್ತು ಶಾಪಪೀಡಿತ ಮನುಷ್ಯ ರೋಷ ಮತ್ತು ಪ್ರಾರ್ಥನೆ ಎರಡನ್ನೂ ಮೀರಿದವನಾಗಿರುತ್ತಾನೆ ಇಲ್ಲವೆ ದಣಿದವನಾಗಿರುತ್ತಾನೆ. ಇಲ್ಲಿ ನೋಡಿ, ದೇವತೆಗಳಿಗೆ ಹಾಗೂ ದೇವರಿಗೆ ಏನು ಒಳ್ಳೆಯದೆನಿಸುತ್ತದೆ.

**ಮಂತ್ರಿ:** ಮಹಾರಾಜ, ಇಂದಿನಂಥ ಮಳೆ-ಬಿರುಗಾಳಿ, ಮಿಂಚು, ಗುಡುಗು ಹಾಗೂ ಆಣೆಕಲ್ಲು-ನಮ್ಮ ಆಯುಷ್ಯದಲ್ಲಿಯೇ ಈ ಮೊದಲು ನೋಡಿರಲಿಲ್ಲ. ಒಂದು ವೇಳೆ ಪಟ್ಟಣದಿಂದ ಹೊರಗೆ ಊರುಗಳಲ್ಲಿಯೂ, ಇಂದ್ರ ದೇವನ, ಇದೇ ರೀತಿ ಕೋಪ ಉಂಟಾಗಿದ್ದರೆ, ಪ್ರಜೆಗಳನ್ನು ದೇವರೇ ಕಾಪಾಡಬೇಕು.

**ಕಲ್ಪನಾ:** ಮಹಾರಾಜ, ಇಂದ್ರದೇವನನ್ನು ಸಂತೋಷಗೊಳಿಸಲು ಯಾವುದಾದರೂ ಉಪಾಯ ಹುಡುಕಬೇಕು.

**ನಳ:** ಯಾವ ಉಪಾಯವಾದರೂ ಸರಿ, ನೀವು ಮಾಡಿಕೊಳ್ಳಿ. ನನ್ನ ಬುದ್ಧಿ ಹಾಗೂ ಶಕ್ತಿಗೆ ಯಾವ ಉಪಾಯವೂ ಹೊಳೆಯುತ್ತಿಲ್ಲ.

**ಮಂತ್ರಿ:** ಯುವರಾಜ ಪುಷ್ಕರದೇವನನ್ನು ಕರೆಯಿಸಿಕೊಳ್ಳುತ್ತೇವೆ. ಈ ಸಮಯದಲ್ಲಿ ಅವರ ಸಲಹೆ ತೆಗೆದುಕೊಳ್ಳುವುದು ಉಚಿತ.

**ನಳ:** ಹಾಂ, ಹಾಂ! ಪುಷ್ಕರನನ್ನೂ ಕರೆಯಿಸಿಕೊಳ್ಳಿ. ಎಲ್ಲಿಯಾದರೂ ಪಗಡಿಯಾಡುತ್ತ ಕುಳಿತಿರಬೇಕು.

**ಕಲ್ಪನಾ:** ಮಹಾರಾಜ, ಪುಷ್ಕರದೇವನ ಬುದ್ಧಿ ಬಹು ಅಲೌಕಿಕವಾದುದು. ಅವರು ದೇವತೆಯ ಕ್ರೋಧವನ್ನು ಹೋಗಲಾಡಿಸಲು, ಅವಶ್ಯ ಏನಾದರೂ ಉಪಾಯ ಹುಡುಕಿ ತೆಗೆಯುತ್ತಾರೆ.

(ಪುಷ್ಕರದೇವ ಬಲಗಡೆಯ ಬಾಗಿಲಿನಿಂದ, ಕರೆಯಕಳಿಸುವ ಪೂರ್ವದಲ್ಲಿಯೇ ಒಳಗೆ ಬರುತ್ತಾನೆ. ಇವನು ರಾಜಾ ನಳನ ತಮ್ಮನಾಗಿದ್ದಾನೆ.)

**ಪುಷ್ಕರ:** ಮಹಾರಾಜ, ರಾಜ್ಯದಲ್ಲಿ ಏನೋ ಘೋರ ಉಪದ್ರವ ನಡೆದಿದೆ.

ಇಲ್ಲದಿದ್ದರೆ ಇಂಥ ಮಳೆ, ಚಂಡಮಾರುತ, ಮಿಂಚು, ಗುಡುಗುಗಳ ಹಾವಳಿಯನ್ನು ಎಂದೂ, ಯಾರೂ ಕಂಡಿರಲಿಲ್ಲ. ಅಜ್ಜ-ಮುತ್ತಾತಂದಿರ ಕಾಲದಿಂದಲೂ ಇಂಥ ಘಟನೆಯ ಬಗ್ಗೆ ಕೇಳಿರಲಿಲ್ಲ. ರಾಜಭವನದ ಮೇಲೆ ಸಿಡಿಲೇ ಬಿದ್ದ ಅನುಭವವಾಯಿತು. ಮೊದಲ ಆರ್ಭಟ ಕೇಳಿಯೇ ಇತ್ತ ಓಡಿಬಂದೆ. (ನಿಟ್ಟುಸಿರು ತೆಗೆದುಕೊಳ್ಳುತ್ತಾನೆ...ಓಡುವ ಕಾಲದಲ್ಲಿ ಉಸಿರೇ ತೆಗೆದುಕೊಂಡಿಲ್ಲವೆನ್ನುವ ಹಾಗೆ) ಬಂದು ನೋಡಿದರೆ ಎಲ್ಲ ಕವಾಟುಗಳು ಮುಚ್ಚಿಕೊಂಡಿವೆ. ಹೊರಗಿನ ಬಾಗಿಲಿನಲ್ಲಿಯೇ ನಿಂತಿದ್ದೆ. ಕೊನೆಯ ಸಲ ಗುಡುಗು ಗುಡುಗಿದಾಗ ಕವಾಟುಗಳು ಕೂಡಲೇ ತೆರೆದುಕೊಂಡವು, ಅವು ತೆರದಂತೆಯೇ ನಾನು ಒಳಗೆ ಓಡಿ ಬಂದೆ. (ನಿಡಿದಾದ ಉಸಿರು ತೆಗೆದುಕೊಳ್ಳುತ್ತಾನೆ)

**ನಳ:** ಹೌದೇ! ಪುಷ್ಕರದೇವನ ಮನಸ್ಸಿಗೆ ಇಷ್ಟು ಕ್ಲೇಶವಾಯಿತೆ! (ಮುಗುಳ್ನಕ್ಕು) ಪಗಡೆಯ ಆಟ ನಡುವೆಯೇ ಬಿಟ್ಟು ಓಡಿರಬೇಕು.

**ಪುಷ್ಕರ:** ಮಹಾರಾಜ, ತಾವಂತೂ ಎಂಥ ಕೆಟ್ಟ ಕಾಲದಲ್ಲೂ ನಗುತ್ತಲೇ ಇರುತ್ತೀರಿ. ತಾವು ಧನ್ಯರು! ನಮ್ಮ ಪ್ರಾಣ ಹಾರಿಹೋಗುತ್ತಲಿದೆ. ತಾವು ಸೌಖ್ಯವಾಗಿದ್ದೀರಲ್ಲ. ಏನು ವಿಶೇಷ? ರಾಜಭವನದಲ್ಲಿ ಎಲ್ಲವೂ ಕುಶಲವಷ್ಟೆ? (ಮಂತ್ರಿ ಹಾಗೂ ಕಲ್ಪನಾರ ಕಡೆ ನೋಡುತ್ತಾನೆ.)

**ನಳ:** ಈ ಸದನದಲ್ಲಿಯಂತೂ ಎಲ್ಲ ಕುಶಲ-ಮಂಗಲವಾಗಿದೆ, ಬೇರೆ ಸದನದ ವಿಷಯ ಗೊತ್ತಿಲ್ಲ.

**ಕಲ್ಪನಾ:** ರಾಜಭವನದಲ್ಲಿಯಂತೂ ಎಲ್ಲ ಕುಶಲ, ಮಹಾರಾಜ. ನಗರದ ಸ್ಥಿತಿ ಹೇಗಿದೆ? ಇದನ್ನಂತೂ (ಪುಷ್ಕರನಿಗೆ) ತಾವೇ ತಿಳಿಸಬಲ್ಲಿರಿ.

**ಪುಷ್ಕರ:** ನಗರದಲ್ಲಿಯೂ ಕುಶಲವಿರಬೇಕೆಂದು ಅನ್ನಿಸುತ್ತದೆ. ಎಲ್ಲಿಯಾದರೂ ದುರ್ಘಟನೆ ನಡೆದಿದ್ದರೆ ಅದು ಗೊತ್ತಾಗೇ ಆಗುತ್ತದೆ. ರಾಜಭವನ ದಲ್ಲಿ ಕುಶಲ-ಮಂಗಳ ಅವಶ್ಯ, ನಗರದಲ್ಲಿಯಂತೂ ಎಲ್ಲ ಸರಿಯಾಗಿದೆ. ರಾಜಾ ಕುಶಲನಾಗಿದ್ದರೆ ಪ್ರಜೆಗಳೂ ಕುಶಲ ರಾಗಿರುತ್ತಾರೆ.

**ನಳ:** ಹೊರಹೊರಗೆ, ರಾಜಭವನದಲ್ಲಿ ಎಲ್ಲವೂ ಕುಶಲವಾಗಿಯೇ ಕಾಣುತ್ತಲಿದೆ. ನಾನು ಅಭಿಶಪ್ತನಾಗಿದ್ದೇನೆ, ದೇವತೆ ನನ್ನ ಮೇಲೆ ಕ್ರೋಧಗೊಂಡಿದೆ.

**ಪುಷ್ಕರ:** ಚಿಂತಿಸಬೇಡಿ ಮಹಾರಾಜ! ತಾವು ಆರೋಗ್ಯವಾಗಿದ್ದರೆ ಸಾಕು, ದೇವತೆಗಳನ್ನು ಸಂತೋಷಪಡಿಸಿಕೊಳ್ಳಬಹುದು. ರಾಜರಿಗಿಂತ ಹೆಚ್ಚು, ದೇವತೆಗಳು ಕುಪಿತರಾಗಿರುವುದಿಲ್ಲ. ದೇವತೆಗಳನ್ನು ಸಂತುಷ್ಟಗೊಳಿಸಲು ರಾಜರುಗಳ ಹತ್ತಿರ ಬೇಕಾದಷ್ಟು ಸಾಧನೆಗಳು ಇವೆ.

**ನಳ:** ದೇವತೆ ಬೇಡುವ ಕಾಣಿಕೆಯನ್ನು ನಾನು ಕೊಡಲಾರೆ.

**ಕಲ್ಪನಾ:** (ತಿಳಿದು, ಮೆಲ್ಲಗೆ) ಮಹಾರಾಜ, ತಮ್ಮ ಮನದಲ್ಲಿಯ ಮಾತನ್ನು ಈಗ ನಮಗೆ, ಯಾರಿಗೂ ಹೇಳಬೇಡಿ. ಈ ಸಮಯದಲ್ಲಿ ಶಾಂತರಾಗಿದ್ದು, ಮನಸ್ಸನ್ನು ಹಿಡಿತಕ್ಕೆ ತಂದುಕೊಳ್ಳಿ. ಮಹಾರಾಜರ ಮನಸ್ಸಿಗೆ ತುಂಬ ಪೆಟ್ಟು ತಗಲಿದೆಯೆಂದು ಅನ್ನಿಸುತ್ತಲಿದೆ.

**ಪುಷ್ಕರ:** (ಈ ಮಾತಿನಿಂದ ಯಾರ ಮನದಲ್ಲಿ ಶಂಕೆ ಹುಟ್ಟಿದೆಯೋ) ಮಹಾರಾಜ, ಗಾಬರಿಯಲ್ಲಿ ಮನುಷ್ಯ ಬಹಳಷ್ಟು ಮಾತನ್ನು ಆಡಿಬಿಡುತ್ತಾನೆ, ದೇವತೆಗೆ ಅದು ಅನಾದರದ ಮಾತೂ ಆಗಬಹುದಾಗಿದೆ, ಇಲ್ಲವೆ ದೇವತೆಯ ಮನಸ್ಸಿಗೆ ಆ ಮಾತು ಬರದೆ ಹೋಗಬಹುದು. ತಾವು ಶಾಂತರಾಗಿದ್ದು, ತಮ್ಮ ಚಿತ್ತವನ್ನು ಸರಿಯಾಗಿಟ್ಟುಕೊಳ್ಳಿ. ದೇವತೆಯನ್ನು ಪ್ರಸನ್ನಗೊಳಿಸುವ ವಿಚಾರ ನಮಗೆ ಬಿಟ್ಟುಬಿಡಿ. ತಮ್ಮ ಕೃಪೆಯಿಂದ ಹಾಗೂ ತಾವು ನೀಡಿರುವ ಸಾಧನಗಳಿಂದ ನಾವು ದೇವತೆಯನ್ನು ಸಾಕಷ್ಟು ಒಲಿಸಿಕೊಳ್ಳುತ್ತೇವೆ.

**ಕಲ್ಪನಾ:** ಪುಷ್ಕರದೇವರು ಹೇಳುವುದು ಸರಿಯಾಗಿದೆ, ಮಹಾರಾಜ! ತಾವು ಈಗ ಶಯನ-ಕುಂಜದಲ್ಲಿ ಹೋಗಿ ವಿಶ್ರಾಂತಿ ತೆಗೆದುಕೊಳ್ಳಿ.

**ಮಂತ್ರಿ:** ಹಾಂ, ಮಹಾರಾಜ! ತಾವು ಈಗ ಸುಖ-ಶಯ್ಯೆಯಲ್ಲಿ ಪವಡಿಸಿ ವಿಶ್ರಾಂತಿ ಪಡೆಯಿರಿ. ದೇವತೆಯನ್ನು ಒಲಿಸಿಕೊಳ್ಳುವ ಕೆಲಸ ನಮಗೆ ಬಿಟ್ಟುಬಿಡಿ.

**ನಳ:** (ಮುಗುಳ್ನಕ್ಕು) ಒಳ್ಳೆಯದು, ಬಹಳಷ್ಟು ಕೆಲಸಗಳನ್ನು ರಾಜನಾದವನು ಬೇರೆಯವರಿಂದಲೇ ಮಾಡಿಸಿಕೊಳ್ಳುತ್ತಾನೆ. ಇದು ನಮ್ಮ ರಾಜ-ಪದದ ಧರ್ಮವೇ ಆಗಿದೆ. ಸರಿ, ಈಗ ನಾವು ವಿಶ್ರಾಂತಿಗಾಗಿ ತೆರಳುತ್ತೇವೆ. ಶುಭಮಸ್ತು!

**ಪುಷ್ಕರ, ಮಂತ್ರಿ, ಕಲ್ಪನಾ:** ನಮಸ್ಕಾರ, ಮಹಾರಾಜ!

(ಹೊರಟು ಹೋಗುತ್ತಾರೆ)

# ಅಂಕ: ಮೂರು

(ರಾಜಭವನದಲ್ಲಿ ರಾಜಕುಮಾರಿ ದಮಯಂತಿಯ ಶೃಂಗಾರ-ಕುಂಜ. ರಾಜ ಕುಮಾರಿ ಸ್ನಾನಮಾಡಿ ಸೀರೆ ಹಾಗೂ ಕಂಚುಕಿ ತೊಟ್ಟು ಹೆಳಲು ಹಾಕಿಕೊಳ್ಳುತ್ತಿದ್ದಾಳೆ. ಗವಾಕ್ಷದಿಂದ ಓರ್ವ ಸುಂದರ ನವಯುವಕ, ಈ ಭೂಮಿಯ ಮೇಲಿನ ಜೀವವಲ್ಲವೆಂದೆನಿಸುತ್ತದೆ-ಕೆಳಗಿಳಿಯುತ್ತಾನೆ. ವಾಸ್ತವವಾಗಿಯೂ ಈ ಭೂಮಿಯ ಜೀವವಲ್ಲ. ಅವನು ಅಗ್ನಿದೇವತೆ. ರಾಜಕುಮಾರಿ ಅವನನ್ನು ನೋಡಿ, ಚೀರಿಕೊಳ್ಳಲೂ ಆಗದಷ್ಟು ಹೆದರಿ ಕೊಂಡಿದ್ದಾಳೆ; ಅಥವಾ ಆ ದೇವತೆಯ ಪ್ರಭಾವವೇ ಹಾಗಿರಬೇಕು. ಅವಳ ಕೈ, ಕೂದಲುಗಳಲ್ಲಿ ಬಾಚಣಿಕೆ ಆಡಿಸುತ್ತ ಅಲ್ಲಿಯೇ ನಿಂತಿದೆ.)

**ಅಗ್ನಿ:** (ದಮಯಂತಿಯ ಸಮ್ಮುಖದಲ್ಲಿ ಬಂದು) ಅಂಜದಿರು, ರಾಜ ಕುಮಾರಿ, ನಾನು ಕಳ್ಳನಲ್ಲ, ದರೋಡೆಖೋರನಲ್ಲ, ಧೂರ್ತನಲ್ಲ.

**ದಮಯಂತಿ:** (ಈಗ ಭಯ ಕಡಿಮೆಯಾಗಿ ಕ್ರೋಧ ಹೆಚ್ಚಿದೆ) ಒಂದು ವೇಳೆ ಕಳ್ಳ ಅಥವಾ ಧೂರ್ತನಲ್ಲದಿದ್ದರೆ ಈ ರೀತಿ ಗವಾಕ್ಷದಿಂದ ನನ್ನ ಶೃಂಗಾರ-ಕುಂಜದಲ್ಲಿಳಿದು ಬಂದುದೇಕೆ ?

**ಅಗ್ನಿ:** ಗವಾಕ್ಷದಿಂದ ಬರಲು ಕಾರಣ ನಾನು ಆಕಾಶದಿಂದ ಇಳಿದಿರುವೆ ಹಾಗೂ ತಾವು ವಸ್ತ್ರ-ಧಾರಣ ಮಾಡಿದ ನಂತರ ತಮ್ಮ ಶೃಂಗಾರ-ಕುಂಜದಲ್ಲಿ ಬಂದಿರುವೆ. ಅದೂ ಅಲ್ಲದೆ ನನ್ನ ಮತ್ತು ತಮ್ಮ ನಡುವಿನ ಮಾತುಕತೆ ನಡೆಯಬೇಕಾದುದು ಏಕಾಂತದಲ್ಲಿ, ಅದಕ್ಕಾಗಿ ಇಲ್ಲಿಗೆ ಬಂದೆ.

**ದಮಯಂತಿ:** ನಾನು ಯಾವುದೇ ಪುರುಷನೊಂದಿಗೆ, ಈ ರೀತಿ ಏಕಾಂತದಲ್ಲಿ ಮಾತನಾಡುವುದಿಲ್ಲ.

**ಅಗ್ನಿ:** ರಾಜಕುಮಾರಿ, ಕ್ರೋಧಕ್ಕೆಡೆಕೊಡದಿರಿ. ನಾನು ಈ ಭೂಮಿಯ ಪುರುಷನಲ್ಲ, ತಾವು ಏಕಾಂತದಲ್ಲಿ ಯಾವುದೇ ಪುರುಷನೊಂದಿಗೆ ಮಾತನಾಡುವುದಿಲ್ಲವೆಂದು ಹೇಳುತ್ತಿರುವುದು ಸರಿಯಲ್ಲ.

**ದಮಯಂತಿ:** (ಮತ್ತಷ್ಟು ಕ್ರೋಧಿತಳಾಗಿ) ಹಾಗಾದರೆ, ತಮಗೆ ನನ್ನ ಮಾತುಗಳಲ್ಲಿ ವಿಶ್ವಾಸವಿಲ್ಲ. ಏಕಾಂತದಲ್ಲಿ ಯಾವನೋ ಪುರುಷ, ನನ್ನನ್ನು ಭೇಟಿ ಮಾಡುತ್ತಾನೆಂಬ ಆರೋಪ ಬೇರೆ, ಹೊರಿಸುತ್ತಿದ್ದೀರಿ.

**ಅಗ್ನಿ:** ಆರೋಪ ಹೊರಿಸುತ್ತಿಲ್ಲ, ರಾಜಕುಮಾರಿ. ನನ್ನ ಅಭಿಪ್ರಾಯವೇನೆಂದರೆ, ತಾವು ಯಾವ ಪುರುಷನನ್ನು ಏಕಾಂತದಲ್ಲಿ ಭೇಟಿಮಾಡಲಿರುವಿರೋ, ಯಾವುದೇ ಕೆಟ್ಟ ದೃಷ್ಟಿಯಿಂದಲ್ಲ, ನಿಜವಾಗಿಯೂ ತಾವು ಆತನನ್ನು ಪ್ರೀತಿಸುತ್ತಿರುವಿರಿ.

**ದಮಯಂತಿ:** ನಾನು, ಈಗ ತಮ್ಮ ಅಭಿಪ್ರಾಯ ತಿಳಿಯುತ್ತಿದ್ದೇನೆ, ನನ್ನ ನಿಜವಾದ ಪ್ರೇಮ, ರಾಜಾ ನಳನೊಂದಿಗಿದೆ. ಆದರೆ ಆತ ಕೂಡ ಈ ವರೆಗೂ ನನ್ನ ಹತ್ತಿರ ಏಕಾಂತದಲ್ಲಿ ಬಂದಿಲ್ಲ.

**ಅಗ್ನಿ:** ಸರಿ, ಹಾಗಾದರೆ, ನಾನು ತಪ್ಪು ಮಾಡುತ್ತಿದ್ದೇನೆ, ರಾಜಕುಮಾರಿ. ಅದಕ್ಕಾಗಿ ನಾನು ಕ್ಷಮೆಯಾಚಿಸುತ್ತೇನೆ. ಆದರೆ ಇದಂತೂ ಸತ್ಯತಾನೆ, ರಾಜಾ ನಳನೊಂದಿಗೆ ತಮ್ಮ ಪ್ರೇಮವಿರುವುದು.

**ದಮಯಂತಿ:** ಇದನ್ನು ಒಪ್ಪಿಕೊಳ್ಳುವಲ್ಲಿ ನನಗಾವ ಸಂಕೋಚವೂ ಇಲ್ಲ.

**ಅಗ್ನಿ:** ಹಾಗಾದರೆ ರಾಜಾ ನಳನ ದೂತ, ತಮ್ಮನ್ನು ಕಾಣುತ್ತಿರಬಹುದು.

**ದಮಯಂತಿ:** ಆತನ ದೂತ ಕೂಡ, ಯಾವನೇ ಪುರುಷನಲ್ಲ.

**ಅಗ್ನಿ:** ಈ ಪುರುಷ ಎಂಬ ಮಾತನ್ನು ತಾವು ಅಷ್ಟೇಕೆ ಗಟ್ಟಿಯಾಗಿ ಹಿಡಿದುಕೊಂಡಿದ್ದೀರಿ. ತಮ್ಮ ಮೇಲೆ ಯಾವುದೇ ಪಾಪದ ಹೊರೆ ಹೊರಿಸುವ ಅಭಿಪ್ರಾಯ ನನ್ನದಾಗಿರಲಿಲ್ಲ.

**ದಮಯಂತಿ:** ಹಾಗಾದರೆ ತಮ್ಮ ಅಭಿಪ್ರಾಯವೇನು ?

**ಅಗ್ನಿ:** ನಾನು ತಮಗೆ ತಮ್ಮ ಹಿತದ ಬಗ್ಗೆ ಒಂದು ಮಾತು ಹೇಳಬೇಕೆಂದಿರುವೆ.

**ದಮಯಂತಿ:** ಅದು ಏನು ?

**ಅಗ್ನಿ:** ಆದರೆ, ತಾವು, ನಾನು ಯಾರೆಂಬುದನ್ನೇ ಕೇಳಲಿಲ್ಲ !

**ದಮಯಂತಿ:** ತಾವು ಯಾರೆಂಬುದನ್ನು, ತಾವೇ ಸ್ವತಃ ಹೇಳಿ.

**ಅಗ್ನಿ:** ನಾನು, ಅಗ್ನಿದೇವ.

**ದಮಯಂತಿ:** ದೇವತೆಗಳಿಗೆ, ಯೋಗ್ಯವಾದ ರೀತಿಯಲ್ಲಿ ಸ್ವಾಗತಿಸುವುದು ನನಗೆ ಉಚಿತವಾದ ಧರ್ಮವಾಗಿತ್ತು. ಆದರೆ, ತಾವು ಇಲ್ಲಿಗೆ ಬಂದ ರೀತಿಯಿಂದಾಗಿ, ತಮ್ಮ ಬಗ್ಗೆ ನನ್ನಲ್ಲಿ ಸಂಶಯ ಹುಟ್ಟಲು ಕಾರಣವಾಯಿತು.

**ಅಗ್ನಿ:** ನನ್ನ ಭಾವನೆ ಶುಭವಾಗಿದೆ.

**ದಮಯಂತಿ:** ಅದು, ಯಾವುದು ?

**ಅಗ್ನಿ:** ತಾವು ನಳನೊಂದಿಗೆ ಲಗ್ನವಾಗುವ ಸಂಕಲ್ಪ ಬಿಟ್ಟು ಬಿಡಿ.

**ದಮಯಂತಿ:** ಅದೇಕೆ ? ಪ್ರೇಮವೆಂಬ ಸಂಕಲ್ಪವನ್ನು ಬಿಟ್ಟುಬಿಡಲಾದೀತೆ ?

**ಅಗ್ನಿ:** ಹಾಂ. ಪ್ರೇಮವೂ ಕೂಡ ವಿಚಾರದ ಆಧೀನವಾಗಿರಬೇಕು.

**ದಮಯಂತಿ:** ನಳನೊಂದಿಗಿನ ಪ್ರೇಮ ಬಿಟ್ಟು ಬಿಡುವಂಥ ವಿಚಾರ ಯಾವುದು ?

**ಅಗ್ನಿ:** ನಳನೊಂದಿಗೆ, ದೇವಗಣ ಅಸಂತುಷ್ಟರಾಗಿದ್ದಾರೆ.

**ದಮಯಂತಿ:** ನಳನೊಂದಿಗೂ ಯಾರಾದರೂ ಅಸಂತುಷ್ಟರಾಗಲು ಸಾಧ್ಯವೇ ?

ದೇವಗಣ, ಆತನೊಂದಿಗೆ ಅದೇಕೆ ಅಸಂತುಷ್ಟರಾಗಿದ್ದಾರೆ ?

**ಅಗ್ನಿ:** ಪ್ರಜೆಗಳ ಯೋಗಕ್ಷೇಮದಲ್ಲಿ ಮಗ್ನನಾದ ಆತ ದೇವತೆಗಳ ಬಗ್ಗೆ ಕಾಳಜಿ ವಹಿಸಲಿಲ್ಲ.

**ದಮಯಂತಿ:** ಆತ ಪ್ರಜೆಗಳೊಂದಿಗೆ ಒಳ್ಳೇ ಸಂಬಂಧ ಹೊಂದಿದ್ದಾನೆ. ಭೂಮಿ ಕರದಲ್ಲಿ, ಮೂರನೆಯ ಭಾಗದಿಂದ ನಾಲ್ಕನೆಯ ಭಾಗವೆಂದು ಮಾಡಿ, ಪ್ರಜೆಗಳಿಗೆ ಕರಭಾರ ಕಡಿಮೆ ಮಾಡಿದ್ದಾನೆ.

**ಅಗ್ನಿ:** ಆತ ಹೀಗೆ ಮಾಡಿ, ಗುಡಿ ಗುಂಡಾರಗಳ ಹಾಗೂ ಬ್ರಾಹ್ಮಣರ ಭಾಗವು ಕಡಿಮೆಯಾಗುವಂತಾಗಿದೆ. ಇದರಿಂದಾಗಿ ಬ್ರಾಹ್ಮಣರು ಆತನ ಬಗ್ಗೆ ತುಂಬ ಅಸಂತುಷ್ಟರಾಗಿದ್ದಾರೆ. ದೇವಗಣ ಬ್ರಾಹ್ಮಣರ ಪಕ್ಷದಲ್ಲಿದ್ದಾರೆ.

**ದಮಯಂತಿ:** ಆದರೆ ಈ ಬ್ರಾಹ್ಮಣರಿಗೆ, ಪ್ರಜೆಗಳ ಬಗ್ಗೆ ವೈರತ್ವ ಏಕೆ ?

**ಅಗ್ನಿ:** ಈ ಬ್ರಾಹ್ಮಣರದು, ಅವರದೇ ಒಂದು ಸಮಸ್ಯೆ. ನನಗೆ ಗೊತ್ತಿರುವುದು ಇಷ್ಟು. ಬ್ರಾಹ್ಮಣರು ರಾಜಾ ನಳನೊಂದಿಗೆ ಅಸಂತುಷ್ಟರಾಗಿದ್ದಾರೆ, ಇದರಿಂದಾಗಿ ದೇವಗಣ ಬ್ರಾಹ್ಮಣರ ಪಕ್ಷಪಾತಿಗಳಾಗಿರುವುದರಿಂದ, ನಳನ ಬಗ್ಗೆ ಅವರು ಸಂತುಷ್ಟರಾಗಿಲ್ಲ.

**ದಮಯಂತಿ:** ದೇವತೆಗಳು, ನಳನ ಬಗ್ಗೆ, ಅಸಂತುಷ್ಟರಾಗಲು ಇನ್ನೂ ಬೇರೆ ಕಾರಣಗಳಾವೂ ಇಲ್ಲ ತಾನೆ ?

**ಅಗ್ನಿ:** ಬೇರೆ ಕಾರಣಗಳೂ ಇವೆ.

**ದಮಯಂತಿ:** ಅವು ಯಾವು ? (ಎದ್ದು ನಿಲ್ಲುತ್ತಾಳೆ) ದೇವತೆ ನನ್ನೆದುರಿಗೆ ನಿಂತಿರುವಾಗ, ನಾನು ಕುಳಿತಿರುವೆನೆಂಬುದರ ಅರಿವೇ ಇಲ್ಲ. ಇದಂತೂ ದೇವತೆಯ ಅನಾದರ.

**ಅಗ್ನಿ:** ತಮ್ಮಂಥ ಸುಂದರಿಗಿಂತ ದೇವತೆಗಳೇನೂ ದೊಡ್ಡವರಲ್ಲ.

**ದಮಯಂತಿ:** (ಕೊಂಚ ಲಜ್ಜೆಯಿಂದ) ಹಾಗಾದರೆ ಮತ್ತಾವ ಕಾರಣ ?

**ಅಗ್ನಿ:** ದೇವತೆಗಳು ತಮ್ಮನ್ನು ಮೋಹಿಸುತ್ತಿದ್ದಾರೆ.

**ದಮಯಂತಿ:** (ವಿನಯದಿಂದ) ದೇವತೆಗಳೂ, ಈ ಮರ್ತ್ಯಲೋಕದ ಜೀವಿಗಳ ಮೇಲೆ ಮೋಹಗೊಳ್ಳುತ್ತಾರೆಯೋ !

**ಅಗ್ನಿ:** ತಾವು ಮರ್ತ್ಯಲೋಕದ ಜೀವವಲ್ಲ. ತಾವಂತೂ ಇಂದ್ರ ಸಭೆಯಲ್ಲಿ, ಉತ್ತಮವಾದ ಸ್ಥಾನದಲ್ಲಿರಲು ಯೋಗ್ಯರಾಗಿದ್ದೀರಿ.

**ದಮಯಂತಿ:** ಹಾಗಾದರೆ, ತಾವು, ನನ್ನನ್ನು ಇಂದ್ರಸಭೆಯ ಓರ್ವ ಅಪ್ಸರೆ, ನರ್ತಕಿಯನ್ನಾಗಿ ಮಾಡಲು ಇಚ್ಛಿಸುತ್ತೀರಾ ?

**ಅಗ್ನಿ:** ನಾನು ಬಯಸುವುದು ? ನಾನು, ತಮ್ಮನ್ನು ಇಂದ್ರಸಭೆಯ ಅಪ್ಸರೆಯನ್ನಾಗಿ ಮಾಡಲು ಇಚ್ಛಿಸುವುದಿಲ್ಲ.

**ದಮಯಂತಿ:** ಹಾಗಾದರೆ ತಾವೇನು ಬಯಸುತ್ತೀರಿ ?

**ಅಗ್ನಿ:** ನಾನು ತಮ್ಮನ್ನು ಪ್ರೇಮಿಸುತ್ತೇನೆ.

**ದಮಯಂತಿ:** ಆದರೆ, ತಮ್ಮ ನನ್ನ ಬಗೆಗಿನ ಪ್ರೇಮ ಫಲೀಭೂತವಾಗುವುದು ಹೇಗೆ ?

**ಅಗ್ನಿ:** ನಾನು, ತಮಗೋಸುಗ ದೇವಲೋಕ ಬಿಟ್ಟು ಮರ್ತ್ಯಲೋಕಕ್ಕೆ

ಬರುತ್ತೇನೆ. ಇಲ್ಲಿ ನಾನು, ಯಾವುದೇ ರಾಜನ, ರಾಜ್ಯವನ್ನು ಕಿತ್ತುಕೊಂಡು ತಮ್ಮನ್ನು ನನ್ನ ರಾಣಿಯನ್ನಾಗಿ ಮಾಡುತ್ತೇನೆ.

**ದಮಯಂತಿ:** ನನ್ನಿಂದ ತಾವು ನಿರಾಶರಾಗಿ ಹೋಗಬೇಕಾದ ಪ್ರಸಂಗ ಬಂದುದಕ್ಕಾಗಿ, ನಾನು ವಿಷಾದಿಸುತ್ತೇನೆ.

**ಅಗ್ನಿ:** ನೋಡು, ರಾಜಕುಮಾರಿ! ನಳ, ಈ ಭೂಮಿಯ ಜೀವ. ಅವನ, ನನ್ನೊಂದಿಗೆ, ಅಗ್ನಿಯೊಂದಿಗೆ ಏನು ಹೋಲಿಕೆ?

**ದಮಯಂತಿ:** ನಾನೂ ಭೂಮಿಯ ಜೀವವೇ ಆಗಿರುವೆ.

**ಅಗ್ನಿ:** ನಾನು ತಮ್ಮನ್ನು ದೇವಿಯನ್ನಾಗಿ ಮಾಡಿಕೊಳ್ಳುವೆ, ಪೂರ್ಣ ಅಗ್ನಿ.

**ದಮಯಂತಿ:** ದೇವ, ಅಗ್ನಿಯಾಗಲಾರೆ, ನಾನು. ತಾವು ನನ್ನ ಮೇಲೆ ಕೃಪೆದೋರಬೇಕು. ಅಲ್ಲಿ ನೋಡಿ, ನಳನ ದೂತಿ ಬರುತ್ತಿದ್ದಾಳೆ.

**ಅಗ್ನಿ:** ರಾಜಕುಮಾರಿ, ಈಗ ತಾವು ನನ್ನ ಅಪಮಾನ ಮಾಡುತ್ತಿರುವಿರಿ.

**ದಮಯಂತಿ:** ನನ್ನ ಉದ್ದೇಶ ತಮ್ಮ ಅಪಮಾನ ಮಾಡುವುದಲ್ಲ. ತಮ್ಮ ಆಶೆಯನ್ನು ನಾನು ಬಹುಶಃ ಪೂರ್ಣಗೊಳಿಸಲಾರೆ. ಸರಿ, ನಮಸ್ಕಾರ. (ಕೈಮುಗಿದು, ಹೊರಟುಹೋಗುವಂತೆ ಸನ್ನೆ ಮಾಡುತ್ತಾಳೆ.)

**ಅಗ್ನಿ:** (ಮೇಲಕ್ಕೆ ಏಳುತ್ತ) ಆಗಲಿ, ರಾಜಕುಮಾರಿ, ನಾನಿನ್ನೂ ನಿರಾಶನಾಗಿಲ್ಲ. ತಾವು ಇದರ ಬಗ್ಗೆ ಇನ್ನೂ ಯೋಚಿಸಿ.
(ಅಗ್ನಿದೇವತೆ ಗವಾಕ್ಷದಿಂದ ಹೊರಗೆ, ಮೇಲಕ್ಕೆ ಹೋಗುತ್ತಾನೆ. ದೂತಿ ಊರ್ವಶೀ ಒಳಗೆ ಬರುತ್ತಾಳೆ. ಅಗ್ನಿದೇವ ಅವಳಿಗೆ ಕಾಣಿಸಲಿಲ್ಲವೆಂಬುದು ಸ್ಪಷ್ಟವಿದೆ.)

**ಊರ್ವಶೀ:** ನಮಸ್ಕಾರ, ರಾಜಕುಮಾರಿ.

**ದಮಯಂತಿ:** ಬಾ, ಊರ್ವಶೀ, ನಿನ್ನ ಲೋಕದ ಓರ್ವ ರಾಜಾ ಈಗ ತಾನೇ ಇಲ್ಲಿಂದ ಹೋದ.

**ಊರ್ವಶೀ:** ನನ್ನ ಲೋಕದವನು, ಅವನಾರು? ನನ್ನ ಲೋಕದ, ಓರ್ವ ವ್ಯಕ್ತಿ, ರಾಜಾ ನಳ ಮಾತ್ರ ನಿಮ್ಮ ಹತ್ತಿರ ಬರುವ ಸಾಹಸ ಮಾಡಬಲ್ಲ.

**ದಮಯಂತಿ:** (ನಕ್ಕು) ನಿನ್ನ ಈ ಲೋಕವಲ್ಲ, ಊರ್ವಶೀ! ಇಂದ್ರಲೋಕ, ಎಲ್ಲಿ ನೀನು ಅಪ್ಸರೆಯಾಗಿರುವೆಯೋ, ಅಲ್ಲಿಯದು.

**ಊರ್ವಶೀ:** (ಈ ಸಂಕೇತ ತಿಳಿಯದೆ ಹೋದಳು) ನಾನಂತೂ ರಾಜಾ ನಳನ, ಸಭೆಯ ಅಪ್ಸರೆ, ರಾಜಕುಮಾರಿ. ಯಾವುದೇ ಇಂದ್ರನ ಸಭೆಯ ಅಪ್ಸರೆಯಲ್ಲ.

**ದಮಯಂತಿ:** (ಈ ಮಾತನ್ನು ಬಿಟ್ಟು) ಸರಿ, ರಾಜಾ ನಳನ ಸಭೆಯಿಂದ ಯಾವ ಸಂದೇಶ ತಂದಿರುವೆ.

**ಊರ್ವಶೀ:** (ಮುಚ್ಚಿದ ಪತ್ರವೊಂದನ್ನು ದಮಯಂತಿಯ ಕೈಯಲ್ಲಿ ಕೊಡುತ್ತಾಳೆ) ಇದು, ರಾಜಕುಮಾರಿಗೆ ಸಂದೇಶ.

**ದಮಯಂತಿ:** (ಪತ್ರವನ್ನು ಹಿಡಿದುಕೊಂಡು ಅವಳ ಮುಖ ಲಜ್ಜೆ ಹಾಗೂ ಉಲ್ಲಾಸದಿಂದ ಕೆಂಪಾಗಿದೆ) ಸರಿ, ಊರ್ವಶೀ, ನೀನು ಕೆಲ ಹೊತ್ತು,

ಹತ್ತಿರದ ಸದನದಲ್ಲಿ ವಿಶ್ರಾಂತಿ ಪಡೆ, ನಾನು ನಿನ್ನೆದುರಿನಲ್ಲಿ ಈ ಪತ್ರ ಓದಲಾರೆ.

**ಊರ್ವಶೀ:** ಒಳ್ಳೆಯದು, ರಾಜಕುಮಾರಿ. (ಹೊರಟು ಹೋಗುತ್ತಾಳೆ)

**ದಮಯಂತಿ:** (ಪತ್ರವನ್ನು ತೆರೆಯುತ್ತ, ಕೈ, ಎದೆಯ ಮೇಲಿರಿಸಿ) ಧೈರ್ಯ ತಾಳು, ಅಧೀರವಾಗಬೇಡ. ಆದೇಕೆ ಒಂದೇ ಸಮನೆ, ಬಡಿದುಕೊಳ್ಳುತ್ತಿರುವೆ ?
(ತೆರೆದು, ಓದತೊಡಗುತ್ತಾಳೆ, ಅಷ್ಟರಲ್ಲಿ ಮೇಲಿನ ಗವಾಕ್ಷದಿಂದ ಓರ್ವ ಮನಮೋಹಕ ಪುರುಷ ಇಳಿಯುತ್ತಾನೆ. ಈ ಪುರುಷ ಜಲದೇವತೆ.)

**ಜಲ:** ನಮಸ್ಕಾರ, ರಾಜಕುಮಾರಿ ದಮಯಂತಿ.

**ದಮಯಂತಿ:** (ಗಾಬರಿಯಾಗಿ) ಆರೇ, ತಾವು ಯಾರು ? (ಮರುಕ್ಷಣದಲ್ಲಿಯೇ, ಈ ಮೊದಲಿನ ಅನುಭವದಿಂದ, ತಿಳಿಯುತ್ತ) ತಾವು ಕೂಡ, ಬಹುಶಃ ದೇವಲೋಕದ ವಾಸಿಗಳಲ್ಲ ತಾನೇ ?

**ಜಲ:** ಹಾಂ, ರಾಜಕುಮಾರಿ, ತಮ್ಮಂಥ ಜೀವಿಗಳಿಂದ ಈ ಮರ್ತ್ಯಲೋಕ ಶೃಂಗರಿಸಲ್ಪಟ್ಟಿರುವಾಗ, ದೇವಲೋಕದ ವಾಸಿ ನನ್ನಂಥ ಅಭಾಗ್ಯನಲ್ಲದೆ, ಇನ್ನಾರು ಇರಲು ಸಾಧ್ಯ ?

**ದಮಯಂತಿ:** ದೇವಲೋಕ ಮತ್ತು ದುರ್ಭಾಗ್ಯ ! ಇದು ಹೇಗೆ ಸಾಧ್ಯ ?

**ಜಲ:** ಹಾಗಿರಬಾರದು, ನಿಜ. ಆದರೆ, ಮರ್ತ್ಯಲೋಕದಲ್ಲಿ ಎಂದಿನಿಂದ, ತಮ್ಮ ಸೌಂದರ್ಯ ಪ್ರಕಾಶ ಬೀರತೊಡಗಿತೋ, ಅಂದಿನಿಂದ ನಾವು, ದೇವ ಲೋಕದ ವಾಸಿಗಳು, ನಮ್ಮಷ್ಟಕ್ಕೇ ನಾವು ತುಂಬ ದುರ್ಭಾಗ್ಯರೆಂದು ತಿಳಿಯತೊಡಗಿದ್ದೇವೆ.

**ದಮಯಂತಿ:** (ಕೊಂಚ ಆತುರಳಾಗುತ್ತ) ತಾವು ಯಾರೆಂಬುದನ್ನೇ ಹೇಳುತ್ತಿಲ್ಲವಲ್ಲ.

**ಜಲ:** ನಾನು ಜಲದೇವತೆ, ನಾನು ತಮ್ಮೆದುರಿನಲ್ಲಿ, ನನ್ನ, ಮನದಳಲನ್ನು ತೋಡಿಕೊಳ್ಳಲು ಬಂದಿರುವೆ.

**ದಮಯಂತಿ:** ಜಲದೇವ, ತಮಗೆಂಥ ಕಷ್ಟ ? ತಾವಂತೂ ಎಲ್ಲರ ಕಷ್ಟ ನಿವಾರಕರು.

**ಜಲ:** ರಾಜಕುಮಾರಿಯ ಅಭೂತಪೂರ್ವ ಸೌಂದರ್ಯ, ನನ್ನನ್ನು, ಮಂತ್ರ ಮುಗ್ಧನನ್ನಾಗಿ ಮಾಡಿದೆ. ಅದರಿಂದಾಗಿ, ನಾನು ದೇವಲೋಕದಿಂದ ಮರ್ತ್ಯಲೋಕಕ್ಕೆ ಬಂದಿದ್ದೇನೆ, ಯಾವುದೋ ಒಂದು ಕಾಲದಲ್ಲಿ ಮರ್ತ್ಯಲೋಕದ ನಿವಾಸಿ ರಾಜಾ ಭಗೀರಥ, ದೇವಲೋಕದ ದೇವಿ ಗಂಗೆಯನ್ನು ಶಿವನ ಜಡೆಯಿಂದ, ಮರ್ತ್ಯಲೋಕಕ್ಕೆ ಹರಿದು ಬರುವಂತೆ ಪ್ರೇರೇಪಿಸಿದ್ದ. ಇಂದು, ತಾವು, ನಾನು ದೇವಲೋಕ ಬಿಟ್ಟು ಬರುವಂತೆ ಪ್ರೇರೇಪಿಸಿದ್ದೀರಿ.

**ದಮಯಂತಿ:** ರಾಜಾ ಭಗೀರಥ, ಲೋಕಕಲ್ಯಾಣಕ್ಕೋಸುಗ, ದೇವಿ ಗಂಗೆಯನ್ನು ಈ ಮರ್ತ್ಯಲೋಕಕ್ಕೆ ಬರುವಂತೆ ಮಾಡಿದ್ದ. ನನ್ನದಂತೂ ಇಂಥ ಯಾವ ಭಾವನೆಯೂ ಇಲ್ಲ. ಅದೂ ಅಲ್ಲದೆ ತಾವು ಈ ಮರ್ತ್ಯಲೋಕಕ್ಕೆ

ಬರುವುದರಿಂದ ಯಾರಿಗಾದರೂ, ಕಲ್ಯಾಣವೇನಾದರೂ ಆಗುವುದಿದೆಯೇ ?

**ಜಲ:** ಓರ್ವ ಪ್ರೇಮಿಯ ಹತ್ತಿರ, ಬಹಳ ತರ್ಕ ಹಾಗೂ ಯುಕ್ತಿಗಳು ಇರುವುದಿಲ್ಲ. ನನ್ನ ಪ್ರಾರ್ಥನೆ ಏನೆಂದರೆ, ತಾವು ನನ್ನ ಪ್ರೇಮವನ್ನು ಸ್ವೀಕರಿಸಬೇಕು.

**ದಮಯಂತಿ:** ನಾನು, ತಮ್ಮ ಪ್ರೇಮವನ್ನು ಹೇಗೆ ಸ್ವೀಕರಿಸಬಲ್ಲೆ? ನಾನಂತೂ ಈಗಾಗಲೇ ರಾಜಾ ನಳನಿಗೆ ವಚನ ನೀಡಿದ್ದೇನೆ.

**ಜಲ:** ಏನಂದಿರಿ, ರಾಜಾನಳನಿಗೆ ವಚನ ಕೊಟ್ಟಿದ್ದೀರಾ ? ಆ ಜೂಜುಖೋರನಿಗೆ. ರಾಜಕುಮಾರಿ, ಯೋಚಿಸಿ ಅವನು ತಮ್ಮನ್ನೂ ಜೂಜಿನಲ್ಲಿ ಸೋತುಬಿಡಬಹುದು.

**ದಮಯಂತಿ:** ಪರವಾಗಿಲ್ಲ, ಮೊದಲು ಕೂಡ ನಮ್ಮ ಪುರುಷರು ಇದೇ ರೀತಿ ಮಾಡುತ್ತ ಬಂದಿದ್ದಾರೆ.

**ಜಲ:** ಏನು ಹಾಗಾದರೆ, ಯುಧಿಷ್ಠಿರ ದ್ರೌಪದಿಯನ್ನು ಜೂಜಿನಲ್ಲಿ ಸೋತು, ಯಾರನ್ನಾದರೂ ಉದ್ಧಾರ ಮಾಡಿದ್ದನೇನು ?

**ದಮಯಂತಿ:** ದೇವ, ತಾವು ಈಗ ತಾನೇ ಹೇಳಿದ್ದಿರಿ. ಪ್ರೇಮಿಗಳ ಹತ್ತಿರ ತರ್ಕ, ಯುಕ್ತಿಗಳಿರುವುದಿಲ್ಲವೆಂದು. ನಾನು ಕೂಡ ರಾಜಾ ನಳನನ್ನು ಪ್ರೀತಿಸುತ್ತೇನೆ.

**ಜಲ:** ರಾಜಕುಮಾರಿ, ತಾವು ಓರ್ವ ದೇವತೆಯ ಪ್ರೇಮವನ್ನು ನಿರಾಕರಿಸುತ್ತಿರುವಿರಿ, ನೆನಪಿಡಿ, ದೇವತೆಯ ಕ್ರೋಧ ಅವನ ಪ್ರೇಮಕ್ಕಿಂತಲೂ ಶಕ್ತಿಶಾಲಿಯಾಗಿರುತ್ತದೆ.

**ದಮಯಂತಿ:** (ಕಠೋರಳಾಗಿ) ಯಾವ ರೀತಿ ನಾನು, ದೇವತೆಯ ಪ್ರೇಮದಿಂದ ಅಕ್ಷುಣ್ಣಳಾಗಿರುವೆನೋ, ಅದೇ ರೀತಿ ಅವನ ಕ್ರೋಧದಿಂದಲೂ ಪಾರಾಗುವೆ ಎಂಬ ಆಶೆ ಇದೆ.

**ಜಲ:** ನನ್ನ ಕ್ರೋಧದಿಂದ ತಾವು ಪಾರಾಗಬಹುದು, ಆದರೆ ರಾಜಾ ನಳ ಪಾರಾಗಲಾರ.

**ದಮಯಂತಿ:** ದೇವರು, ಆತನಿಗೂ ರಕ್ಷೆ ನೀಡಬಹುದು.

**ಜಲ:** ದೇವರು, ದೇವತೆಗಳ ಕಡೆಗೆ ಇದ್ದಾನೆ. ನನ್ನ ವಿರುದ್ಧ, ಓರ್ವ ಮರ್ತ್ಯ ಲೋಕದ ಪುರುಷನಿಗೆ ದೇವರು, ಹೇಗೆ ಸಹಾಯ ನೀಡಬಲ್ಲ ?

**ದಮಯಂತಿ:** ಇದು ದೇವರಿಗೆ ಗೊತ್ತು. ದೇವ, ನನ್ನ ಓರ್ವ ಸಖಿ ನನ್ನನ್ನು ಕಾಣಲು ಬರುವ ಸಮಯ ಆಗಿದೆ.

**ಜಲ:** ನನಗೆ ಗೊತ್ತಿದೆ, ತಮ್ಮ ಆ ಸಖಿ ಯಾರೆಂಬುದು. ಆಕೆ ರಾಜಾ ನಳನ ದೂತಿ. ರಾಜಾ ನಳನ ಪತ್ರ ತೆಗೆದುಕೊಂಡು ತಮ್ಮ ಹತ್ತಿರ ಬಂದಿದ್ದಾಳೆ ಹಾಗೂ ಪಕ್ಕದ ಸದನದಲ್ಲಿ ಕುಳಿತಿದ್ದಾಳೆ. ದೇವತೆಗಳಿಂದ ಏನನ್ನೂ ಮರೆಮಾಚಿಸಲು ಸಾಧ್ಯವಿಲ್ಲ.

**ದಮಯಂತಿ:** ದಮಯಂತಿ, ರಾಜಾ ನಳನ ಹೊರತು ಬೇರೆ ಯಾವ ಪುರುಷನನ್ನೂ

ಪ್ರೇಮಿಸುವುದಿಲ್ಲವೆಂಬುದೂ, ದೇವತೆಗಳಿಗೆ ಗೊತ್ತಾಗಬೇಕು.

**ಜಲ:** ಕುಮಾರಿ, ಒಂದು ವೇಳೆ ತಾವು ಹಠವನ್ನೇ ಮುಂದುವರಿಸಿಕೊಂಡು ಹೋದರೆ, ಕಲ್ಯಾಣವಾಗದು.

**ದಮಯಂತಿ:** ನನ್ನ ಪ್ರೇಮವೇ ನನ್ನ ಹಠವಾಗಿದೆ.

**ಜಲ:** ಹಾಗಾದರೆ ನೋಡಿ, ಇದರ ಫಲವೇನಾಗುತ್ತದೆಂಬುದನ್ನು. ಓರ್ವ ದೇವತೆ, ತನ್ನನ್ನು ತಾನೇ ಯಾರೆದುರೂ ಇದಕ್ಕಿಂತ ಹೆಚ್ಚಿಗೆ ಬಾಗಿಸಲಾರ.

**ದಮಯಂತಿ:** ಅಂತೆಯೇ ನಾನು, ದೇವತೆಯ ಮುಂದೆ ಪ್ರಾರ್ಥನೆ ಸಲ್ಲಿಸುತ್ತೇನೆ, ಅವರು ತಮ್ಮ ಉಚ್ಚ ಸ್ಥಾನಕ್ಕೆ ಮರಳಿ ಹೋಗಲಿ-ಎಂದು. ನಮಸ್ಕಾರ.

**ಜಲ:** (ಎದ್ದು, ಗವಾಕ್ಷದ ಕಡೆಗೆ ಹಾರುತ್ತ) ನಮಸ್ಕಾರ. ಇನ್ನು ಕೂಡ, ನಾನು, ತಮಗೆ ಯೋಚಿಸಲು ಸಮಯ ನೀಡುತ್ತೇನೆ. (ಹೊರಟು ಹೋಗುತ್ತಾನೆ.)

**ದಮಯಂತಿ:** ಪ್ರೇಮ ಹಠ, ಯೋಚಿಸಬೇಕಾಗಿಲ್ಲ. (ಅದೇ ಧ್ವನಿಯಲ್ಲಿ) ಊರ್ವಶೀ!

**ಊರ್ವಶೀ:** (ಬಾಗಿಲದಲ್ಲಿ ಬಂದು) ಹೇಳಿ, ರಾಜಕುಮಾರಿ.

**ದಮಯಂತಿ:** ನನ್ನ ಮನಸ್ಸಿನ ಮೇಲೆ, ಕೆಲ ವಿಚಿತ್ರ ಘಟನೆಗಳ ಆಘಾತ ನಡೆದಿದೆ, ನಾನು ಮನಃಪೂರ್ವಕವಾಗಿ ಯೋಚಿಸಿ, ರಾಜಾ ನಳನ ಪತ್ರಕ್ಕೆ ಉತ್ತರ ಬರೆಯಲಾರದವಳಾಗಿದ್ದೇನೆ. ನೀನು ನಾಳೆ ಯಾವ ಸಮಯಕ್ಕಾದರೂ ಬಾ.

**ಊರ್ವಶೀ:** ಒಳ್ಳೆಯದು, ರಾಜಕುಮಾರಿ, ವಂದನೆಗಳು.
(ಬಾಗಿ ನಮಸ್ಕರಿಸಿ ಹೊರಟು ಹೋಗುತ್ತಾಳೆ.)

**ದಮಯಂತಿ:** ಅಗ್ನಿ ದೇವತೆ, ಜಲ ದೇವತೆ! ನೋಡೋಣ, ಇನ್ನೂ ಯಾವ ಯಾವ ದೇವತೆಗಳು ರಾಜಾ ನಳನನ್ನು ದ್ವೇಷ ಮಾಡುತ್ತಾರೋ! ಇದೆಲ್ಲ ನನಗಾಗಿ! ಸರಿಯಾಗಿದೆ, ನಾನು ಅಂಥ ಸುಂದರಳಾಗಿದ್ದೇನೆ, ಅಮೂಲ್ಯವಾಗಿದ್ದೇನೆ! ನನ್ನ ದಾಸಿ ಕೇಸರಿ, ಬಹುಶಃ ಸರಿಯಾಗಿಯೇ ಹೇಳುತ್ತಿದ್ದಳು. (ಓರ್ವ ತರುಣಿಯು ಅಭಿಮಾನದಿಂದ ಓಲಾಡುತ್ತಾಳೆ, ಮತ್ತಗೆ ಕಾಲಿಸಿಂದ ನೆಲದ ಮೇಲೆ ತಾಳ ಹಾಕುತ್ತಾಳೆ) ನೃತ್ಯಗೈಯ ಬೇಕೆಂದು ಮನ ಹಾತೊರೆಯುತ್ತದೆ. ನಳನ ಪತ್ರ ಅದೆಷ್ಟು ಸುಂದರ ಪ್ರೇಮ-ಭಾವನೆಗಳಿಂದ ತುಂಬಿಕೊಂಡಿದೆ. ನಾನು, ಇಂಥ ಪ್ರೇಮಕ್ಕಾಗಿ ಸಮಸ್ತ ದೇವ-ಮಂಡಲದ ಪ್ರೇಮವನ್ನು ಕಡೆಗಣಿಸುತ್ತೇನೆ. (ಅದೇ ಗವಾಕ್ಷದ ದಾರಿಯಿಂದ ಓರ್ವ ದೇವಪುರುಷ ಇಳಿಯುತ್ತಾನೆ. ಈತ ಪವನ ದೇವತೆ)

**ಪವನ:** ರಾಜಕುಮಾರಿ ದಮಯಂತಿ, ಅಪಾರ ಆನಂದದಲ್ಲಿ ನೃತ್ಯಗೈಯುತ್ತಿರುವಂತಿದೆ. ನಮಸ್ಕಾರ.

**ದಮಯಂತಿ:** (ಈ ಸಲ ಅಚ್ಚರಿಗೊಳ್ಳಲಿಲ್ಲ) ತಾವು ಕೂಡ ಯಾವುದೋ ದೇವತೆಯ ಹಾಗೆ ತೋರುತ್ತಿರುವಿರಿ.

ಪವನ: (ಕೊಂಚ ಸಿಡಿಮಿಡಿಗೊಂಡು) ನಾನು ಕೂಡ, ಯಾವುದೋ ದೇವತೆಯೆಂದು ಪ್ರತೀತವಾಗುತ್ತಿದ್ದೇನೆ ತಾನೆ? ಮತ್ತೆ ಬೇರೆ ದೇವತೆಗಳು ರಾಜಕುಮಾರಿಯ ಭವನದಲ್ಲಿ ಬರುತ್ತಾರೆಯೇ?

ದಮಯಂತಿ: ಇಂದಂತೂ ದೇವತೆಗಳು ದರ್ಶನ ನೀಡಿದ್ದಾರೆ.

ಪವನ: ಯಾರು-ಯಾರು?

ದಮಯಂತಿ: ಅಗ್ನಿದೇವ ಮತ್ತು ಜಲದೇವ.

ಪವನ: ನಾನು ಪವನ, ರಾಜಕುಮಾರಿ.

ದಮಯಂತಿ: ಓ! ಪವನದೇವತೆ (ಚಂಚಲತಾಪೂರ್ವಕ) ಎಲ್ಲಿಯಾದರೂ, ನನ್ನನ್ನೇ ಹಾರಿಸಿಕೊಂಡು, ಹೋದೀರಿ ಮತ್ತೆ!

ಪವನ: ಇದೇ ಸಂಕಲ್ಪದಿಂದಲೇ ಬಂದಿದ್ದೇನೆ.

ದಮಯಂತಿ: (ಶೃಂಗಾರ ಸಾಧನದ ಚೌಕಿಯ ಸ್ತಂಭವನ್ನು ಹಿಡಿದು, ಕೂಡುತ್ತ) ಹಾಗಾದರೆ ನಾನು ಸುದೃಢಳಾಗಿ ಕೂಡಲೇ!

ಪವನ: (ನಕ್ಕು) ದೇವತೆ, ಈ ಪ್ರಕಾರವಾಗಿ ಯಾರನ್ನೂ ಒತ್ತಾಯಪೂರ್ವಕ ಕರೆದುಕೊಂಡು ಹೋಗುವುದಿಲ್ಲ.

ದಮಯಂತಿ: ನಾನು ಕೇವಲ ಪರಿಹಾಸ ಮಾಡುತ್ತಲಿದ್ದೆ, ದೇವ. ದಯಮಾಡಿಸಿ, ತಮಗೆ ಶುಭ ಆಗಮನ ಕೋರುತ್ತೇನೆ. ತಮ್ಮ ಸೇವೆ, ಏನಾಗಬೇಕು?

ಪವನ: ಈ ಸಲ, ದೇವತೆ ಸೇವೆ ಪಡೆಯಲು ಅಲ್ಲ ಬಂದಿರುವುದು, ಸೇವೆ ಮಾಡಲು ಬಂದಿದ್ದಾನೆ.

ದಮಯಂತಿ: ಇಲ್ಲ ದೇವ, ಇಂಥ ಮಾತುಗಳನ್ನು ಆಡಿ ನನ್ನ ತಲೆಯ ಮೇಲೆ ಪಾಪವನ್ನು ಹೇರಬೇಡಿ.

ಪವನ: ರಾಜಕುಮಾರಿ, ಬ್ರಾಹ್ಮಣರನ್ನು ಸರಿಸಿದ ಹಾಗೆ, ಈ ರೀತಿಯಾಗಿ ನನ್ನನ್ನೂ ಸರಿಸದಿರು.

ದಮಯಂತಿ: ತಮ್ಮನ್ನು ಯಾವುದರಿಂದ ಸರಿಸುವುದು?

ಪವನ: ಪ್ರೇಮದಿಂದ.

ದಮಯಂತಿ: ಹೇ, ದೇವ! ಏನು ಹೇಳುತ್ತಿರುವಿರಿ?

ಪವನ: ರಾಜಕುಮಾರಿ, ನಾನು ತಮ್ಮ ಮುಂದೆ ನನ್ನ ಪ್ರೇಮವನ್ನು ಅರ್ಪಿಸಲು ಬಂದಿರುವೆ.

ದಮಯಂತಿ: ದೇವ, ನಾನು ಮರ್ತ್ಯಲೋಕದ ಓರ್ವ ಸಾಮಾನ್ಯ ಕನ್ಯೆ. ನನ್ನನ್ನೂ ಕುರಿತು ಹೀಗೆ ಹೇಳದಿರಿ, ಚೇಷ್ಟೆ ಮಾಡದಿರಿ.

ಪವನ: ರಾಜಕುಮಾರಿ, ನಾನು ತಮ್ಮನ್ನು ಚೇಷ್ಟೆ ಮಾಡುತ್ತಿರುವೆನೋ ಅಥವಾ ತಾವು ನನ್ನನ್ನೋ?

ದಮಯಂತಿ: ಅದು ಹೇಗೆ?

ಪವನ: ನಾನು, ತಮಗೆ ನನ್ನ ಪ್ರೇಮವನ್ನು ಅರ್ಪಿಸುತ್ತಿದ್ದೇನೆ. ತಾವು ಏನೂ ತಿಳಿಯದಂತೆ ನಟಿಸುತ್ತಿದ್ದೀರಿ.

ದಮಯಂತಿ: ದೇವ ನಾನು ಯಾರದೇ ಪ್ರೇಮ-ಕಾಣಿಕೆಗೆ ಯೋಗ್ಯಳಲ್ಲ.

**ಪವನ:** ಅದೇಕೆ ?

**ದಮಯಂತಿ:** ನಾನಿಲ್ಲಿ, ಮರ್ತ್ಯಲೋಕದಲ್ಲಿ, ಓರ್ವ ಪುರುಷನನ್ನು ಪ್ರೀತಿಸುತ್ತಿರುವೆ.

**ಪವನ:** ನನಗಿದು ಗೊತ್ತಿದೆ. ತಾವು ತಮ್ಮ ಪ್ರೇಮವನ್ನು, ರಾಜಾ ನಳನಿಗೆ ಅರ್ಪಿಸಿ ಕುಳಿತಿದ್ದೀರಿ. ತಾವು ಈ ಸಂಕಲ್ಪವನ್ನು ಬಿಟ್ಟುಬಿಡಬೇಕೆಂದು ಹೇಳಲು ಬಂದಿರುವೆ.

**ದಮಯಂತಿ:** ಈ ಪ್ರೇಮದಿಂದ ನನ್ನನ್ನು ವಂಚಿತಳನ್ನಾಗಿ ಏಕೆ ಮಾಡುತ್ತಿರುವಿರಿ ?

**ಪವನ:** ಮೊದಲ ಮಾತೆಂದರೆ, ನಾನು ಸ್ವತಃ ತಮ್ಮನ್ನು ಪ್ರೀತಿಸುತ್ತಿದ್ದೇನೆ. ಎರಡನೆಯದೆಂದರೆ, ದೇವಗಣವೆಲ್ಲ ರಾಜಾ ನಳನ ಮೇಲೆ ಮುನಿಸುಗೊಂಡಿದೆ.

**ದಮಯಂತಿ:** ದೇವಗಣವೆಲ್ಲ ರಾಜಾ ನಳನ ಮೇಲೆ ಏಕೆ ಮುನಿಸುಗೊಂಡಿದೆ ?

**ಪವನ:** ಆತ ಮಾಡಿದ ಯಜ್ಞದಲ್ಲಿ, ದೇವತೆಗಳ ಹಾಗೂ ಬ್ರಾಹ್ಮಣರ ಬಗ್ಗೆ ಅನಾದರ ತೋರಲಾಗಿದೆ.

**ದಮಯಂತಿ:** ಅದು ಹೇಗೆ ?

**ಪವನ:** ತಮ್ಮ ಮೂರ್ತಿಯನ್ನು ಪೂಜಿಸಿ, ಮಾನವರಲ್ಲಿ ತಮಗೆ ಸ್ಥಾನ ನೀಡಿ.

**ದಮಯಂತಿ:** ಪುರುಷನಿಗೆ ಆವನ ಪ್ರೇಯಸಿ ಪೂಜ್ಯಳಾಗಿಯೇ ಇರುತ್ತಾಳೆ. ಭಗವಾನನು ಲಕ್ಷ್ಮಿಯನ್ನು ಪೂಜಿಸುವ ಹಾಗೆ ಪ್ರೇಮಿಸುವುದಿಲ್ಲವೇ ? ಶಿವನು ಪಾರ್ವತಿಯನ್ನು ಪೂಜಿಸಿಲ್ಲವೇ ?

**ಪವನ:** ಆದರೆ ಪುರುಷರಿಗೆ ಇದು ಶೋಭೆಯನ್ನು ತರುವಂಥದಲ್ಲ, ಪ್ರಾಮಾಣಿಕವಾದುದೂ ಅಲ್ಲ. ಗೊತ್ತಿದೆಯಲ್ಲ, ಶ್ರೀರಾಮ ಸೀತೆಯನ್ನು ಮನೆಯಿಂದ ಹೊರಹಾಕಬೇಕಾಯಿತು.

**ದಮಯಂತಿ:** ಅದಂತೂ ಲೋಕಮರ್ಯಾದೆಗಾಗಿತ್ತು, ದೇವಮರ್ಯಾದೆಗಾಗಿ ಅಲ್ಲ.

**ಪವನ:** ಏನು, ಲೋಕ ಮರ್ಯಾದೆ ದೇವ ಮರ್ಯಾದೆಗಿಂತ ಹೆಚ್ಚಿನದೇನು ?

**ದಮಯಂತಿ:** ನಾನು ಹಾಗೆಲ್ಲಿ ಹೇಳುತ್ತಿರುವೆ, ದೇವತೆಗೆ ಇಂಥ ಭ್ರಮೆ ಏಕೆ ?

**ಪವನ:** ಆದರೆ, ದೇವತೆ, ಪ್ರೇಮ ಮತ್ತು ಈರ್ಷೆಯ ಆಧೀನವಾಗಿರುತ್ತಾರೆ.

**ದಮಯಂತಿ:** ದೇವತೆಗಳು ನನ್ನ ಅಥವಾ ನಳನನ್ನು ಪ್ರೇಮಿಸುವುದಾಗಲಿ ಅಥವಾ ಈರ್ಷೆ ಮಾಡುವುದಾಗಲಿ, ಏಕೆ ? ನಾವಂತೂ, ಈ ಮರ್ತ್ಯಲೋಕದ ಸಾಧಾರಣ ಜೀವಿಗಳು.

**ಪವನ:** ತಾವು ಓರ್ವ ಸಾಧಾರಣ ಜೀವವಲ್ಲ. ತಾವು ದೇವಲೋಕದ ರಾಜ್ಯದಲ್ಲಿರಲು ಯೋಗ್ಯರು.

**ದಮಯಂತಿ:** ಆದರೆ ನನಗೆ, ಆ ರಾಜ್ಯದ ಆಶೆ ಇಲ್ಲ. ನನಗೆ ನಳನ ಪ್ರೇಮ ಮತ್ತು ರಾಜ್ಯವೇ ಸಾಕು.

**ಪವನ:** ರಾಜಕುಮಾರಿ, ನನ್ನ ಪ್ರೇಮ, ಈ ರೀತಿಯಾಗಿ ದೂರೀಕರಿಸುವಂಥ ವಸ್ತು ಅಲ್ಲ.

**ದಮಯಂತಿ:** ನಾನೇನು ಮಾಡಬಲ್ಲೆ? ನಾನು ನನ್ನ ಪ್ರೇಮವನ್ನು ರಾಜಾ ನಳನಿಗೆ ಕೊಟ್ಟುಬಿಟ್ಟಿದ್ದೇನೆ.

**ಪವನ:** ತಾವು ಓರ್ವ ಮರ್ತ್ಯಲೋಕದ ಪುರುಷನಿಗೆ ದೇವತೆಗಿಂತ ಹೆಚ್ಚಿನ ಹಾಗೂ ಪ್ರಥಮ ಸ್ಥಾನ ಕೊಡುತ್ತಿದ್ದೀರಿ. ಇದರ ಫಲ ಒಳ್ಳೆಯದಾಗುವುದಿಲ್ಲ.

**ದಮಯಂತಿ:** ಪ್ರೇಮ ಮತ್ತು ಭಕ್ತಿ, ಫಲ ಮುಂತಾದವುಗಳಿಂದ ನಿಷ್ಕಾಮ ವಾಗಿರುತ್ತದೆ. ನನ್ನ ಓರ್ವ ಸಖಿ ಹತ್ತಿರದ ಕೋಣೆಯಲ್ಲಿ ನನ್ನ ದಾರಿ ಕಾಯುತ್ತಿದ್ದಾಳೆ, ನಾನು ತಮ್ಮಲ್ಲಿ ಕ್ಷಮೆಯಾಚಿಸುತ್ತೇನೆ, ದೇವ.

**ಪವನ:** (ಕ್ರೋಧದಿಂದ) ನನಗೆ ಗೊತ್ತಿದೆ, ಆ ಸಖಿ, ರಾಜಾ ನಳನ ದೂತಿಯಾಗಿದ್ದಾಳೆ. ಆದರೆ ಅವಳು ಹೊರಟು ಹೋಗಿದ್ದಾಳೆ. ಕೇಸರಿಯ ತಿಲಕ ಹಚ್ಚಿರುವ, ದರ್ಪಣದ ಎದುರಿಗೆ ಬಿದ್ದಿರುವ ಈ ಪತ್ರ ರಾಜಾ ನಳನದಾಗಿದೆ. ಆದರೆ, ದೇವತೆ, ಈ ಪ್ರೇಮ ಸುಖ ಪೂರ್ಣವಾಗುವಂತೆ ಬಿಡಲಾರದು.

**ದಮಯಂತಿ:** ದೇವರ ಇಚ್ಛೆ ಇದ್ದಂತೆ ಆಗಲಿ. ನನ್ನನ್ನೇ ನಾನು, ರಾಜಾ ನಳನಿಗೆ ಅರ್ಪಿಸಿಕೊಂಡಿರುವೆ.

**ಪವನ:** ಆಗಲಿ, ತಾವು ಹಠದ ಆಧೀನರಾಗಿದ್ದೀರಿ. ಯೋಚನೆ ಮಾಡಿ, ನಾನಿನ್ನೂ ಸಮಯ ಕೊಡುತ್ತೇನೆ. ನಮಸ್ಕಾರ.
(ಮೊದಲಿನ ದೇವತೆಗಳ ಹಾಗೆಯೇ ಗವಾಕ್ಷದೊಳಗಿನಿಂದ ಹಾರಿಹೋಗುತ್ತಾನೆ.)

**ದಮಯಂತಿ:** (ಸ್ವಗತ) ಈ ಶೃಂಗಾರ-ಕುಂಜದಲ್ಲಿ ನನಗೆ ಈ ದೇವತೆಗಳ ಕಾಟದಿಂದ ಪುರುಸತ್ತೇ ಸಿಗಲಾರದು. ನಾನು ಇನ್ನೆಲ್ಲಿ ಹೋಗಿ, ನಳನ ಪ್ರೇಮ ಪತ್ರಕ್ಕೆ, ಉತ್ತರ ಬರೆಯಲಿ! ಈ ಕೆಲಸಕ್ಕೆ ನನ್ನ ದೃಷ್ಟಿಯಲ್ಲಿ, ಪಾಕ ಶಾಲೆಯೇ ಒಳ್ಳೆಯ ಸ್ಥಳವೆಂದು ಅನ್ನಿಸುತ್ತಲಿದೆ. ಅಲ್ಲೊಂದು ಮೂಲೆಯಲ್ಲಿ ಕುಳಿತು ನಾನು ಪತ್ರ ಬರೆಯುವೆ. ದಾಸಿಯರು ಅಲ್ಲಿರುತ್ತಾರೆ, ಆದರೆ ದಾಸಿಯರಿಂದ ಯಾವ ಮಾತು ರಹಸ್ಯವಾಗಿ ಉಳಿದಿದೆ. ಅದೂ ಅಲ್ಲದೆ, ಈಗ, ಮುಚ್ಚಿಡುವುದಾದರೂ ಏನಿದೆ? ನಳ ಬಯಸುತ್ತಾನೆ, ನಾನು ಕೂಡಲೇ ಸ್ವಯಂವರ ರಚಿಸಬೇಕೆಂದು. ಮುಂದಿನ ತಿಂಗಳು, ಪೂರ್ಣಿಮೆಯ ದಿನ, ಸ್ವಯಂವರವನ್ನು ತಂದೆಯವರ ಆಜ್ಞೆ ಪಡೆದು, ರಚಿಸುವೆನೆಂದು ಬರೆದುಬಿಡುತ್ತೇನೆ.

(ಶೃಂಗಾರ-ಕುಂಜದಿಂದ ಹೊರಟು ಹೋಗುತ್ತಾಳೆ.)

# ಅಂಕ: ನಾಲ್ಕು

ಮಹಾರಾಜ ಭೀಮನ ರಾಜಧಾನಿ ವಿದರ್ಭದಲ್ಲಿ ದಮಯಂತೀ ಸ್ವಯಂವರ ಸಮಾಗಮ. ಬಹುದೊಡ್ಡ ರೇಶ್ಮೆಯ ಶಾಮಿಯಾನೆಯ ಕೆಳಗೆ ಹಾಗೂ ಕನಾತಗಳ ಮಧ್ಯ ಹಾಸಿದ ಬಹು ಬೆಲೆಯುಳ್ಳ ರತ್ನಗಂಬಳಿಗಳ ಮೇಲೆ, ಬೇರೆ ಬೇರೆ ದೇಶಗಳ ರಾಜಕುಮಾರರು, ತಮ್ಮ ಸಂಗಡಿಗರು ಸಹಿತ ಗಿಡ-ಬಳ್ಳಿಗಳ ಸಮೂಹದಲ್ಲಿ, ಆಕಾಶದಲ್ಲಿ ನಕ್ಷತ್ರಗಳು ಚಲಿಸಿದ ಹಾಗೆ, ಹೊಳೆದ ಹಾಗೆ ಕುಳಿತಿದ್ದಾರೆ, ನಿಂತಿದ್ದಾರೆ ಅಥವಾ ಅತ್ತ-ಇತ್ತ ಅಲೆದಾಡುತ್ತಿರುವಂತೆ ತೋರುತ್ತಿದ್ದಾರೆ. ಮತ್ತು ಇದರ ಮಧ್ಯ ಸಖಿಯರ ಸಮೂಹದಲ್ಲಿ ಚಂದ್ರಮುಖಿ ದಮಯಂತಿ ಅಲೆದಾಡುತ್ತಿದ್ದಾಳೆ. ವಿಶೇಷ ರೂಪದ ರುಮಾಲು ಹಾಗೂ ಅವುಗಳ ಮೇಲೆ ಧರಿಸಿರುವ ಶಿರಪೇಚಗಳಿಂದಾಗಿ ಸಂಗಡಿಗರ ಜೊತೆಗಿದ್ದರೂ ಅವರು ಯಾವ ಯಾವ ರಾಜ್ಯದ ರಾಜರೆಂಬುದನ್ನು ಸುಲಭವಾಗಿ ಗುರುತಿಸಬಹುದಾಗಿದೆ. ದಮಯಂತಿಗೆ ಈ ರಾಜಕುಮಾರರಲ್ಲಿ ಒಬ್ಬರನ್ನು ವರನನ್ನಾಗಿ ಆರಿಸಿಕೊಳ್ಳಬೇಕಾಗಿದೆ. ಇವರಲ್ಲಿ ಯಾರನ್ನೂ ಆರಿಸದೆ ಇರಬಹುದಾಗಿದೆ, ಆಕೆ. ಇಂಥ ಸ್ಥಿತಿಯಲ್ಲಿ ಬಹುಶಃ ಆಕೆಗೆ, ತನ್ನ ತಂದೆಯ ಮುಖಾಂತರ ಆರಿಸಿದ ವರ ಸ್ವೀಕಾರವಿರಲಿ ಬಿಡಲಿ, ಆರಿಸಿಕೊಳ್ಳಬೇಕಾಗಬಹುದು. ಈ ಸಮಾಗಮದಲ್ಲಿ ಬ್ರಾಹ್ಮಣ, ಗಂಧರ್ವ ಮತ್ತು ಜ್ಯೋತಿಷಿ ಮುಂತಾದವರು ಕೂಡ ಒಬ್ಬಂಟಿಗರಾಗಿ ಅಥವಾ ಗುಂಪುಗಳಾಗಿ ಅಡ್ಡಾಡುತ್ತಿರುವಂತೆ ಕಾಣಬರುತ್ತಿದ್ದಾರೆ. ಅಲ್ಲಿ-ಇಲ್ಲಿ ಬಹು ಮಿದುವಾಗಿ ಸಂಗೀತದ ಅಲೆಗಳು ಏಳುತ್ತಲಿವೆ, ಕೆಲವೆಡೆ ಪಗಡಿಯ ಆಟ, ಜೂಜಾಟ ನಡೆದಿದೆ. ಒಂದೆರಡು ತಾಸಿನಲ್ಲಿಯೇ ದಮಯಂತಿ ತನ್ನ ವರನನ್ನು ಆರಿಸಿಕೊಳ್ಳಬೇಕೆಂಬ ಅವಶ್ಯಕತೆ ಏನೂ ಇಲ್ಲ. ಈ ಕೆಲಸಕ್ಕಾಗಿ ಅವಳೆದುರಿನಲ್ಲಿ ಇಡೀ ದಿನ ಬಿದ್ದಿದೆ. ಅದೂ ಅಲ್ಲದೆ ಸಮಾಗಮದ ವೈಭವ ಕೂಡ, ಈಗಲೇ ವರನ ಆಯ್ಕೆಯಾಗದಿರಲೆಂದು ಬಯಸುತ್ತದೆ, ಆಯ್ಕೆಯಾಗುವುದಾದರೆ ಸೂರ್ಯಾಸ್ತದ ಹೊತ್ತಿಗೆ ಆಗಲಿ ಎಂದು ಬೇಡುತ್ತದೆ. ನಮ್ಮ ಧ್ಯಾನದ ಕೇಂದ್ರ ಈ ಸಮಯದಲ್ಲಿ ಒಂದು ಮಂಡಲಿಯ

**ಮೇಲಿದೆ. ಅದರಲ್ಲಿ ರಾಜಾ ನಳ ಇನ್ನು ಮೂರು ಮಂದಿಯೊಂದಿಗೆ ಪಗಡಿ ಆಡುತ್ತಿದ್ದಾನೆ. ಅವರು ಮೂವರು ಅಗ್ನಿ, ಜಲ, ಪವನ ಈ ಮೂವರು ದೇವತೆಗಳು. ಈ ಮೊದಲು ಒಬ್ಬೊಬ್ಬರಾಗಿ ಬಂದು ಏಕಾಂತದಲ್ಲಿ ದಮಯಂತಿಯನ್ನು ಕಂಡು ಹೋಗಿದ್ದಾರೆ. ಆ ಭೇಟಿಯಲ್ಲಿ ದಮಯಂತಿ ಇವರಿಗೆ ಆಶಾಪೂರ್ಣ ಉತ್ತರ ನೀಡಿರಲಿಲ್ಲ. ಆದರೂ ಅವರು ತಮ್ಮ ಶಕ್ತಿಯ ಬಲದಿಂದ, ಭರವಸೆಯಿಂದ ಇಂದು ಸ್ವಯಂವರದಲ್ಲಿ ಬಂದಿದ್ದಾರೆ. ಹಾಗೂ ಮೂವರೂ ತಮ್ಮೊಂದಿಗೆ ಪಗಡಿ ಆಡಲು ರಾಜಾ ನಳನನ್ನು ಪ್ರೇರೇಪಿಸಿದ್ದಾರೆ. ದಮಯಂತಿ ಹಾಗೂ ಆಕೆಯ ಸಖಿಯರು ಈ ಮಂಡಲಿಯ ಸಮೀಪ ಬರುವ ಹೊತ್ತಿಗೆ ಅವರ ಆಟ ಮುಗಿದುಹೋಗಿರುತ್ತದೆ. ದಮಯಂತಿ ಈ ಮಂಡಲಿಯ ಹತ್ತಿರ ಬಂದು ನಿಲ್ಲುತ್ತಾಳೆ. ಮತ್ತು ಎಲ್ಲರ ದೃಷ್ಟಿ ಅವಳತ್ತ ಹರಿಯುತ್ತದೆ ಮತ್ತು ಅವರಲ್ಲಿ ಜಲ ಎಲ್ಲರಿಗಿಂತ ಮೊದಲು ಮಾತನಾಡುತ್ತಾನೆ.**

**ಜಲ:** ನೋಡಿ, ರಾಜಕುಮಾರಿ, ನಿಷಧ ನಗರದ ರಾಜಕುಮಾರ, ಈ ಲೋಕದಲ್ಲಿ, ಪಗಡಿ ಆಟದಲ್ಲಿ ತುಂಬ ಚತುರ ಆಟಗಾರನೆಂದು ತಿಳಿಯಲ್ಪಡುತ್ತಾನೆ, ಆದರೆ ನಮ್ಮಲ್ಲಿಯ ಇಬ್ಬರಿಂದ ಒಂದೊಂದು ಆಟವನ್ನು ಸೋತಿದ್ದಾನೆ ಹಾಗೂ ಮೂರನೆಯ ಆಟ ಆಡಲು ನನ್ನೊಂದಿಗೆ ಶರ್ತ ಕಟ್ಟುತ್ತಿದ್ದಾನೆ. ನನ್ನ ಸಂಗಡಿಗರಲ್ಲಿ ಈ ಆಟ ಆಡುವುದರಲ್ಲಿ ನನ್ನದು ಮಂದ ಬುದ್ಧಿ, ಆದರೆ ತಾವು ಇಲ್ಲಿ ನಿಂತು ಆಟ ನೋಡುತ್ತಿದ್ದರೆ, ನಾನು ರಾಜಕುಮಾರ ನಳನೊಂದಿಗೆ ಆಟ ಆಡಲು, ಶರ್ತ ಒಪ್ಪಿ ಅದರ ಬಗ್ಗೆ ಮುಂಗಡ ಇಡಲು, ಉತ್ಸಾಹವೆನಿಸುತ್ತದೆ.

**ದಮಯಂತಿ:** (ಮುಗುಳ್ನಗುತ್ತ) ಶರ್ತ ಏನು ಕಟ್ಟುವಿರಿ ?

**ಜಲ:** (ಕೊಂಚ ಯೋಚಿಸಿ) ಯಾರು ಸೋಲುತ್ತಾರೋ ಅವರು ತಮ್ಮ ಪ್ರಿಯತಮ ವಸ್ತುವನ್ನು ಬಿಟ್ಟುಕೊಡಬೇಕು.

**ದಮಯಂತಿ:** (ಬಿನ್ನಾಣತೋರುತ್ತ) ಏನು, ರಾಜಕುಮಾರ, ತಾವು ಇಂಥ ಶರ್ತ ಕಟ್ಟುವ ವಿಚಾರ ಮಾಡುತ್ತೀರಾ ?

**ನಳ:** (ಕೊಂಚ ವಿಚಾರ ಮಾಡಿ) ಈ ಪ್ರಶ್ನೆಯ ಉತ್ತರ, ನನಗೆ ತುಂಬ ಕಠಿಣವೆಂದು ತೋರುತ್ತಿದೆ.

**ಅಗ್ನಿ:** ಅದೇಕೆ, ಇದರಲ್ಲಿ ಕಠಿಣವೇನಿದೆ ?

**ನಳ:** ಮೊದಲ ತೊಂದರೆಯೆಂದರೆ, ನಾನು, ನನ್ನ ಪ್ರಿಯತಮ ವಸ್ತುವನ್ನು, ಗೆಲುವು ಅಥವಾ ಸೋಲಿನ ಯಾವುದೇ ಘಟನೆಯ ಆಧೀನ ಬಿಟ್ಟು ಕೊಡಲು ಸಿದ್ಧನಾಗಿಲ್ಲ. ಆದರೆ ಇದರಿಂದ ನನ್ನಲ್ಲಿ ಜೂಜನ್ನು ಆಡುವ ಮತ್ತು ಗೆಲ್ಲುವ ಸಾಹಸ ಇಲ್ಲವೆಂದೂ ಅಭಿಪ್ರಾಯವಾಗುತ್ತದೆ. ಈ

ಶರ್ತನ್ನು ಕಟ್ಟಲು ನನ್ನ ಪ್ರೇಮಕ್ಕಾಗಿ ಕಠಿಣವಾಗಿದೆ ಮತ್ತು ಕಟ್ಟದೆ ಇರಲು ನನ್ನ ಸ್ವಾಭಿಮಾನಕ್ಕೆ.

**ದಮಯಂತಿ:** ಓರ್ವ ಕ್ಷತ್ರಿಯನಿಗೆ, ಪ್ರೇಮ ಮತ್ತು ಸ್ವಾಭಿಮಾನಗಳಲ್ಲಿ ಆರಿಸುವಿಕೆ ಕಠಿಣವೇನೋ ಆಗುತ್ತದೆ, ಆದರೆ ಅದು ಅಸಾಧ್ಯವೆನಿಸಬಾರದು.

**ಪವನ:** ಸರಿಯಾದುದನ್ನೇ ಹೇಳಿದಿರಿ, ರಾಜಕುಮಾರಿ.

**ಅಗ್ನಿ:** ಅದರ ಆರಿಸುವಿಕೆಯೆಂದರೆ, ಪ್ರೇಮಕ್ಕೆ ಸ್ವಾಭಿಮಾನಕ್ಕಿಂತ ಎರಡನೆಯ ಸ್ಥಾನ ನೀಡಬೇಕು.

**ದಮಯಂತಿ:** ಪ್ರೇಮ ಸ್ವಾಭಿಮಾನದ ಇನ್ನೊಂದು ರೂಪ!

**ನಳ:** ಎರಡು ಸಮರೂಪಗಳಲ್ಲಿ ಆಯ್ಕೆಗೆ ಯಾವ ಅರ್ಥವೂ ಇಲ್ಲ. ಆದ್ದರಿಂದ ಇಲ್ಲಿ ಆಯ್ಕೆಯ ಅವಶ್ಯಕತೆಯೇ ಬೇಕಾಗಿಲ್ಲ.

**ಓರ್ವಸಖಿ:** ಅಭಿಮಾನ ಕೂಡ ಪ್ರೇಮದ ಒಂದು ರೂಪವೇ ಆಗಿದೆ.

**ಜಲ:** ಆದರೆ ಅಭಿಮಾನ, ಪೂರ್ಣ ಪ್ರೇಮವಲ್ಲ ಮತ್ತು ಪ್ರೇಮ, ಪೂರ್ಣ ಅಭಿಮಾನವಲ್ಲ.

**ಅಗ್ನಿ:** ಹಾಗಾದರೆ, ಎರಡರಲ್ಲೂ ಭೇದ ಅವಶ್ಯವಿದೆ.

**ಪವನ:** ಇದರಿಂದಾಗಿ ಈ ಎರಡರಲ್ಲಿ, ಇಲ್ಲಿ ಆಯ್ಕೆ ಮಾಡುವುದೂ ನಿರರ್ಥಕವಲ್ಲ, ಆವಶ್ಯಕವಾಗಿದೆ.

**ನಳ ಸಂಗಡಿಗ:** ಸಮಸ್ಯೆ, ಆಗಲೂ ಕಠಿಣವಾಗಿಯೇ ಉಳಿಯುತ್ತದೆ.

**ನಳ:** ಇದರ ನಿರ್ಣಯವನ್ನು ನಾವು, ರಾಜಕುಮಾರಿ ದಮಯಂತಿಯ ಮೇಲೆ ಬಿಟ್ಟುಬಿಡುತ್ತೇವೆ.
(ಈ ಮಾತಿನಿಂದ ಜಲ ಮತ್ತು ಅವನ ಸಂಗಡಿಗರಿಗೆ ಒಂದು ರೀತಿಯ ಆಘಾತವಾಗುತ್ತದೆ. ಆದರೆ ಕೂಡಲೇ ಸಾವಧಾನರಾಗುತ್ತಾರೆ, ಹಾಗೂ ಇದರ ನಿರ್ಣಯ ದಮಯಂತಿಯಿಂದಲೇ ಆಗಬೇಕೆಂದು ಬಯಸುವವರಂತೆ ಆಚರಿಸುತ್ತಾರೆ.)

**ದಮಯಂತಿ:** (ಮುಗುಳ್ನಗುತ್ತಾ) ತಮ್ಮ ಕಷ್ಟವನ್ನು ನನ್ನ ಮೇಲೆ ಹೊರಿಸುತ್ತಿದ್ದೀರಿ.

**ಸಖಿ:** ದೇವತೆಗಳದು ಯಾವಾಗಲೂ ಹೀಗೆಯೇ...

**ದಮಯಂತಿ:** ಹಾಗೂ ಪುರುಷರದೂ ಕೂಡ.

**ಸಖಿ:** ಹಾಗಾದರೆ ದಮಯಂತಿಗೆ ಈ ಕರ್ತವ್ಯ ಪಾಲಿಸಲೇಬೇಕಾಯಿತು.

**ದಮಯಂತಿ:** (ಸ್ವಲ್ಪ ಯೋಚಿಸಿ) ರಾಜಕುಮಾರ ನಳ, ಕ್ಷತ್ರಿಯನಾದವನಿಗೆ ಸ್ವಾಭಿಮಾನ ಪ್ರೇಮಕ್ಕಿಂತ ಹಿರಿದು, ಅದಕ್ಕೇ ಮೊದಲ ಸ್ಥಾನ ನೀಡಬೇಕು.

**ನಳ:** (ಇದಕ್ಕೂ ಹೆಚ್ಚು ಏನನ್ನೂ ಕೇಳಲು ಬಯಸದೆ) ಸರಿ, ಇದುವೇ ರಾಜಕುಮಾರಿಯ ನಿರ್ಣಯವಾಗಿದ್ದಲ್ಲಿ, ನಾನು ಶರ್ತ ಕಟ್ಟಿ ಆಡಲು ಸಿದ್ಧನಿದ್ದೇನೆ. (ಎಲ್ಲರೂ ಚಪ್ಪಾಳೆ ತಟ್ಟಿ ಈ ನಿರ್ಣಯದ ಸ್ವಾಗತಗೈಯುತ್ತಾರೆ.)

**ದಮಯಂತಿ:** ಆದರೆ ನಿಲ್ಲಿ! ಒಂದು ಮಾತು ನನಗೆ ತಿಳಿಸಿ. ಮೊದಲ ಎರಡು

ಆಟಗಳಲ್ಲಿ ಏನಾದರೂ ಶರ್ತ ಕಟ್ಟಲಾಗಿತ್ತೇ ?

**ನಳ:** (ಗಾಬರಿಯಿಂದ) ಇಲ್ಲ, ಇಂಥ ಯಾವ ಶರ್ತನ್ನೂ ಕಟ್ಟಲಾಗಿರಲಿಲ್ಲ.

**ಅಗ್ನಿ:** ಆದರೆ, ರಾಜಕುಮಾರಿ, ಆ ಎರಡು ಆಟಗಳಲ್ಲಿ ರಾಜಕುಮಾರ ಬಹಳಷ್ಟನ್ನು ಸೋತಿದ್ದಾನೆ.

**ದಮಯಂತಿ:** (ಚಿಂತಾಪೂರ್ಣ ಉತ್ಸುಕತೆಯಿಂದ) ಅದು ಏನು ? ರಾಜಕುಮಾರ ನಳ, ಏನನ್ನಾದರೂ ಸೋತಿದ್ದಾರೆಯೇ ?

**ಅಗ್ನಿ:** ತನ್ನ ರಾಜ್ಯದ ಸಮಸ್ತ ಕೃಷಿ ಭೂಮಿಯನ್ನು ಪವನದೇವನ ಹತ್ತಿರ ಅಡವು ಇಟ್ಟಿದ್ದಾನೆ, ಪವನದೇವನ ದಯೆ ಆದರೆ, ಸಾಗರದಿಂದ ಮೋಡಗಳನ್ನು ಹಾರಿಸಿಕೊಂಡು ಬಂದು, ಅಲ್ಲಿ ಮಳೆಯಾಗಿಸಿ ಭೂಮಿಗೆ ನೀರುಣಿಸಬಹುದು. ಒಂದು ವೇಳೆ ಪವನದೇವ, ಮೋಡಗಳನ್ನು ತರದಿದ್ದರೆ ಮಳೆಯಾಗುವುದಿಲ್ಲ ಮತ್ತು ರಾಜಕುಮಾರನ ದೇಶದಲ್ಲಿ ಭೂಮಿ ಒಣಗಿ ಅಕಾಲ ತಾಂಡವವಾಡುತ್ತದೆ.

**ದಮಯಂತಿ:** ಪರವಾಯಿಲ್ಲ, ಆದರೆ ಪವನದೇವನ ಧರ್ಮ ಚಲಿಸುವುದು, ಸಾಗರದಿಂದ ಮೋಡಗಳನ್ನು ತರುವ ಕರ್ತವ್ಯದಿಂದ ಆತ ಹೇಗೆ ಮುಕ್ತನಾಗುತ್ತಾನೆ ?

**ಸಖಿ:** ಇನ್ನೊಂದು ಆಟದ್ದು, ರಾಜಕುಮಾರ ನಳ ಆ ಆಟದಲ್ಲಿ ಅಗ್ನಿದೇವನೊಂದಿಗೆ ಸೋತಿರುವುದು ಸ್ಪಷ್ಟವಿದೆ, ಆಗ ಏನು ಶರ್ತ ಕಟ್ಟಲಾಗಿತ್ತು ?

**ಪವನ:** ಹಾಂ ! ಅದರಲ್ಲಿ ರಾಜಕುಮಾರ ನಳ ತನ್ನ ರಾಜ್ಯದ ಸಮಸ್ತ ವನಸ್ಪತಿ ಸಂಪತ್ತನ್ನು ಅಗ್ನಿದೇವನಿಗೆ ಸೋತಿದ್ದಾನೆ.

**ದಮಯಂತಿ:** (ಮೆತ್ತಗಿನ ದನಿಯಲ್ಲಿ) ಪಾಪ ನಳ, ದೇವತೆಗಳೊಂದಿಗೆ ಕಣಕ್ಕಿಳಿದು ಬಿಟ್ಟಿದ್ದಾನೆ.
(ಸಖಿಯನ್ನು ಕರೆದುಕೊಂಡು ಆಚೆ ಹೊರಟು ಹೋಗುತ್ತಾಳೆ.)

**ಸಖಿ:** ಮನುಷ್ಯ, ದೇವತೆಗಳೊಂದಿಗೆ ಗೆಲ್ಲುವುದು ಹೇಗೆ ಸಾಧ್ಯ ?

**ದಮಯಂತಿ:** ಆದರೆ ಆತ ಗೆಲ್ಲಲೇಬೇಕು. (ಸಖಿಯ ಕಿವಿಯಲ್ಲಿ ಏನೋ ಹೇಳುತ್ತಾಳೆ, ಅದರಿಂದಾಗಿ ಸಖಿ ಅಲ್ಲಿಯೇ ನಿಲ್ಲುತ್ತಾಳೆ ಮತ್ತು ದಮಯಂತಿ ಕೊಂಚ ಮುಂದಕ್ಕೆ ಹೊರಟು ಹೋಗುತ್ತಾಳೆ.)
(ಈಗ ನಮ್ಮ ಧ್ಯಾನ ರಂಗಮಂಚದ ಇನ್ನೊಂದು ಭಾಗದ ಕಡೆಗೆ ಹೋಗುತ್ತದೆ. ದಮಯಂತಿ ಹೋಗುತ್ತಿರುವಂತೆ ಆಕೆಗೆ ಭೀಮ ರಾಜ ಹಾಗೂ ಆತನ ಮಂಡಳಿ ಸಿಗುತ್ತದೆ ಮತ್ತು ಭೀಮ ರಾಜನ ಓರ್ವ ನವಯುವಕ ಸಂಗಡಿಗ, ದಮಯಂತಿಯ ಹತ್ತಿರದ ಸಂಬಂಧಿ ಸೋದರ ಮಾವನಿರಬೇಕು, ಮಾತನಾಡುತ್ತಾನೆ.)

**ಸೋದರ ಮಾವ:** ಸೋದರಿ, ಈ ರಾಗ ರಂಗದ ಶಿಖರ, ಇನ್ನೂ ಎಷ್ಟು ದೂರವಿದೆ ?

**ದಮಯಂತಿ:** (ಮುಗುಳ್ನಗುತ್ತ) ನಾನಿನ್ನೂ ಅರ್ಧದಷ್ಟು ಮಂಟಪವನ್ನೂ ಸುತ್ತಿಲ್ಲ, ಅದೇಕೆ ಇಲ್ಲಿಯ ಕೋಲಾಹಲದಿಂದ ಸುಸ್ತಾಯಿತೇ ?

**ಸೋದರ:** ಇಂಥ ರಾಗ ರಂಗದಿಂದ ಬಳಲಿಕೆ ಎಂಥದು! ಆದರೂ ಮನದ ಉದ್ವೇಗ, ಹಿಮಾಲಯದ ರಾಜದೇವ, ಜಲ, ಆತನ ಅಲೌಕಿಕ ಚೆಲುವು ಕೇಳಬಲ್ಲೆ, ನಾನಂತೂ ಅತ್ತಲೇ ಹೊರಟಿದ್ದೇನೆ.

**ದಮಯಂತಿ:** ಹಾಂ, ಹೋಗಿ, ಹೋಗಿ! (ಬೆರಳಿನಿಂದ ಅತ್ತ ತೋರಿಸುತ್ತ) ಅವರು ಪಗಡಿ ಆಡುತ್ತಿದ್ದಾರೆ-ವಿಂಧ್ಯಾಚಲದ ರಾಜದೇವ ಅಗ್ನಿಯೂ ಅಲ್ಲಿಯೇ ಇದ್ದಾನೆ ಹಾಗೂ ಪೂರ್ವದ ಪವನದೇವ ಕೂಡ.

**2ನೆಯುವಕ:** (ಇವನಿಗೆ ಬಹುಶಃ ಉಳಿದವರಿಂದ ರಹಸ್ಯವಾಗಿಟ್ಟ ಮಾತುಗಳ ಜ್ಞಾನವಿದೆ) ಆ ಕಡೆಯ ಆಟದ ಆ ನಾಲ್ಕನೆಯ ಆಟಗಾರ ಯಾರು ? ಅವನ ಹೆಸರನ್ನು ರಾಜಕುಮಾರಿ ಹೇಳಲಿಲ್ಲ.

(ದಮಯಂತಿಯ ಮುಖ, ಈ ಮಾತು ಕೇಳಿ ಲಜ್ಜೆಯಿಂದ ಹೊಳೆಯುತ್ತದೆ, ಅವಳು ಸುಮ್ಮನಿರುತ್ತಾಳೆ.)

**ಭೀಮರಾಜ:** ಹಾಂ, ಆ ನಾಲ್ಕನೆಯವನು ಯಾರು ? ಅವನೂ ಅವರ ಮಂಡಲಿಯವನೋ ಅಥವಾ ಹೊರಗಿನವನೋ ?

**ನವಯುವಕ:** ಆತ ನಿಷಧ ರಾಜ್ಯದ ರಾಜಕುಮಾರ ನಳ. ಅವರ ಮಂಡಳಿಯಲ್ಲಿ ಈ ವರೆಗೂ ಅವನ ಪ್ರವೇಶವಾದುದನ್ನು ಎಂದೂ ನೋಡಿರಲಿಲ್ಲ. ಬಹುಶಃ ಈಗ ಆಗಬಹುದು.

**ದಮಯಂತಿ:** (ಮಾತಾಡದೆ ಇರಲು ಸಾಧ್ಯವಾಗದೆ) ಏತಕ್ಕಾಗಿ ಪ್ರವೇಶ ಮಾಡಲು ಯೋಗ್ಯನಾಗಿದ್ದಾನೆ, ಪಾಪ, ಆ ಶಕ್ತಿಗಳ ಮಂಡಲಿಯಲ್ಲಿ ? ಆಟದಲ್ಲಿ ಎರಡು ಸಲ ಈಗಾಗಲೇ ಪವನ ಹಾಗೂ ಅಗ್ನಿದೇವತೆಗಳಿಗೆ ಸೋತಿದ್ದಾನೆ.

**ಭೀಮರಾಜ:** ಎರಡು ಆಟಗಳನ್ನು ಸೋತಿದ್ದಾನೆಯೇ ? ಹಾಗಾದರೆ ಅವನ ಹತ್ತಿರ ಉಳಿದಿರುವುದಾದರೂ ಏನು ? ಅವನಿಗೆ ಸ್ವಯಂವರದಲ್ಲಿ ಭಾಗ ವಹಿಸುವ ಅಧಿಕಾರ ನೀಡುವುದಾದರೂ ಹೇಗೆ ?

**ದಮಯಂತಿ:** (ತಾನು ಈ ಮಾತು ಹೇಳಿದ್ದು ತಪ್ಪೆನಿಸಿ, ಅದನ್ನು ತಿದ್ದಿಕೊಳ್ಳಲೋಸುಗ) ಈಗ ಮೂರನೆಯ ಶರ್ತ ಜಲದೇವನೊಂದಿಗೆ ಕಟ್ಟಿದ್ದಾನೆ, ಬಹುಶಃ ಇದನ್ನು ಗೆಲ್ಲಬಹುದೆಂದು ತೋರುತ್ತದೆ.

**ಭೀಮರಾಜ:** ಹಾಂ, ಈ ಮೂರನೆಯ ಶರ್ತನ್ನು ಗೆದ್ದಲ್ಲಿ ಬಹುಶಃ ಮತ್ತೆ ಆರಂಭದಿಂದ ಜೀವಿಸುವವರ ಸಾಲಿನಲ್ಲಿ ಬರುತ್ತಾನೆ.

**1ನೆ ಯುವಕ:** ಆದರೆ ನಳ ಗೆಲ್ಲಬಹುದೆಂಬುದರ ಬಗ್ಗೆ ನನಗೆ ಆಶೆಯಿಲ್ಲ, ಜಲದೇವ ಉಳಿದವರಿಗಿಂತ ಮಹಾ ಘಾತಕ, ಚಾಲಾಕು; ಅವನು ನಳನಿಂದ ಸೋಲುವ ಮಾತೇ ಇಲ್ಲ.

**ದಮಯಂತಿ:** ನಾನು ಸಖಿ, ಕಲ್ಪನಾಳನ್ನು ಅಲ್ಲಿ ನಿಲ್ಲಿಸಿ ಬಂದಿದ್ದೇನೆ, ಅವನಿಂದ

ಏನಾದರೂ ಅನ್ಯಾಯವಾಗುವುದು ಕಂಡರೆ ಅವನಿಗೆ ಎಚ್ಚರಿಕೆ ನೀಡಲು.

**ಭೀಮರಾಜ:** (ಮುಗ್ಧ ಭಾವದಿಂದ) ಮಗಳೇ, ನೀನೇಕೆ ಈ ಚಿಂತೆ ಮಾಡುತ್ತಿರುವೆ ? ಜಲದೇವ ನಮ್ಮೊಂದಿಗೆ ವೈರತ್ವ ಸಾಧಿಸಬಹುದು, ಇದರಿಂದ.

**1ನೆ ಯುವಕ:** ಎಲ್ಲಿ ಪ್ರೇಮವಿದೆಯೋ ಅಲ್ಲಿ ದ್ವೇಷ ಎಂಥ ಸ್ಥಿತಿಯಲ್ಲಾದರೂ ಬರುತ್ತದೆ. ಆದ್ದರಿಂದ ಹೆದರಿಕೆ ಎಲ್ಲಿಯದು ? ಏನು ಸೋದರಿ, ಸರಿ ತಾನೇ ?

**ದಮಯಂತಿ:** (ಮತ್ತೆ ಲಜ್ಜೆಯಿಂದ) ತಾವು ಚೆನ್ನಾಗಿ ಬಲ್ಲಿರಿ, (ಹೇಳಲು ಇನ್ನಾವ ಮಾತು ಇಲ್ಲದ್ದರಿಂದ ಭೀಮರಾಜ ಮತ್ತು ಸಂಗಡಿಗರು ಮುಂದೆ ಸಾಗುತ್ತಾರೆ, ನಳ ಮತ್ತು ದೇವ ಮಂಡಲಿ ಆಡುತ್ತಿರುವ ಕಡೆ. ದಮಯಂತಿ ಇದಿರ ದಿಕ್ಕಿನಲ್ಲಿ ಹೊರಟು ಹೋಗುತ್ತಾಳೆ.)

(ಪ್ರೇಕ್ಷಕರ ಧ್ಯಾನದ ಕೇಂದ್ರ ಮತ್ತೆ ಅದೇ ಮಂಡಲಿಯಾಗುತ್ತದೆ. ಈ ಮಂಡಲಿಯ ಸಮೀಪ ಭೀಮರಾಜ ಹಾಗೂ ಅವನ ಸಂಗಡಿಗರು ಬಂದು ನಿಂತಿದ್ದಾರೆ.)

**ಜಲ:** (ಭೀಮರಾಜ ಬಂದುದನ್ನು ನೋಡಿ ಎತ್ತರದ ಹಾಗೂ ಬೇಸರಿನ ಧ್ವನಿಯಲ್ಲಿ) ನೋಡಿ, ಮಹಾರಾಜ, ಈ ಸಖೀ ನಮ್ಮ ಆಟದಲ್ಲಿ ಅನುಚಿತವಾಗಿ ವಿಘ್ನವನ್ನುಂಟುಮಾಡುತ್ತಿದ್ದಾಳೆ.

**ಭೀಮರಾಜ:** (ವಿಘ್ನದ ಭಾವ, ಸಖಿಯ ರೂಪದ ಪ್ರಭಾವವೆಂದು ತಿಳಿದು) ಪುರುಷರ ಆಟದಲ್ಲಿ ನಾರೀ-ರೂಪ, ವಿಘ್ನವನ್ನುಂಟುಮಾಡುವ ಅಧಿಕಾರ ಹೊಂದಿರುತ್ತದೆ, ರಾಜಾ ಜಲದೇವ !

**ಜಲ:** ಆದರೆ ಇದು ರೂಪ-ವಿಘ್ನವಲ್ಲ, ಕುಟಿಲ–ವಿಘ್ನವನ್ನುಂಟು ಮಾಡುತ್ತಿದ್ದಾಳೆ. ಅದೆಷ್ಟೋ ಸಲ ನಾನು ಕವಡಿ ಹಾಕಿದಾಗಲೆಲ್ಲ, ಈಕೆ ರತ್ನಗಂಬಳಿಯನ್ನು ಅಲ್ಲಾಡಿಸುತ್ತಾಳೆ, ಆಗ ನಾನು ಹಾಕಿದ ಕವಡಿಗಳು ತಿರುವು-ಮುರುವು ಆಗಿ ಆಗಬಾರದ್ದೆಲ್ಲ ಆಗಿಹೋಗುತ್ತದೆ.

**ಅಗ್ನಿ:** ಆದರೂ ಜಲದೇವನೇ ಗೆಲ್ಲುತ್ತಿದ್ದಾನೆ, ಮಹಾರಾಜ !

**ಭೀಮರಾಜ:** ಈ ಆಟವನ್ನು ರಾಜಕುಮಾರ ನಳ ಗೆಲ್ಲುತ್ತಾನೆಂದು ನಾವು ಕೇಳಿದ್ದೆವು. ಆದರೆ ನೀವು ಹೇಳುತ್ತಿದ್ದೀರಿ ಆತ ಸೋಲುತ್ತಿದ್ದಾನೆಂದು. ಈ ಮೂರನೆಯ ಆಟದಲ್ಲೂ ಸೋತರೆ ಈತನಿಗೆ ಗತಿಯೆಲ್ಲಿ ? ಜಲದೇವ, ಈ ರಾಜಕುಮಾರನ ಮೇಲೆ ದಯೆದೋರಬೇಕು. ಈ ಆಟವನ್ನು ಈತ ಗೆದ್ದುಕೊಳ್ಳಲಿ ಬಿಡಿ.

**ಜಲ:** (ಇನ್ನಷ್ಟು ಮುನಿಸಿಕೊಳ್ಳುತ್ತಾನೆ, ಭೀಮರಾಜ ಹಾಗೂ ದಮಯಂತಿಯ ವಿಚಾರ ಒಂದೇ ಇದೆಯೆಂದು ಅವನು ಭಾವಿಸು ತ್ತಾನೆ) ಹಾಗಾದರೆ ಈ ಸಖಿ, ತಮ್ಮ ಅಪ್ಪಣೆಯಿಂದಲೇ ನನ್ನ ಆಟದಲ್ಲಿ ವಿಘ್ನವನ್ನುಂಟುಮಾಡುತ್ತಿದ್ದಾಳೆಂದು ತೋರುತ್ತದೆ. ಅತಿಥಿಯನ್ನು ಮನೆಗೆ ಕರೆಯಿಸಿಕೊಂಡು ಈ ರೀತಿಯಾಗಿ ದ್ವೈತ ಭಾವ

ತೋರುವುದು ಉಚಿತವಲ್ಲ, ಮಹಾರಾಜ.

**ಭೀಮರಾಜ:** (ಕೊಂಚ ಅಂಜಿ) ಹಾಗಿಲ್ಲ, ಜಲದೇವ, ರಾಜಕುಮಾರ ನಳ ಹಾಗೂ ಅನ್ಯ ರಾಜಕುಮಾರರಂತೆ ತಾವೂ ನನ್ನ ಅತಿಥಿಗಳು. (ಸಖಿಗೆ ಬೆದರಿಸುವ ದನಿಯಲ್ಲಿ) ಕಲ್ಪನಾ, ನೀನು ಇಲ್ಲಿಂದ ಹೊರಟು ಹೋಗು. ನೀನು ಇಲ್ಲಿರುವುದು ರಾಜಾ ಜಲದೇವನಿಗೆ ಸರಿಯೆನಿಸುವುದಿಲ್ಲ. ನೀನು ಹೊರಟು ಹೋಗು. (ಕಲ್ಪನಾ ಅಲ್ಲಿಂದ ಹೊರಟ ಹಾಗೆ ಕಾಣುವುದಿಲ್ಲ.)

**ಜಲ:** ನೋಡುತ್ತಿದ್ದೀರಾ ಮಹಾರಾಜ, ಅವಳು ಇಲ್ಲಿಂದ ಹೊರಡುವ ವಿಚಾರದಲ್ಲಿಯೇ ಇಲ್ಲ.

**ಭೀಮರಾಜ:** (ಇನ್ನೂ ಜೋರಾದ ದನಿಯಲ್ಲಿ) ಕಲ್ಪನಾ, ಕೇಳಿಸುತ್ತಿಲ್ಲವೇ? ಹೊರಟು ಹೋಗು ಇಲ್ಲಿಂದ. (ಕಲ್ಪನಾ ಕೊಂಚ ಅಲ್ಲಿಂದ ಸರಿಯುತ್ತಾಳೆ, ಸರಿಯುತ್ತ ಸರಿಯುತ್ತ ಕಾಯಿಗಳನ್ನು ಸರಿದಾಡುವಂತೆ ಮಾಡುತ್ತಾಳೆ.)

**ಭೀಮರಾಜನ ಸಂಗಡಇರುವ ನವ ಯುವಕ:** (ಮೆತ್ತಗೆ) ಮಹಾರಾಜ, ಈ ಸಖಿ ರಾಜಕುಮಾರಿಯ ಆಜ್ಞಾನುಸಾರವಾಗಿ ಇಲ್ಲಿ ನಿಂತಿರಬೇಕು.

**ಭೀಮರಾಜ:** (ಎತ್ತರದ ದನಿಯಲ್ಲಿ) ಇಲ್ಲ, ಇವಳು ಇಲ್ಲಿ ನಿಂತು ಆಟದಲ್ಲಿ ವಿಘ್ನವನ್ನುಂಟು ಮಾಡಲು ಅವಕಾಶ ನೀಡಲಾಗುವುದಿಲ್ಲ. (ಇದನ್ನು ಕೇಳಿದ ಕಲ್ಪನಾ ಅಲ್ಲಿಂದ ಹೊರಟು ಹೋಗುತ್ತಾಳೆ.)
(ಆಟದ ಕಾಯಿಗಳು ತಿರುವು ಮುರುವು ಆದದ್ದರಿಂದ ಅವನ ಆಟ ಹಿಂದೆ ಬಿತ್ತೆಂದು ತೋರುತ್ತದೆ. ಇದರಿಂದಾಗಿ ಜಲದೇವ ತುಂಬ ಕ್ರೋಧಿತನಾದಂತೆ ತೋರುತ್ತಾನೆ.)

**ಜಲ:** ನನ್ನ ಆಟವನ್ನು ಕೆಡಿಸಿ ನನಗೆ ತುಂಬ ಹಾನಿಯನ್ನುಂಟು ಮಾಡಲಾಗಿದೆ. ಆದ್ದರಿಂದ ನಾನು ಈ ಕೈ ಇನ್ನೊಮ್ಮೆ ಆಡುತ್ತೇನೆ.

**ನಳ:** ಹೀಗೇಕೆ ಸಿಟ್ಟಿಗೇಳುತ್ತಿರುವೆ, ಜಲದೇವ? ಇನ್ನು ಈ ಕೈ ಅಷ್ಟು ನೋಡಿ. (ನಳ ಆಟ ಆಡುತ್ತಾನೆ)

**ಜಲ:** (ಕ್ರೋಧದಿಂದ) ಇಲ್ಲ, ಈ ನಿನ್ನ ಆಟವನ್ನು ಮನ್ನಿಸುವುದಿಲ್ಲ. ನಾನು ನನ್ನ ಆಟವನ್ನು ಮತ್ತೊಮ್ಮೆ ಆಡುತ್ತೇನೆ.

**ನಳ:** (ಕಠೋರತೆಯಿಂದ) ನಾನು ಈ ಕೈಯನ್ನೂ ಆಡುತ್ತೇನೆ, ತಾವು ಇದನ್ನು ಒಪ್ಪಲೇಬೇಕು.
(ಈ ವಾದ ವಿವಾದದಿಂದಾಗಿ ಭೀಮ ಕೊಂಚ ಹೆದರಿಕೊಳ್ಳುತ್ತಾನೆ; ಆದರೆ ದೇವಗಣ ಯೋಚಿಸಿ ಇನ್ನಷ್ಟು ವಾತಾವರಣ ಕೆಡಿಸದೆ ಶಾಂತರಾಗುತ್ತಾರೆ.)

**ಅಗ್ನಿ:** ಪರವಾಗಿಲ್ಲ, ಜಲದೇವ! ಈ ಆಟವನ್ನೂ ರಾಜಕುಮಾರರಿಗೆ ಕೊಟ್ಟು ಬಿಡಿ. (ಜಲದೇವ ಸುಮ್ಮನಿರುತ್ತಾನೆ; ಅಗ್ನಿದೇವನ ಮಾತನ್ನು

ಒಪ್ಪಿಕೊಂಡು.)

**ಅಗ್ನಿ:** ಇನ್ನೂ ಹೆಚ್ಚಿನ ಆಟವೊಂದನ್ನು ಬೇಡುತ್ತೀಯಾ, ರಾಜಕುಮಾರ? ನಾವು ಜಲದೇವರಿಂದ ಅದನ್ನೂ ಕೊಡಿಸುತ್ತೇವೆ.

**ನಳ:** (ಅಭಿಮಾನದಿಂದ) ದೇವತೆಗಳಿಂದ ನಾನು ಸೌಲಭ್ಯ ಯಾಚಿಸುವುದಿಲ್ಲ. ನಾನು ನನ್ನ ಅಧಿಕಾರದ ಮೇಲೆಯೇ ನಿರ್ಭರನಾಗಿರುತ್ತೇನೆ.

**ಅಗ್ನಿ:** ಆದರೆ ತಾವು ದೇವತೆಗಳನ್ನು ಗೆಲ್ಲಲಾರಿರಿ, ಒಲಿಸಿಕೊಳ್ಳಬಹುದು.

**ಭೀಮರಾಜ:** ಹಾಂ, ಹಾಂ! ಅಗ್ನಿದೇವ ಸರಿಯಾದುದನ್ನೇ ಹೇಳಿದ್ದಾರೆ. ದೇವತೆಗಳನ್ನು ಗೆಲ್ಲಲು ಸಾಹಸ ಮಾಡುವುದಕ್ಕಿಂತ, ಅವರನ್ನು ಒಲಿಸಿಕೊಂಡರೆ ಹೆಚ್ಚಿನ ಸಂಕಲ್ಪ-ಸಿದ್ಧಿಯಾಗುತ್ತದೆ.

**ನಳ:** ಆದರೆ, ಮಹಾರಾಜ, ತಮಗೆ ಗೊತ್ತಿಲ್ಲ, ಇಲ್ಲಿ ದೇವತೆಗಳು ಸಂಕಲ್ಪದಲ್ಲಿ ವಿಘ್ನವನ್ನುಂಟುಮಾಡಲು ತೊಡಗಿದ್ದಾರೆ. ಅವರು ಸಂಕಲ್ಪವನ್ನು ಬಿಟ್ಟರೆ ಮಾತ್ರ ಒಲಿಯುತ್ತಾರೆ.

**ಭೀಮರಾಜ:** ಹಾಗಾದರೆ, ಅಂಥ ಸಂಕಲ್ಪವನ್ನು ಬಿಟ್ಟುಬಿಡಿ. ದೇವತೆಗಳು ಆ ಸಂಕಲ್ಪದಿಂದ ಕ್ರೋಧಿತರಾಗುವುದಾದರೆ ಅಂಥ ಸಂಕಲ್ಪ ಬಿಟ್ಟುಬಿಡುವುದೇ ಲೇಸು.

**ನಳ:** ನನ್ನ ಸಂಕಲ್ಪ ಪವಿತ್ರವಾಗಿದೆ, ಆದ್ದರಿಂದ ಇದರಲ್ಲಿ ವಿಘ್ನವನ್ನುಂಟು ಮಾಡುವ ಯಾವ ಅಧಿಕಾರವೂ ದೇವತೆಗಳಿಗಿಲ್ಲ.

**ಜಲ:** ದೇವತೆಗಳಿಗೆ ಎಲ್ಲ ಅಧಿಕಾರವಿದೆ. ದೇವತೆಗಳ ಅಧಿಕಾರಕ್ಕೆ ಯಾವ ಸೀಮೆಯೂ ಇಲ್ಲ.

**ಅಗ್ನಿ:** ದೇವತೆಗಳಿಗೆ ಒಪ್ಪಿಗೆಯಾಗುವ ಸಂಕಲ್ಪ ಮಾತ್ರ ಪವಿತ್ರವಾದುದು.

**ನಳ:** ಹಾಗಾದರೆ ಮಾನವನ ಸ್ಥಾನ ಎಲ್ಲಿ? ಮಾನವನ ಅಧಿಕಾರಕ್ಕೂ ಏನಾದರೂ ಅರ್ಥವಿದೆಯೋ ಇಲ್ಲವೋ?

**ಪವನ:** ದೇವತೆಗಳ ಮೇಲೆ ಮಾನವನ ಯಾವ ಅಧಿಕಾರವೂ ಇಲ್ಲ.

(ಈ ಚರ್ಚೆಯ ಹೊತ್ತಿನಲ್ಲಿಯೇ ಪವನ ದೇವ ಆಟದ ಕಾಯಿಗಳನ್ನು ಜಲದೇವನಿಗೆ ಜಯ ತರುವ ಹಾಗೆ ಬದಲಿಸಿದ್ದಾನೆ. ನಳ ಈ ಕುತಂತ್ರವನ್ನು ನೋಡಿ ಕೃದ್ಧನಾಗುತ್ತಾನೆ.)

**ನಳ:** (ಸಿಟ್ಟಿನಿಂದ) ಮನುಷ್ಯನೊಂದಿಗೆ ವಂಚನೆ, ಮೋಸಮಾಡುವ ಅಧಿಕಾರವೂ ದೇವತೆಗಳಿಗಿದೆ ಎಂದು ತೋರುತ್ತದೆ! ನಮ್ಮ ಮಾತುಗಳ ಮಧ್ಯದಲ್ಲಿ, ಪವನದೇವ, ಕಾಯಿಗಳ ಸ್ಥಾನ ಬದಲಿ ಮಾಡಿದ್ದಾರೆ.

**ಅಗ್ನಿ:** ರಾಜಕುಮಾರ ನಳ, ದೇವತೆಗಳ ಅಪಮಾನ ಮಾಡುತ್ತಿರುವಿರಿ, ಇದರ ಪರಿಣಾಮ ತಮಗೆ ಶುಭವನ್ನು ತರಲಾರದು.

**ನಳ:** ನನಗೆ, ನನ್ನ ಬಗೆಗೆ ದೇವತೆಗಳಲ್ಲಿರುವ ಶುಭ-ಭಾವಗಳ ಪರಿಚಯ ಚೆನ್ನಾಗಿ ಆಗಿದೆ. ಈಗ ನನಗೆ ದೇವತೆಗಳಿಂದ ಯಾವುದೇ ಶುಭ

ಕಾಮನೆಗಳ ಆಶೆ ಇಲ್ಲ.

**ಭೀಮರಾಜ:** ರಾಜಕುಮಾರ, ಈ ಶುಭ ಪ್ರಸಂಗದಲ್ಲಿ ತಾವು ದೇವತೆಗಳು ಕ್ರುದ್ಧರಾಗುವಂಥ ಯಾವ ಮಾತನ್ನೂ ಆಡುವುದು ನನಗಷ್ಟು ಹಿಡಿಸುವುದಿಲ್ಲ. ಅವರಿಗೆ ಅಪಮಾನವಾಗುವುದನ್ನೂ ನಾನು ಸಹಿಸುವುದಿಲ್ಲ. ತಮ್ಮಲ್ಲಿ ಶಕ್ತಿ ಇರಬಹುದು, ಆದರೆ ದೇವತೆಗಳನ್ನು ಕ್ರುದ್ಧಗೊಳಿಸುವ ಸಾಹಸ ನಾನು ಮಾಡಲಾರೆ. ತುಂಬ ಒಳ್ಳೆಯದಾಗುತ್ತದೆ ಒಂದು ವೇಳೆ ತಾವು ಇಲ್ಲಿಂದ....(ದಮಯಂತಿ ಸರಿಯಾಗಿ ಅದೇ ವೇಳೆಗೆ ಅಲ್ಲಿಗೆ ಬಂದು ಹೇಳುತ್ತಾಳೆ.)

**ದಮಯಂತಿ:** ಇಲ್ಲೇನು ಕೋಲಾಹಲ ನಡೆದಿದೆ? ರಾಜಕುಮಾರ ನಳನೊಂದಿಗೆ ಜಲದೇವನ ಶರ್ತಿನಲ್ಲಿ ಸೋಲು-ಗೆಲುವು ಯಾರದಾಯಿತು.

**ಜಲ:** ಶರ್ತನ್ನು ನಾನು ಗದ್ದುಕೊಂಡೆ.

**ನಳ:** ಇನ್ನೂ ಶರ್ತಿನ ನಿರ್ಣಯವಾಗಿಲ್ಲ.

**ಅಗ್ನಿ:** ನಿರ್ಣಯ, ಅದು ಹೇಗೆ ಆಗಿಲ್ಲ? ಜಲದೇವ ಈಗ ಕೊನೆಯ ಕೈ ಆಡಲಿದ್ದಾನೆ. ಈ ಕೊನೆಯ ಆಟದಲ್ಲಿ ಜಲದೇವನಿಗೇ ಜಯ.

**ದಮಯಂತಿ:** ಬಹುಶಃ ಸಫಲನಾಗಲಿಕ್ಕಿಲ್ಲ.

**ಜಲ:** ಅದು ಹೇಗೆ ಸಫಲನಾಗುವುದಿಲ್ಲ, ನಾನು ಈಗಲೇ ನನ್ನ ಕೈ ಆಡುತ್ತೇನೆ.

**ನಳ:** (ಅವನ ಕೈ ಹಿಡಿದು) ಈ ಕೈ ಆಡುವ ಪೂರ್ವದಲ್ಲಿ ಪವನದೇವ ಬದಲಿಸಿದ ಕಾಯಿಗಳ ಬಗ್ಗೆ ನಿರ್ಣಯವಾಗಬೇಕಾದುದು ಅವಶ್ಯವಾಗಿದೆ.

**ದಮಯಂತಿ:** (ಮುಗುಳ್ನಕ್ಕು) ಶರ್ತನ್ನು ಮಧ್ಯದಲ್ಲಿಯೇ ಮುಗಿಸಲಾಗುವುದು. (ರಾಜಾ ಭೀಮನನ್ನು ಕುರಿತು) ಅಪ್ಪಾಜಿ, ಬಂದಿರುವ ಎಲ್ಲರನ್ನೂ ರಾಜ-ಸಿಂಹಾಸನದ ಹತ್ತಿರ ಸೇರಲು ಹೇಳಿ. ನಾನೀಗ ಜಯಮಾಲೆ ಹಾಕಲು ಸಂಕಲ್ಪ ಮಾಡಿರುವೆ.

**ಜಲ:** ಆದರೆ ಮೊದಲು ಈ ಶರ್ತಿನ ಕೊನೆಯ ನಿರ್ಣಯವಾಗಬೇಕು. ನಳನಿಗೆ ಕಾಯಿಗಳನ್ನು ಕೊಡುವಂತೆ ಹೇಳಿ, ಅಂದರೆ ನಾನು ಆಟ ಆಡುತ್ತೇನೆ. ಶರ್ತನ್ನು ಕೊನೆಯ ಗಳಿಗೆಯಲ್ಲಿ, ಕೊನೆಯ ಕೈ ಆಡುವಲ್ಲಿ ನಿಲ್ಲಿಸುವುದು ಉಚಿತವಲ್ಲ, ಅದೂ ನನ್ನ ಜಯ ನಿಶ್ಚಿತವಾಗಿರುವಾಗ.

**ದಮಯಂತಿ:** ಮಹಾರಾಜ ಜಲದೇವ! ಮೊದಲನೆಯ ಮಾತೆಂದರೆ, ಪವನದೇವ ಕಾಯಿಗಳನ್ನು ಬದಲಿಸಿದ್ದಾನೆಂದು ರಾಜಾ ನಳ ಆರೋಪ ಮಾಡಿದ್ದಾರೆ. ಎರಡನೆಯ ಮಾತೆಂದರೆ, ಈ ಕೊನೆಯ ಕೈ ತಮ್ಮ ಇಚ್ಛಾನುಸಾರವೇ ಆಟವನ್ನು ಗೆಲ್ಲಿಸುತ್ತದೆ-ಎಂದು ಹೇಳುವುದು ಹೇಗೆ! ತಾವು ತಿಳಿದಿರುವಂತೆ ಈ ಪ್ರಪಂಚದಲ್ಲಿ ಹತ್ತಿರದ ಭವಿಷ್ಯ ಕೂಡ ನಿಶ್ಚಿತವಾಗಿಲ್ಲ, ತಾವು ಇಂಥ ಬಲಿಷ್ಠ ದೇವತೆಯಾಗಿದ್ದರೂ,

(ಮುಗುಳ್ನಗುತ್ತ) ಇನ್ನು ಮೂರನೆಯದು, ನನ್ನ ಸಖಿ ಕಲ್ಪನಾ ಈಗ ಇಲ್ಲಿ ನಿಂತಿದ್ದಾಳೆ, ತಾವು ಕೊನೆಗೆ ಕೈ ಹಾಕ್ಕುತ್ತಿರುವಾಗ ಆಕೆ ವಿಘ್ನವನ್ನುಂಟು ಮಾಡಬಲ್ಲಳು. ಹಾಂ, ಅಪ್ಪಾಜಿ ರಾಜ ಸಿಂಹಾಸನದ ಹತ್ತಿರ ಎಲ್ಲರೂ ಸೇರುವಂತೆ ಘೋಷಣೆ ಮಾಡಿಸಿ.

**ಭೀಮರಾಜನ ಜೊತೆಗಾರ:** ವಾದಕ ವೃಂದವೇ, ವಾದ್ಯ ಬಾರಿಸಿ, ಎಲ್ಲರೂ ಸುಮ್ಮನಾದ ಮೇಲೆ ಘೋಷಣೆ ಮಾಡಲಾಗುವುದು.

(ಮಂಗಲವಾದ್ಯ ಮೊಳಗುತ್ತದೆ)

**ಘೋಷಣೆ:** (ವಾದ್ಯಗಳ ಸಪ್ಪಳ ನಿಂತ ಮೇಲೆ) ದೂರ ಹಾಗೂ ಹತ್ತಿರದ ರಾಜ್ಯಗಳಿಂದ ದಯಮಾಡಿಸಿರುವ ರಾಜರು ಹಾಗೂ ರಾಜಕುಮಾರರೇ, ತಮ್ಮಲ್ಲಿ ನಮ್ರ ವಿನಂತಿಯೇನೆಂದರೆ ತಾವೆಲ್ಲರೂ ರಾಜ-ಸಿಂಹಾಸನದ ಹತ್ತಿರ ಬಂದು, ಎರಡು ಸಾಲಿನಲ್ಲಿ ತಮ್ಮ ತಮ್ಮ ಸ್ಥಾನದಲ್ಲಿ ವಿರಾಜಮಾನರಾಗಬೇಕು. ಮಹಾ ಪ್ರತಾಪಿ ಭೀಮಸೇನ ರಾಜಾ ಅವರ ಸುಪುತ್ರಿ ರಾಜಕುಮಾರಿ ದಮಯಂತಿಯ ಚೆಲುವು ಹಾಗೂ ಪವಿತ್ರತೆ ಸಮಗ್ರ ಭಾರತದ ತುಂಬೆಲ್ಲ ಪಸರಿಸಿದೆ. ಅಂಥ ದಮಯಂತಿ ಮಂಟಪದಲ್ಲಿ ದಯಮಾಡಿಸಿರುವ ಎಲ್ಲ ರಾಜರನ್ನು, ರಾಜಕುಮಾರರನ್ನು ನೋಡಿದ್ದಾಳೆ, ಅದೂ ಅಲ್ಲದೆ ಕೆಲವರೊಂದಿಗೆ ಮಾತೂ ಆಡಿದ್ದಾಳೆ. ಆಕೆ ಮುಂದಿನ ಕೆಲ ಕ್ಷಣಗಳಲ್ಲಿ ತನಗೆ ಒಪ್ಪಿಗೆಯಾದ, ರಾಜ-ವೀರನ ಕೊರಳಲ್ಲಿ ಜಯಮಾಲೆಯನ್ನು ಹಾಕಿ ತನ್ನ ವರನನ್ನು ಪಡೆಯಲಿದ್ದಾಳೆ. ಹೀಗೆಂದು ಘೋಷಿಸಲಾಗುತ್ತದೆ.....

(ಕೆಲವೇ ಕ್ಷಣಗಳಲ್ಲಿ ಅಲ್ಲಿಗೆ ಬಂದಿದ್ದ ರಾಜರು, ರಾಜಕುಮಾರರು ರಾಜ-ಸಿಂಹಾಸನದಿಂದ ಆರಂಭಮಾಡಿ ಎರಡು ಸಾಲಿನಲ್ಲಿ ವಿರಾಜಮಾನರಾಗುತ್ತಾರೆ. ಸಂಯೋಗದಿಂದಾಗಿ ರಾಜಕುಮಾರ ನಳನ ಸ್ಥಾನ ಜಲ, ಅಗ್ನಿಗಿಂತ ಹಿಂದೆ ಮತ್ತು ಪವನನಿಗಿಂತ ಮೊದಲು ಒಂದೇ ಸಾಲಿನಲ್ಲಿದೆ. ದಮಯಂತಿ ತನ್ನ ಸಖಿಯರೊಂದಿಗೆ ರಾಜಸಿಂಹಾಸನದ ಸಮೀಪ ನಿಂತು ಆಸ್ಥಾನವನ್ನು ಸುಶೋಭಿತಗೊಳಿಸುತ್ತಿದ್ದಾಳೆ. ಮಹಾರಾಜ ಭೀಮಸೇನ ರಾಜ ಸಿಂಹಾಸನದ ಮೇಲೆ ವಿರಾಜಮಾನನಾಗಿದ್ದಾನೆ.)

**ಪುನಃ ಘೋಷಣೆ:** ರಾಜಕುಮಾರಿ ಯಾವುದೇ ರಾಜವೀರನಿಗೆ ಜಯಮಾಲೆ ಹಾಕುವ ಪೂರ್ವದಲ್ಲಿ ಈ ಘೋಷಣೆಯನ್ನು ಮಾಡಲಾಗುತ್ತದೆ, ರಾಜರುಗಳಿಗೆ, ರಾಜಕುಮಾರರಿಗೆ ಆಮಂತ್ರಣ ಕಳಿಸುವ ಕಾಲದಲ್ಲಿ ಕೂಡ ಅವರ ಕುಲ, ಪರಿವಾರ, ಪದವಿ, ಸ್ಥಾನ, ಸಂಪತ್ತಿ, ಶರೀರ, ರೂಪ, ನಡವಳಿಕೆ ಮುಂತಾದವುಗಳ ಬಗ್ಗೆ ತಿಳಿಸಲು ಕೇಳಿಕೊಳ್ಳಲಾಗಿತ್ತು. ಆದರೂ ನೆರೆದ ಭದ್ರಜನಕ್ಕೆ ಇಲ್ಲಿ ದಯಮಾಡಿಸಿರುವ ರಾಜರು ಹಾಗೂ ರಾಜ ಕುಮಾರರ ಬಗ್ಗೆ ಯಾವುದೇ ರೀತಿಯ ಸಂಶಯ

ಸಂದೇಹವೆನ್ನಿಸಿದರೆ ಈ ತುಂಬಿದ ಸಭೆಯಲ್ಲಿಯೇ ಪ್ರಕಟಪಡಿಸಲಿ, ಏಕೆಂದರೆ ಅಜ್ಞಾನವಶದಿಂದಾಗಿ ರಾಜಕುಮಾರಿಯಿಂದ ಸ್ವಯಂವರದಲ್ಲಿ ಯಾವುದೇ ತಪ್ಪು ಆಗದಿರಲಿ.......ಹೀಗೆಂದು ಘೋಷಿಸಲಾಗುತ್ತದೆ......

(ಬಲಗಡೆಯ ಸಾಲಿನಲ್ಲಿ ಓರ್ವ ಯುವಕ ರಾಜಕುಮಾರ ತನ್ನ ಸಂಶಯ ಪ್ರಕಟಿಸಲು ಎದ್ದು ನಿಲ್ಲುತ್ತಾನೆ.)

**ರಾಜ ಸಿಂಹಾ:** ಹಾಂ, ರಾಜಕುಮಾರ ಅಂಬಿ, ತಮಗೆ ಇರುವ ಸಂಶಯವೇನು ?

**ಸನದ ಸಮೀಪದಿಂದ ಸೂತ್ರಧಾರ**

**ರಾಜಾಅಂಬಿ:** ಮಹಾರಾಜ, ರಾಜಕುಮಾರ ಭವಾನಿಗಢ ಇಲ್ಲಿಯೇ ಎಲ್ಲಿಯೋ ಇರಬೇಕು, ಅವರು ತಮ್ಮ ತಾಯಿಯ ಕಡೆಯಿಂದ ಕ್ಷತ್ರಿಯ ಕುಲದವರಲ್ಲ. ಅವರದು ವರ್ಣಸಂಕರ.

**ಸೂತ್ರಧಾರ:** (ಹತ್ತಿರವಿರುವ ಕಾಗದಗಳನ್ನು ನೋಡಿ ಹಾಗೂ ಕೊಂಚ ಯೋಚನೆ ಮಾಡಿ) ಈ ಹೇಳಿಕೆ ಸರಿಯಾದುದಲ್ಲ. ರಾಜಕುಮಾರ ಭವಾನಿಗಢ ಅವರ ತಾಯಿಯ ಕುಲ ಕ್ಷತ್ರಿಯ ಕುಲವೆನ್ನುವಲ್ಲಿ ಯಾವ ಸಂಶಯವೂ ಇಲ್ಲ. ಈ ನಿರ್ಣಯ ಪುರೋಹಿತರಿಂದ ಆಗಿಬಿಟ್ಟಿದೆ.

(ಅದೇ ಸಾಲಿನಲ್ಲಿ ಮಧ್ಯದಿಂದ ಮತ್ತೋರ್ವ ರಾಜ ಎದ್ದು ನಿಲ್ಲುತ್ತಾನೆ.)

**ಸೂತ್ರಧಾರ:** ಹಾಂ, ರಾಜಾ ವಣಥಂಬ, ತಮಗೆ ಇರುವ ಸಂಶಯವೇನು ?

**ರಾಜಾ ವಣಥಂಬ:** ಈ ಸಭೆಯಲ್ಲಿ ಪಾಲುಗೊಂಡಿರುವ ರಾಜಕುಮಾರ ಪರಮೇಂದ್ರ ಅವರ ಬಲಗೈಯಿ ಮುರಿದು ಸೊಟ್ಟದಾಗಿ ಜೋಡಿಸಲಾಗಿದ. ಅವರು ಸರಿಯಾಗಿ ಬಾಣ ಹೊಡೆಯಲಾರರು.

(ರಾಜಕುಮಾರ ಪರಮೇಂದ್ರ ಎದ್ದು ನಿಲ್ಲುತ್ತಾನೆ.)

**ಸೂತ್ರಧಾರ:** ಹಾಂ, ರಾಜಕುಮಾರ ಪರಮೇಂದ್ರ, ಈ ಹೇಳಿಕೆಯ ಬಗ್ಗೆ ತಮ್ಮ ಉತ್ತರವೇನು ?

**ರಾಜ ಪರಮೇಂದ್ರ:** (ತೋಳು ಮೇಲೇರಿಸಿ ಕೈಯನ್ನು ತೋರಿಸುತ್ತ) ಇದು ನಿಜ, ಒಮ್ಮೆ ಬೇಟೆಯಾಡುವಾಗ ಈ ಕೈ ಒಂದು ಗಿಡಕ್ಕೆ ಬಡಿದು ಮುರಿದಿತ್ತು. ಆದರೆ ಅದು ಈಗ ಅದೆಷ್ಟೋ ತಿಂಗಳುಗಳಿಂದ ಸರಿಯಾಗಿದೆ, ಸರಿಯಾಗಿ ಜೋಡಿಸಲಾಗಿದೆ. ಸಂಶಯವಿದ್ದವರು ಬಂದು ನನ್ನ ಕೈಯನ್ನು ನೋಡಬಹುದಾಗಿದೆ. ಅದೂ ಅಲ್ಲದೆ ರಾಜಾ ವಣಥಂಬರು

ನನ್ನ ಮುಂಗೈ ಹಿಡಿದಾದರೂ ನೋಡಲಿ.

(ರಾಜಾ ವಣಥಂಬರು ರಾಜಕುಮಾರ ಪರಮೇಂದ್ರನ ಹತ್ತಿರ ಬರುತ್ತಾರೆ.)

**ಸೂತ್ರಧಾರ:** ರಾಜಾ ವಣಥಂಬರಿಗೆ, ರಾಜಕುಮಾರ ಪರಮೇಂದ್ರರ ಮುಂಗೈಯನ್ನು ಹಿಡಿಯಲೇಬೇಕೆಂದು ಅನ್ನಿಸಿದ್ದರೆ, ಅವರಿಬ್ಬರೂ ರಾಜಸಿಂಹಾಸನದ ಸಮೀಪ ಬರಲೆಂದು ಆಮಂತ್ರಿಸುತ್ತೇನೆ.

(ರಾಜಾ ವಣಥಂಬ ಮತ್ತು ರಾಜಕುಮಾರ ಪರಮೇಂದ್ರ ಇಬ್ಬರೂ ರಾಜ ಸಿಂಹಾಸನದ ಹತ್ತಿರ ಬರುತ್ತಾರೆ ಮತ್ತು ಮುಂಗೈ ಹಿಡಿಯುವ ಪ್ರತಿಯೋಗಿತೆಯಲ್ಲಿ ಇಬ್ಬರೂ ಸಮನಾಗುತ್ತಾರೆ. ಇಬ್ಬರೂ ಪರಸ್ಪರರಿಂದ ತಮ್ಮ ತಮ್ಮ ಮುಂಗೈ ಬಿಡಿಸಿಕೊಳ್ಳುತ್ತಾರೆ.)

**ಸೂತ್ರಧಾರ:** ಇದರಿಂದಾಗಿ ರಾಜಕುಮಾರ ಪರಮೇಂದ್ರರ ಶರೀರದಲ್ಲಿ ಯಾವುದೇ ರೀತಿಯ ತ್ರುಟಿಯಾಗಿಲಿ, ಅಂಗಭಂಗವಾಗಲಿ ಇಲ್ಲವೆಂದು ಸಿದ್ಧವಾಯಿತು. ಆದ್ದರಿಂದ ಈ ಸ್ವಯಂವರದಲ್ಲಿ ಭಾಗವಹಿಸಲು ರಾಜಕುಮಾರ ಪರಮೇಂದ್ರರಿಗೆ ಅಧಿಕಾರವಿದೆ.

(ಎಡಗಡೆಯ ಸಾಲಿನಿಂದ ಪವನದೇವ ಎದ್ದು ನಿಲ್ಲುತ್ತಾನೆ.)

**ಸೂತ್ರಧಾರ:** (ಎತ್ತರದ ದನಿಯಲ್ಲಿ) ಹಾಂ, ಪವನದೇವ, ತಮಗೆ ಯಾವ ವ್ಯಕ್ತಿಯ ಬಗ್ಗೆ ಶಂಕೆ ಇದೆ ?

**ಪವನ:** ರಾಜಕುಮಾರ ನಳ ತಮ್ಮ ರಾಜಧನಕ್ಕೆ ಸಂಪೂರ್ಣ ಬಾಧ್ಯಸ್ಥರಾಗಿಲ್ಲವೆಂಬುದು ನನ್ನ ತಕರಾರು. ತಮ್ಮ ರಾಜ್ಯದ ಸಕಲ ಸಂಪತ್ತು, ಧನವನ್ನು ಈಗ ತಾನೇ ನನ್ನೊಂದಿಗೆ ಜೂಜು ಆಡಿ ಒತ್ತೆ ಇಟ್ಟಿದ್ದಾರೆ.

(ರಾಜ ಸಿಂಹಾಸನದ ಮೇಲೆ ಕುಳಿತಿರುವ ಭೀಮಸೇನ ಮಹಾರಾಜನಿಗೆ ಅಚ್ಚರಿ ಹಾಗೂ ಅಲ್ಲಿ ನೆರೆದ ಭದ್ರ ಜನರಲ್ಲಿ ಒಂದು ರೀತಿಯ ಗದ್ದಲ ಹರಡಿತು. ರಾಜಕುಮಾರಿ ದಮಯಂತಿಯ ಮುಖದಲ್ಲಿ ಲಜ್ಜೆಯು ಕೆಂಪಡರಿತು. ಇದೇ ಸಮಯದಲ್ಲಿ ಅಗ್ನಿದೇವನೂ ಎದ್ದು ನಿಲ್ಲುತ್ತಾನೆ.)

**ಸೂತ್ರಧಾರ:** ಹಾಂ, ಮಹಾರಾಜ ಅಗ್ನಿದೇವ, ತಮಗೆ ಇನ್ನಾವ ಭಾಗ್ಯಹೀನನ ವಿರುದ್ಧ ಹೇಳುವುದಿದೆ ?

**ಅಗ್ನಿ:** ರಾಜಕುಮಾರ ನಳ, ಆಟದಲ್ಲಿ ಎರಡನೆಯ ಶರತ್ತನ್ನು ಸೋತು ತನ್ನ ರಾಜ್ಯದ ಸಂಪೂರ್ಣ ವನಸ್ಪತಿ-ಧನ ನನ್ನ ಹತ್ತಿರ ಒತ್ತೆ ಇಟ್ಟಿದ್ದಾನೆ. ಇದರಿಂದಾಗಿ ರಾಜ್ಯದ ಮೇಲಿನ ಸ್ವಾಮಿತ್ವ ಇನ್ನೂ ಕಡಿಮೆ ಯಾಗುತ್ತದೆ.

(ರಾಜಸಿಂಹಾಸನದ ಸಮೀಪ ಅಚ್ಚರಿ ಹಾಗೂ ಗದ್ದಲ ಹೆಚ್ಚಾಗುತ್ತದೆ. ಭೀಮರಾಜಾ, ಸೂತ್ರಧಾರ ಮತ್ತು ರಾಜಕುಮಾರಿಯ ಸೋದರ ಮಾವ ಇವರಲ್ಲಿ ಮಾತುಕತೆಯಾಗುತ್ತದೆ. ರಾಜಕುಮಾರಿ ದಮಯಂತಿಯೂ ಈ ಮಾತುಗಳಲ್ಲಿ ಪಾಲ್ಗೊಳ್ಳುತ್ತಾಳೆ.)

**ಸೂತ್ರಧಾರ:** (ಕೆಲ ಹೊತ್ತಿನ ನಂತರ) ಇದೇ ಮಂಟಪದ ಆಟದಲ್ಲಿ ರಾಜಕುಮಾರ ನಳನು ಸೋತಿರುವುದು. ಅದೇನು ಕೊನೆಯ ನಿರ್ಣಯದ ಮಾತೇನಲ್ಲವೆಂದು ನಾವು ನಿರ್ಣಯಿಸಿದ್ದೇವೆ. ಅದೂ ಅಲ್ಲದೆ ಅವರ ರಾಜ್ಯದ ಸಂಪತ್ತು ಹಾಗೂ ವನಸ್ಪತಿ ಪವನದೇವ ಮತ್ತು ಅಗ್ನಿದೇವರ ಹತ್ತಿರ ಮಾರಾಟವಾಗಿ ಹೋಗಿಲ್ಲ, ಕೇವಲ ಒತ್ತೆ ಬಿದ್ದಿವೆ. ಎಷ್ಟು ಧನ ಕೊಟ್ಟು ಒತ್ತೆ ಇಟ್ಟಿರುವ ಸಂಪತ್ತನ್ನು ಬಿಡಿಸಿಕೊಳ್ಳಲಾಗುವುದೆಂಬುದರ ಬಗ್ಗೆ ಈಗಲೇ ನಿರ್ಣಯವಾಗಬೇಕು. ರಾಜಕುಮಾರ ನಳನಿಗೆ ಈ ಸ್ವಯಂವರದಲ್ಲಿ ಭಾಗವಹಿಸಲು ಸಂಪೂರ್ಣ ಅಧಿಕಾರವಿದೆ.

**ಜಲ, ಅಗ್ನಿ, ಪವನ** } ಸೌಲಭ್ಯ ನೀಡಲಾಗುತ್ತಿದೆ. ರಾಜಕುಮಾರ ನಳನಿಗೆ ಸೌಲಭ್ಯ ನೀಡಲಾಗುತ್ತಲಿದೆ.

(ರಾಜಾ ಭೀಮಸೇನ ಭಯಭೀತನಾಗಿ ರಾಜ ಸಿಂಹಾಸನದಿಂದಿಳಿದು, ಜಲ, ಅಗ್ನಿ ಮತ್ತು ಪವನದೇವರ ಹತ್ತಿರ ಹೋಗಿ, ಅವರಿಗೆ ಸಮಾಧಾನ ಹೇಳಿ ಸುಮ್ಮನಿರಿಸಿ, ಮರಳಿ ಬಂದು ಸಿಂಹಾಸನದ ಮೇಲೆ ವಿರಾಜಮಾನನಾಗುತ್ತಾನೆ.)

**ಸೂತ್ರಧಾರ:** (ಎತ್ತರದ ದನಿಯಲ್ಲಿ) ಯಾವಳ ಸೌಂದರ್ಯ ಹಾಗೂ ಪವಿತ್ರತೆಯ ಸುದ್ದಿ ಲೋಕದ ತುಂಬೆಲ್ಲ ಹಬ್ಬಿದೆಯೋ ಅಂಥ ರಾಜಕುಮಾರಿ ದಮಯಂತಿ ಈಗ ತನ್ನ ವರನ ಆಯ್ಕೆ ಮಾಡಿ ಜಯಮಾಲೆ ಹಾಕಲು ಹೊರಡಲಿದ್ದಾಳೆ. (ದಮಯಂತಿ ರಾಜ-ಸಿಂಹಸಾನದಿಂದ ಹೊರಟು ಬಲಗಡೆಯ ಸಾಲಿನ ಮುಂದಿಂದ ಹೊರಡುತ್ತಾಳೆ. ಸಖಿಯರು ಅವಳೊಂದಿಗೆ ನಡೆಯುತ್ತಾರೆ, ಬಿನ್ನಾಣ, ಚೇಷ್ಟೆ ಹಾಗೂ ಲಜ್ಜೆ ಮೂರೂ ಸರತಿಯಂತೆ ದಮಯಂತಿಯ ನಡವಳಿಕೆಯಲ್ಲಿ ಕಾಣಿಸಿಕೊಳ್ಳುತ್ತವೆ. ಒಂದೆರಡು ಹೆಜ್ಜೆ ಮುಂದೆ ಹೋಗಿ ಆಕೆ ಕೊಂಚ ನಿಲ್ಲುತ್ತಾಳೆ, ಸಮೀಪದ ರಾಜರ, ರಾಜಕುಮಾರರ ಎದೆ ಧಕ ಧಕ....ಎಂದು ಬಡಿದುಕೊಳ್ಳಲಾರಂಭಿಸುತ್ತದೆ, ಆಗ ಈಕೆ ಮುಂದೆ ಹೊರಟು ಹೋಗುತ್ತಾಳೆ. ಈ ರೀತಿಯಾಗಿ ಮುಂದೆ ಮುಂದೆ ಹೋಗುತ್ತ ಇಡೀ ಆ ಸಾಲನ್ನು ಮುಗಿಸಿ, ಮುಂದಿನ ಸಾಲಿನ ಕೊನೆಯಲ್ಲಿ ಬರುತ್ತಾಳೆ. ಅಲ್ಲಿ ಕೆಲಹೊತ್ತು ನಿಂತು ಇಡೀ ಗುಂಪಿನ ಮೇಲೆ ದೃಷ್ಟಿ ಹಾಯಿಸುತ್ತಾಳೆ; ಮತ್ತೆ ಹೊರಡುತ್ತಾಳೆ. ಕೊನೆಯಲ್ಲಿ ಆಕೆ ಪವನ ಮತ್ತು ನಳನ ಹತ್ತಿರ ಬಂದಾಗ ಭದ್ರವಾಗಿ ನಿಲ್ಲುತ್ತಾಳೆ.)

**ದಮಯಂತಿ:** (ಸಖಿಗೆ) ಕಾಮನಾ, ಇದೇನು ಕೌತುಕ ನಡೆಯುತ್ತಲಿದೆ ? ನನ್ನ ಬುದ್ಧಿಗೆ ಏನಾದರೂ ಆಗಿದೆಯೋ ? ನನಗೆ ಈ ನಾಲ್ಕು ಜನ ಒಂದೇ ರೀತಿಯಾಗಿ ತೋರುತ್ತಲಿದ್ದಾರೆ. ನನ್ನ ತಲೆ ಅದೇಕೋ ತಿರುಗುತ್ತಲಿದೆ.

**ಕಾಮನಾ:** ಗಾಬರಿಯಾಗಬೇಡಿ, ರಾಜಕುಮಾರಿ. ತಾವು ಸುತ್ತುತ್ತ ಸುತ್ತುತ್ತ ದಣಿದಿದ್ದೀರಿ. ನೋಡಿ, ಈ ಮೊದಲಿನ ಪುರುಷ ಪವನದೇವ,

ಎರಡನೆಯ ಪುರುಷ ರಾಜಕುಮಾರ ನಳ, ಮೂರನೆಯ ಪುರುಷ ಅಗ್ನಿದೇವ ಮತ್ತು....

**ದಮಯಂತಿ:** ಆದರೆ, ನಾನು, ನೀನು ಹೇಳುವುದರಿಂದ ಯಾರದಾದರೂ ಕೊರಳಲ್ಲಿ ಜಯಮಾಲೆಯನ್ನು ಹೇಗೆ ಹಾಕಲಿ? ನನಗೆ ಬುದ್ಧಿ, ಎಚ್ಚರ ಮರಳಿ ಬರುವವರೆಗೂ ನಾನು ಏನನ್ನೂ ಮಾಡಲಾರೆ. ನಾನು ಇಲ್ಲಿಯೇ ನಿಂತಿರುತ್ತೇನೆ.

**ಕಲ್ಪನಾ:** ಆದರೆ, ರಾಜಕುಮಾರಿ, ಇಲ್ಲಿ ನಿಂತಿರುವುದು ಯೋಗ್ಯವಲ್ಲ. ಮುಂದೆ ನಡೆಯಿರಿ. ತಾವು ಎಷ್ಟು ಸಲ ಬೇಕಾದರೂ ಸುತ್ತಿ ವರ ಪರೀಕ್ಷೆ ಮಾಡಬಹುದಾಗಿದೆ. ಎರಡನೆಯ, ಮೂರನೆಯ, ಯಾವ ಸುತ್ತಿನಲ್ಲಿ ಬೇಕಾದರೂ ತಾವು ವರನನ್ನು ಆರಿಸಿ, ಜಯಮಾಲೆ ಹಾಕಬಹುದಾಗಿದೆ.

**ದಮಯಂತಿ:** ಹಾಂ! ಇದು ಸರಿಯಾದುದು. (ಹೊರಡುತ್ತಾಳೆ)
(ರಾಜಕುಮಾರಿ ದಮಯಂತಿ ಎರಡನೆಯ ಖಂಡದ ವೀಕ್ಷಣೆ ಮುಗಿಸಿ ಕೊಂಡು ರಾಜ ಸಿಂಹಾಸನದ ಹತ್ತಿರ ಬರುತ್ತಾಳೆ. ಆದರೆ ಆಕೆ ಯಾರನ್ನೂ ವರನೆಂದು ಆರಿಸಲಿಲ್ಲ. ಇದನ್ನು ಕಂಡು ಇಡೀ ಮಂಟಪದಲ್ಲಿ ಆಶ್ಚರ್ಯ ಹಾಗೂ ಉತ್ಸುಕತೆ ಹೆಚ್ಚುತ್ತದೆ.)

**ದಮಯಂತಿಯ ಸೋದರ ಮಾವ:** (ದಮಯಂತಿ ಸಿಂಹಾಸನದ ಹತ್ತಿರ ಬಂದಾಗ) ಸೋದರಿ, ಏನು ಸುತ್ತು ಫಲದಾಯಕವಾಗಲಿಲ್ಲವೇನು? ಯಾವ ಮೃಗವೂ ಬಲೆಯಲ್ಲಿ ಬೀಳಲಿಲ್ಲವೇ? (ದಮಯಂತಿ ಮೌನ)

**ಕಲ್ಪನಾ:** ಸಮಸ್ತ ಮೃಗಗಳೂ ಬಲೆಯಲ್ಲಿ ಬೀಳಲು ಸಿದ್ಧವಾಗಿ ನಿಂತಿವೆ. ಆದರೆ ಯಾವ ಮೃಗದ ಬಗ್ಗೆ ಆಸಕ್ತಿ ಇದೆಯೋ ಅದು ಎಲ್ಲೋ ದೃಷ್ಟಿಯಿಂದ ಮರೆಯಾಗಿದೆ ಎಂದು ತೋರುತ್ತದೆ.

**ಸೋದರ:** ಅದು ಹೇಗೆ? ಯಾರಾದರೂ ಮಾಟಾ-ಮಂತ್ರ ಮಾಡಿ ಅದೃಶ್ಯಗೊಳಿಸಿಲ್ಲ ತಾನೇ?

**ಕಲ್ಪನಾ:** ಇಂಥ ಸಮಯದಲ್ಲಿ ಎಲ್ಲವೂ ಸಾಧ್ಯವಿದೆ.
(ಇಷ್ಟರಲ್ಲಿ ರಾಜಕುಮಾರಿ ದಮಯಂತಿ ಮೊದಲ ಖಂಡದ ಎದುರಿಗೆ ಮತ್ತೆ ಹೊರಡಲನುವಾದಳು. ಕಲ್ಪನಾ ಓಡಿ ಹೋಗಿ ಅವಳನ್ನು ಸೇರಿಕೊಳ್ಳುತ್ತಾಳೆ.)

**ಸೋದರ:** ಮಾವನವರೆ, ಈ ದೇವತೆಗಳು ಏನೋ ಕೌತುಕ ಮಾಡಿದ ಹಾಗಿದೆ. ಸೋದರಿ ದಮಯಂತಿ ತುಂಬ ಗಾಬರಿಯಾಗಿದ್ದಾಳೆ.

**ಭೀಮರಾಜ:** ಹಾಂ, ಕುಮಾರ, ಈ ದೇವತೆಗಳಿಂದ ಎಲ್ಲವೂ ಸಾಧ್ಯವಿದೆ. ಮಾನವರ ಸೌಂದರ್ಯದ ವೈರಿಗಳಿದ್ದಾರೆ, ಇವರು.

**ಸೋದರ:** ಸೋದರಿ ದಮಯಂತಿಯ ಬೆನ್ನೇ ಹತ್ತಿದ್ದಾರೆ ಇವರು. ಇಂದಿನ ಈ ಸಮಾಗಮದಲ್ಲಿ ಎಲ್ಲ ಗದ್ದಲ ಈ ಮೂವರಿಂದಾಗಿಯೇ ಉಂಟಾಗಿದೆ.

**ಭೀಮರಾಜ:** ಹಾಂ! ಕೆಲವೊಮ್ಮೆ ಎಲ್ಲಿಂದಲೋ ಗಾಳಿ ತೂರಿಬರುತ್ತದೆ,

ಶಾಮಿಯಾನೆ ಕಿತ್ತು ಹೋಗುತ್ತದೇನೋ ಎನ್ನುವ ಹಾಗೆ, ಕೆಲವೊಮ್ಮೆ ಆಕಾಶದಲ್ಲಿ ಮೋಡ ಕವಿಯುತ್ತದೆ, ಮತ್ತೆ ಕೆಲವೊಮ್ಮೆ ಪಾಕಶಾಲೆ ಮುಂತಾದ ಸ್ಥಳಗಳಲ್ಲಿ ಸಣ್ಣಪುಟ್ಟ ಅಗ್ನಿ ತಾಂಡವ ನಡೆಯುತ್ತದೆ.

**ಸೋದರ:** ಇದೆಲ್ಲ ಈ ದೇವತೆಗಳ ಚೇಷ್ಟೆಗಳಾಗಿವೆ.

**ಭೀಮರಾಜ:** ಆದರೆ, ನಾವು ಅವರೆದುರಿನಲ್ಲಿ ನಿರ್ಬಲರಾಗಿದ್ದೇವೆ, ಏನು ಮಾಡೋದು ?

**ಸೋದರ:** ರಾಜಕುಮಾರ ನಳನನ್ನು ನೋಡಿ, ಎದುರಿಸುತ್ತಿದ್ದಾನೆ.

**ಭೀಮರಾಜ:** ಹಾಗೆಂತಲೇ ಎರಡು ಶರತ್ತನ್ನು ಸೋತಿದ್ದಾನೆ ಹಾಗೂ ತನ್ನ ರಾಜ್ಯದ ಧನ, ಕೃಷಿ ಮತ್ತು ವನಸ್ಪತಿ ಎಲ್ಲ ಈ ಇಬ್ಬರ ಹತ್ತಿರ ಒತ್ತೆ ಇಟ್ಟಿದ್ದಾನೆ.

**ಸೋದರ:** ಆದರೆ ಮೂರನೆಯ ಶರತ್ತನ್ನು ಗದ್ದಿದ್ದಾನಲ್ಲ, ಅದರಿಂದಾಗಿ ಹಿಂದಿನ ಎರಡೂ ಶರತ್ತೂ ಮುರಿದು ಹೋದವು.

**ಭೀಮರಾಜ:** ಮೂರನೆಯ ಶರತ್ತನ್ನು ಅವನು ಗದ್ದಿದ್ದಾನೆಯೇ ? ಅದು ಹೇಗ ? ಜಲದೇವ ಗೆಲ್ಲುವುದರಲ್ಲಿದ್ದ. ಅಷ್ಟರಲ್ಲಿ ದಮಯಂತಿ ಹೋಗಿ ಆಟ ಬಂದ ಮಾಡಿಸಿದಳೆಂದು ಕೇಳಿದ್ದೆ.

**ಸೋದರ:** ಅವನ ಗೆಲುವು ಹೀಗಿದೆ: ಕಾಯಿಗಳನ್ನು ಪವನದೇವ ಕಳವಿನಿಂದ ಕಣ್ಣು ತಪ್ಪಿಸಿ ಅವುಗಳ ಸ್ಥಾನದಿಂದ ಬದಲಿಸಿದ್ದ. ಕಲ್ಪನಾ ಈ ಕಳವನ್ನು ನೋಡಿದಳು ಹಾಗೂ ಕುಮಾರ ನಳನಿಗೆ ಹೇಳಿದಳು. ಆದರೆ, ಅಲ್ಲಿ ನೋಡಿ, ದಮಯಂತಿ ಎರಡನೆಯ ಸಲ ಮೊದಲ ಖಂಡವನ್ನು ದಾಟಿ ಅತ್ತ ಎರಡನೆಯ ಖಂಡದತ್ತ-ದೇವತೆಗಳು ಇರುವ ಕಡೆ ಹೋಗಿ ನಿಂತಿದ್ದಾಳೆ.

**ಭೀಮರಾಜ:** ಅಲ್ಲಿ ಹೋಗಿ ಏಕೆ ನಿಂತಿದ್ದಾಳೆ ? ಯಾವನಾದರೂ ದೇವತೆಯನ್ನು ವರನೆಂದು ಆರಿಸುವವಳಿದ್ದಾಳೇನು ?

**ಸೋದರ:** ಇಲ್ಲ, ರಾಜಕುಮಾರ ನಳನೂ ಆ ದೇವತೆಗಳ ಮಧ್ಯದಲ್ಲಿಯೇ ಕುಳಿತಿದ್ದಾನೆ.

**ಭೀಮರಾಜ:** ಅಂದರೆ, ಅವಳು ರಾಜಾ ನಳನನ್ನು ಆರಿಸಲಿದ್ದಾಳೇನು ? ಇದಂತೂ, ಬುದ್ಧಿಹೀನತೆಯ ಮಾತಾಯ್ತು. ರಾಜಕುಮಾರ ನಳನ ಮೇಲೆ ದೇವತೆಗಳ ಕೋಪವಿದೆ.

**ಸೋದರ:** ಆದರೆ, ಈ ಕೋಪದ ಕಾರಣವೂ ಸೋದರಿ ದಮಯಂತಿಯೇ ಆಗಿದ್ದಾಳೆ. ಅಲ್ಲಿ ನೋಡಿ, ಸೋದರಿ ದಮಯಂತಿ, ರಾಜಕುಮಾರ ನಳನ ಕೊರಳಲ್ಲಿ ಜಯಮಾಲೆಯನ್ನು ಹಾಕಿದಳು.

(ರಾಜಕುಮಾರ ನಳನಿಗೆ ಜಯವಾಗಲೀ, ರಾಜಕುಮಾರ ನಳನಿಗೆ ಜಯವಾಗಲಿ ಎಂಬ ಘೋಷಣೆಗಳು ಇಡೀ ಮಂಟಪದ ತುಂಬ ಧ್ವನಿಸುತ್ತವೆ. ದಮಯಂತಿಯ ಸೋದರ ಮಾವ ಹಾಗೂ ಬೇರೆ ರಾಜಪುರುಷರು ಕೂಡ ಈ ಜಯಕಾರದಲ್ಲಿ ಪಾಲ್ಗೊಳ್ಳುತ್ತಾರೆ. ಆ ನಂತರ ಭಾರೀ ಬಿರುಗಾಳಿ ಬೀಸುತ್ತದೆ, ಶಾಮಿಯಾನಾ ಇನ್ನೇನು ಬಿತ್ತು

ಎನ್ನುವ ಹಾಗೆ ಅಲುಗಾಡುತ್ತದೆ; ಆದರೂ ಯಾವುದೋ ಕಾರಣದಿಂದಾಗಿ ಅದು ಬೀಳುವುದಿಲ್ಲ. ಸ್ಥಳ-ಸ್ಥಳದಲ್ಲಿ ಕಂಬಗಳನ್ನು ಹಿಡಿದು ಜನ ನಿಂತಿದ್ದಾರೆ. ದಮಯಂತಿ ಹಾಗೂ ನಳ ಕೂಡಿ ಒಂದು ಕಂಬಕ್ಕೆ ಆಸರೆ ನೀಡುತ್ತಿದ್ದಾರೆ. ಮಂಟಪದಿಂದ ಎಲ್ಲ ರಾಜರು, ರಾಜಕುಮಾರರು ಹಾಗೂ ಮೂವರೂ ದೇವತೆಗಳು ಮೆಲ್ಲ ಮೆಲ್ಲಗೆ ಹೊರಗೆ ಹೋಗುತ್ತಾರೆ, ಕೇವಲ ರಾಜಾ ನಳ, ಅಲ್ಲಿಗೆ ಬಂದಿದ್ದ ಅವನ ಶುಭ ಚಿಂತಕ ರಾಜರು, ರಾಜಕುಮಾರರು ಮತ್ತು ರಾಜಾ ಭೀಮನ ಅತಿಥಿಗಳು ಮತ್ತು ರಾಜಪುರುಷ ಹಾಗೂ ಸ್ತ್ರೀಯರು ಮಾತ್ರ ಉಳಿಯುತ್ತಾರೆ. ಮಂಟಪದ ರಮಣೀಯತೆ ಇವರಿಂದಾಗಿಯೇ ಉಳಿದಿದೆ. ಸಂಗೀತ ಕೂಡ ಆನಂದ ಮತ್ತು ಉಲ್ಲಾಸದ ಸ್ವರ-ತರಂಗಗಳನ್ನು ಹರಡುತ್ತಲಿದೆ.)

# ಅಂಕ: ಐದು

**(ರಾಜಾ ನಳನ ರಾಜ-ಭವನದ ಒಂದು ಕೋಣೆ, ಇಲ್ಲಿ ಕುಳಿತೇ ಅವನು ತನ್ನ ರಾಜ್ಯದ ಕಾರುಭಾರು ನಡೆಸುತ್ತಾನೆ. ನಳ, ಮಂತ್ರಿ, ಅಧಿಕಾರಿ ಹಾಗೂ ರಾಣಿ ದಮಯಂತಿಯರೂ ಇದ್ದಾರೆ.)**

**ಅಧಿಕಾರಿ:** ಮಹಾರಾಜ, ವನ ವಿಭಾಗದಿಂದ ತುಂಬ ಚಿಂತಾಜನಕವಾದ ಸೂಚನೆಗಳು ಬರುತ್ತಲಿವೆ. ವನದಲ್ಲಿ ಬಹಳ ಕಡೆ ಅಗ್ನಿಯ ಹಾವಳಿಯಿಂದಾಗಿ, ತುಂಬ ಹಾನಿ ಉಂಟಾಗಿದೆ.

**ದಮಯಂತಿ:** ಹಾಂ! ಅಗ್ನಿದೇವ ತನ್ನ ಶಕ್ತಿ ತೋರಿಸುತ್ತಿದ್ದಾನೆ.

**ಮಂತ್ರಿ:** ನನ್ನ ವಿಚಾರದಲ್ಲಿ, ಯಜ್ಞ ಮಾಡುವುದರಿಂದ ಈ ಅಗ್ನಿಯ ಶಾಂತಿಯಾಗಬೇಕಿತ್ತು.

**ನಳ:** ಮುಂದಿನ ಯಜ್ಞದ ಬಗ್ಗೆ ಯಾವ ತಿಥಿ ನಿಶ್ಚಿತಗೊಳಿಸಲಾಗಿದೆ, ಅಧಿಕಾರಿಗಳೇ ?

**ಅಧಿಕಾರಿ:** ಮಹಾರಾಜ, ಇದೇ ತಿಂಗಳ ಶ್ರಾವಣದ ಹದಿನಾರನೆಯ ಪ್ರತಿಪ್ಪಾದಲ್ಲಿ ಮಾಡಬೇಕೆಂದು ನಿಶ್ಚಯಿಸಲಾಗಿದೆ.

**ದಮಯಂತಿ:** ಅಷ್ಟು ದೂರ ಏಕೆ, ಅಧಿಕಾರಿಗಳೇ ? ಈ ಯಜ್ಞ ಈ ತಿಂಗಳ ಸಂಕ್ರಾಂತಿಯಲ್ಲಿಯೇ ಮುಗಿಸಬೇಕಾಗಿತ್ತು.

**ನಳ:** ಏನು, ಈ ತಿಥಿಯನ್ನು ಮುಂಚೆ ಹಾಕಲು ಆಗುವುದಿಲ್ಲವೇ ?

**ಅಧಿಕಾರಿ:** ಬಹಳ ಮುಂಚೆ ಸಾಧ್ಯವಿಲ್ಲ, ಒಂದು ವಾರದ ವರೆಗೆ ಆಗಬಹುದು.

**ನಳ:** ಹಾಗಾದರೆ ಹಾಗೇ ಮಾಡಿ, ಶ್ರಾವಣದ ಏಳನೆಯ, ಎಂಟನೆಯ ದಿನಕ್ಕೆ ಯಜ್ಞ ನಿಶ್ಚಿತಗೊಳಿಸಿ ಮತ್ತು ಹಾಗೆಂದು ಘೋಷಣೆ, ಈಗಲೇ ಎಲ್ಲ ಸ್ಥಾನಗಳಿಗೆ ತಲುಪಿಸುವ ವ್ಯವಸ್ಥೆ ಮಾಡಿ.

**ಅಧಿಕಾರಿ:** ನಾಳೆಯವರೆಗೂ ಸೂಚನೆ ಹಾಗೂ ಘೋಷಣೆ ಎಲ್ಲ ಸ್ಥಾನಗಳಿಗೂ ಮುಟ್ಟುವಂತೆ ಮಾಡಲಾಗುವುದು, ಮಹಾರಾಜ.

**ದಮಯಂತಿ:** ಮಂತ್ರಿಗಳೇ, ವನಸ್ಪತಿ ಸಂಪತ್ತನ್ನು ಅಗ್ನಿದೇವನ ಆಹುತಿಯಿಂದ ಮುಕ್ತಗೊಳಿಸಲು ಯಾವುದಾದರೂ ಸಬಲ ಪ್ರಯತ್ನ, ಉಪಾಯ ಕಂಡು ಹಿಡಿಯಬೇಕು, ಅದೂ ತೀವ್ರ ಕಂಡು ಹಿಡಿಯಬೇಕು.

**ಮಂತ್ರಿ:** ಮಹಾರಾಣಿ, ಈ ಘಟನೆ ನಡೆದು ಇನ್ನೂ ಆರು ತಿಂಗಳು ಕೂಡ ಆಗಿಲ್ಲ. ನಾವಂತೂ ಅಂದಿನಿಂದಲೇ ಇದರ ಚಿಂತೆಯಲ್ಲಿದ್ದೇವೆ, ಆದರೆ ಈ ಅಲ್ಪ ಸಮಯದಲ್ಲಿ ಯಾವ ಉಪಾಯವನ್ನೂ ಮಾಡಲಾಗಲಿಲ್ಲ.

**ನಳ:** ಈ ಖಗ್ರಾಸ ಮುಕ್ತಿ ಪಡೆಯಲು ಏನು ಸಾಧನೆ ಯೋಚಿಸಿದ್ದೀರಿ, ಮಂತ್ರಿಗಳೇ.

**ಮಂತ್ರಿ:** ದೊಡ್ಡ ಸಾಧನೆಯೆಂದರೆ, ಮಹಾರಾಜ, ಒಣಗಿದ ವೃಕ್ಷಗಳನ್ನು ಕಟಾವ ಮಾಡಿಸಿ, ಮನೆಗಳ ಸಾಮಾನು ಮಾಡಿಸುವುದು, ಪ್ರಜೆಗಳ ಇರುವಿಕೆಯಲ್ಲಿ ಇದರಿಂದ ಸುಧಾರಣೆಯಾಗುತ್ತದೆ. ಗಿಡ-ಗಿಡಗಳ ನಡುವಿನ ಅಂತರ ಹೆಚ್ಚುವುದರಿಂದ ಒಂದು ಶಾಖೆಯಿಂದ ಇನ್ನೊಂದು ಶಾಖೆಗೆ ಬೆಂಕಿ ಸುಲಭವಾಗಿ ತಗಲುವುದು ನಿಲ್ಲುತ್ತದೆ. ಒಣಗಿದ ವೃಕ್ಷಗಳನ್ನು ಕಡಿಸುವ ಅಧಿಕಾರ ನಮಗಿದೆ.

**ನಳ:** ವೃಕ್ಷಗಳನ್ನು ಕಡಿಸಲು ಕೂಲಿ ಕೊಡಬೇಕು ತಾನೇ ? ಹೀಗೆ ಕೂಲಿ ಕೊಡುವ ಸಾಮರ್ಥ್ಯ ನಮಗಿದೆಯೇ ?

**ಮಂತ್ರಿ:** ದ್ರವ್ಯ ರೂಪದಲ್ಲಿ ಸಾಧ್ಯವಿಲ್ಲ ಪ್ರಭು, ಆದರೆ ಮರ ಕಡಿಯುವ ಪ್ರಜೆಗಳಿಗೆ ಅವರ ಮನೆಗೆ ಇಮಾರತಿಗೆ ಬೇಕಾಗುವ ಕಟ್ಟಿಗೆ ಕೊಡಬಹುದಾಗಿದೆ.

**ನಳ:** ಪ್ರಜೆಗಳು ಇದರಿಂದ ಸಂತುಷ್ಟರಾಗುತ್ತಾರೆಯೇ ?

**ಮಂತ್ರಿ:** ಕೆಲವರು ಸಂತುಷ್ಟರಾಗುತ್ತಾರೆ, ಕೆಲವರಾಗುವುದಿಲ್ಲ, ಅವರು ಮಿಜಿ, ಮಿಜಿ ಮಾಡುತ್ತಿರುತ್ತಾರೆ. ಆದರೆ, ಮಹಾರಾಜ, ಇನ್ನೇನು ಮಾಡಲಿಕ್ಕಾಗುತ್ತದೆ ? ಸಮಸ್ತ ಪ್ರಜೆಗಳನ್ನು ಸಂತುಷ್ಟಗೊಳಿಸುವುದು, ರಾಜ್ಯದ ಸಾಮರ್ಥ್ಯಕ್ಕೂ ಮೀರಿದ್ದು.

**ದಮಯಂತಿ:** ಮಂತ್ರಿಗಳೇ, ನಮ್ಮ ಸಮಸ್ತ ಪ್ರಜೆಗಳನ್ನೆಲ್ಲ ಸಂತುಷ್ಟಪಡಿಸುವಂಥ ಸಾಮರ್ಥ್ಯ ಎಂದಾದರೂ ನಮ್ಮ ರಾಜ್ಯಕ್ಕೆ ಬಂದೀತೇ ? ತಾನು ಮಾಡಿದ ಕೆಲಸಕ್ಕಾಗಿ ಹಣ ಕೇಳಿದರೆ ಹಣ ಕೊಡುವ ಹಾಗೂ ಬೇರೆ ವಸ್ತು ಕೇಳಿದರೆ ಅದನ್ನು ಕೊಡುವ ಶಕ್ತಿ ರಾಜ್ಯಕ್ಕೆ ಬಂದೀತೇ ?

**ಮಂತ್ರಿ:** ರಾಮನಾಮ ಸ್ಮರಣೆ ಮಾಡಿ, ಮಹಾರಾಣಿ. ಈ ಲೋಕದಲ್ಲಿ ಇಷ್ಟು ಸೌಲಭ್ಯಗಳು ಸಾಧ್ಯವಿಲ್ಲ. ಬಹಳಷ್ಟು ಪ್ರಜೆಗಳನ್ನು ಮುಂದಿನ ಜನ್ಮ ಅಥವಾ ಸ್ವರ್ಗಲೋಕದ ಕಲ್ಪಿತ ಸುಖ ಸಾಧನಗಳಿಂದಲೇ ಸಂತುಷ್ಟಗೊಳಿಸಲಾಗುತ್ತದೆ.

**ದಮಯಂತಿ:** ಅವರು ಸಂತುಷ್ಟರಾಗುತ್ತಾರೆಯೇ ?

**ಮಂತ್ರಿ:** ಕೆಲವೊಮ್ಮೆ ದಾರಿ ತಪ್ಪುತ್ತಾರೆ, ಮಹಾರಾಣಿ. ಆದರೆ ಹೆಚ್ಚಾಗಿ ಒಪ್ಪಿಕೊಳ್ಳುತ್ತಾರೆ, ಅವರಿಗೆ ಇನ್ನೇನು ಮಾಡಲು ಸಾಧ್ಯವಿದೆ ?

**ಅಧಿಕಾರಿ:** ಈ ಪ್ರಪಂಚ ದುಃಖದಿಂದ ತುಂಬಿದೆ, ಮಹಾರಾಣಿ, ಇಲ್ಲಿ ದುಃಖವನ್ನು ಎಲ್ಲರೂ ಸಹಿಸಿಕೊಳ್ಳಲೇಬೇಕಾಗುತ್ತದೆ. ಅದರಂತೆ ಪ್ರಜೆಗಳಿಗೂ ತಮ್ಮ ಭಾಗ್ಯದ ದುಃಖವನ್ನು ಸಹಿಸಿಕೊಳ್ಳಬೇಕಾಗುತ್ತದೆ.

**ದಮಯಂತಿ:** ಆದರೆ, ಅಧಿಕಾರಿಗಳೇ, ಪ್ರಜೆಗಳ ಭಾಗ್ಯದಲ್ಲಿ ದುಃಖದ ಪಾಲೇ ಹೆಚ್ಚು, ಕ್ಷತ್ರಿಯ ರಾಜಾ, ಬ್ರಾಹ್ಮಣರ ಭಾಗ್ಯದಲ್ಲಿ ಸುಖದ ಪಾಲು ಅಧಿಕ.

**ಮಂತ್ರಿ:** ಇದಕ್ಕೇ ಅವರವರ ಕರ್ಮವೆಂದು ಹೇಳುವುದು, ಮಹಾರಾಣಿ.

ಸ್ಥಿತಿಯು ಅನುಕೂಲವಾಗಿರುವ ಸಿದ್ಧಾಂತವೇ ಸತ್ಯವಾದುದು. ಈ ಲೋಕದಲ್ಲಿ, ಪ್ರಜೆಗಳ ದುಃಖಗಳ ಬಗ್ಗೆ ಯಾವುದೇ ಸ್ಪಷ್ಟ ಅಥವಾ ವ್ಯಕ್ತಗೊಳ್ಳುವಂಥ ಕಾರಣ ಕಂಡುಬರುವುದಿಲ್ಲ. ಯಾವುದಾದರೂ ಅದೃಶ್ಯ, ಅಜ್ಞಾತ ಕಾರಣ ಅವಶ್ಯ ಇರಬೇಕು, ಅಷ್ಟೇ.

**ದಮಯಂತಿ:** ಇರದೇ ಇದ್ದರೂ ಒಪ್ಪಬೇಕಾಗುತ್ತದೆ.

**ಮಂತ್ರಿ:** ಎಲ್ಲ ಒಂದೇ ಅಲ್ಲವೇ? ಸಂಸಾರದ ಸ್ಥಿತಿಯನ್ನು ಇನ್ನು ಬೇರೆ ರೀತಿಯಲ್ಲಿ ವ್ಯಾಖ್ಯೆಮಾಡಲಾಗುವುದಿಲ್ಲ.

**ದಮಯಂತಿ:** ಆದರೆ, ತನ್ನ ಪ್ರಜೆಗಳ ದುಃಖದಲ್ಲಿ ರಾಜಾ ಭಾಗಿಯಾಗಬೇಕು.

**ಮಂತ್ರಿ:** ಬಯುಸದೆ ಇದ್ದರೂ ಭಾಗಿಯಾಗಬೇಕಾಗುತ್ತದೆ, ಮಹಾರಾಣಿ. ತಾವು ತಮ್ಮ ಸ್ಥಿತಿಯ ಬಗ್ಗೆಯೇ ವಿಚಾರ ಮಾಡಿ. ಮಳೆ ಬರದಿದ್ದರೆ ಬೆಳೆಯಿಲ್ಲ, ಬೆಂಕಿಯು ಅನಾಹುತದಿಂದ ವನಸ್ಪತಿಯು ನಷ್ಟ. ಓಗಾದಾಗ, ರಾಜ ಸುಖ ಸಾಧನಗಳನ್ನು ಪಡೆಯುವುದಾದರೂ ಹೇಗೆ? ಒಂದು ವರ್ಷವಿಲ್ಲದಿದ್ದರೂ, ಎರಡನೆಯ ವರ್ಷವಾದರೂ ಈ ಬೆಂಕಿಯು ಬಿಸಿ ರಾಜನಿಗೂ ತಗಲುತ್ತದೆ.

**ದಮಯಂತಿ:** ಒಂದು ವೇಳೆ ಈಗಿನ ಸ್ಥಿತಿಯುನ್ನು ಓಡಿತದಲ್ಲಿ ತೀವ್ರ ತರದಿದ್ದಲ್ಲಿ, ನಾವು ಈ ಬಿಸಿ ಅನುಭವಿಸಲು ಸಿದ್ಧರಾಗಬೇಕು, ಅಲ್ಲವೇ ಮಂತ್ರಿಗಳೇ?

**ಮಂತ್ರಿ:** ಅವಶ್ಯ, ಮಹಾರಾಣಿ.

**ನಳ:** ಪ್ರಿಯೆ, ಈ ಗದ್ದಲ, ಈ ಜಂಜಾಟದಲ್ಲಿ ನೀವು ಏಕೆ? ನಾವು, ನಮ್ಮ ಮೇಲೆ ಬೀಳಲಿರುವ ಈ ವಿಪತ್ತುಗಳನ್ನು ಎದುರಿಸುವ ಸಾಧನಗಳನ್ನು ಅವಶ್ಯ ಕ್ರೋಢೀಕರಿಸುತ್ತೇವೆ. ವನಸ್ಪತಿಯು ಬೆಂಕಿಯ ಜ್ವಾಲೆ, ರಾಜ ಭವನದವರೆಗೆ ಬರದಂತೆ ನೋಡಿಕೊಳ್ಳುತ್ತೇವೆ.

**ಅಧಿಕಾರಿ:** ರಾಜ್ಯದಲ್ಲಿ ಮತ್ತೊಂದು ಚಿಂತಾಜನಕ ವಿಷಯವೆಂದರೆ ಮಳೆಯ ಅಭಾವ, ಮಹಾರಾಜ.

**ಮಂತ್ರಿ:** ಹಾಂ, ಮಹಾರಾಜ, ಮಳೆ ಕೂಡ ಸಮಯಕ್ಕೆ ಸರಿಯಾಗಿ ಆಗುತ್ತಿಲ್ಲ. ಇಡೀ ಶ್ರಾವಣ ಮಳೆ ಇಲ್ಲದೆ ಕಳೆದು ಹೋಯಿತು; ಈ ಮಾಸದಲ್ಲಿಯೂ ಮಳೆಯ ಯೋಗ ವಿಶೇಷವಿಲ್ಲವೆಂದು ಜ್ಯೋತಿಷಿಗಳು ಹೇಳುತ್ತಿದ್ದಾರೆ.

**ದಮಯಂತಿ:** ಹಾಗಾದರೆ, ಪವನದೇವನೂ ತನ್ನ ಶಕ್ತಿ ತೋರಿಸುತ್ತಿದ್ದಾನೆ.

**ಮಂತ್ರಿ:** ಏನು ಹೇಳೋಣ, ಮಹಾರಾಣಿಯುವರೆ, ಪವನವಂತೂ ಮಳೆಯನ್ನೇ ತರುವುದಿಲ್ಲವೆಂದು ಆಣೆ ಮಾಡಿದ ಹಾಗಿದೆ. ದಕ್ಷಿಣದಿಂದ ಬಿಸಿಗಾಳಿ ಬೀಸುತ್ತಲಿದೆ. ಆಕಾಶದಲ್ಲಿ ಎಲ್ಲಿಯೂ ಮೋಡ ಕವಿದ ಚಿಹ್ನೆ ಕೂಡ ಇಲ್ಲ.

**ದಮಯಂತಿ:** ಮಂತ್ರಿಗಳೇ, ಈವರೆಗೂ ನಾವು ಪವನದೇವನಿಂದ ನಮ್ಮ ಭೂಮಿಗಳನ್ನು ಬಿಡಿಸಿಕೊಳ್ಳಲಿಲ್ಲ.

**ಮಂತ್ರಿ:** ಒತ್ತೆಯ ಆ ಭೂಮಿಯನ್ನು ಬಿಡಿಸಿಕೊಳ್ಳಲು ಇಷ್ಟು ಅಲ್ಪ ಅವಧಿಯಲ್ಲಿ ನಮಗೆ ಶಕ್ತಿ ಎಲ್ಲಿಂದ ಬರಬೇಕು, ಮಹಾರಾಣಿ.

**ನಳ:** ಆದರೆ, ಮಂತ್ರಿಗಳೇ, ಈ ಶಕ್ತಿಯನ್ನು ನಾವು ಪಡೆಯಲೇಬೇಕು.

**ಮಂತ್ರಿ:** ಮಹಾರಾಜ, ಸಾಧನೆ ನಡೆದಿದೆ, ಆರು ತಿಂಗಳ ಸಮಯ, ಅಷ್ಟು ದೊಡ್ಡ ಸಮಯವೇನಲ್ಲ, ಸಫಲತೆ ಪಡೆಯಲು.

**ನಳ:** ಹೊಲಗಳಲ್ಲಿ ಬಾವಿ ತೋಡಿಸುವ ಕೆಲಸ ಹೇಗೆ ನಡೆದಿದೆ ? ಚೆನ್ನಾಗಿ ಸಾಗುತ್ತಲಿದೆಯೇ ?

**ಮಂತ್ರಿ:** ಮಹಾರಾಜ, ಈ ಆರು ತಿಂಗಳಲ್ಲಿ ಐದು ನೂರು ಬಾವಿಗಳನ್ನು ತೆಗೆಸಿದ್ದೇವೆ.

**ದಮಯಂತಿ:** ಐದು ನೂರು ಬಾವಿಗಳಿಂದ ಬೇರೆಯಾದ ಐದು ಸಾವಿರ ಸುತ್ತಿನ ಭೂಮಿ ಪವನದೇವನದು, ಅದನ್ನು ಒತ್ತೆಯಿಂದ ಬಿಡಿಸಿಕೊಳ್ಳಬಹುದಾಗಿದೆ. ಮತ್ತೆ ಐದುಸಾವಿರ ಸುತ್ತಿನ ಭೂಮಿಯಿಂದ ಇಪ್ಪತ್ತು ಸಾವಿರ ಪ್ರಜೆಗಳ ಉದರ ಪೋಷಣೆ ನಡೆಯಬಹುದಾಗಿದೆ.

**ಅಧಿಕಾರಿ:** ಸರಿಯಾಗಿದೆ ಮಹಾರಾಣಿ, ತಾವು ಸರಿಯಾಗಿಯೇ ಕಲ್ಪಿಸಿದ್ದೀರಿ.

**ದಮಯಂತಿ:** ಹಾಗಾದರೆ, ಈ ರೀತಿಯಿಂದ ನಾವು ನೂರು ವರ್ಷಗಳಲ್ಲಿ ಕೂಡ, ನಮ್ಮ ಭೂಮಿ ಹಾಗೂ ನಮ್ಮ ಪ್ರಜೆಗಳನ್ನು, ಪವನದೇವನ ಒತ್ತೆಯಿಂದ ಮುಕ್ತಗೊಳಿಸಲು ಸಾಧ್ಯವಿಲ್ಲ.

**ಮಂತ್ರಿ:** ಬಹಳ ಕಷ್ಟವಿದೆ ಮಹಾರಾಣಿಯವರೆ, ಪಗಡೆಯ ಆಟ ಗೆದ್ದು ಪವನ ದೇವ ಈ ಒತ್ತೆ ಹಾಕಿದ ಬಗ್ಗೆ ಮಹಾರಾಜರ ಸ್ವೀಕೃತಿಯನ್ನು ಪಡೆದಿದ್ದಾನೆ. ಪವನದೇವನಲ್ಲಿ ನಮ್ಮ ಭೂಮಿಯ ಒತ್ತೆ ಹಾಕುವಿಕೆ, ಆದಿಕಾಲದಿಂದಲೂ ನಡೆದು ಬಂದಿದೆ.

**ನಳ:** ಇನ್ನಿಷ್ಟು ಬಾವಿಗಳನ್ನು ತೆಗೆಯಿಸುವುದರಿಂದ ಈ ಒತ್ತೆಯಿಂದ ಮುಕ್ತಿ ಪಡೆಯಲು ಸಾಧ್ಯವಿಲ್ಲವೇ ?

**ಅಧಿಕಾರಿ:** ಈ ಬಾವಿಗಳಿಂದ ಎಷ್ಟು ಭೂಮಿ ನೀರು ಉಣ್ಣಲು ಸಾಧ್ಯ ? ಇವುಗಳಲ್ಲಿ ಬಹಳಷ್ಟನ್ನು ಸರಿಯಾಗಿ ಕಟ್ಟಿಸುವ ಸಾಮರ್ಥ್ಯವೂ ಪ್ರಜೆಗಳಿಗಿಲ್ಲ.

**ನಳ:** ನಾವು ಈ ಕಾರ್ಯದಲ್ಲಿ ಪ್ರಜೆಗಳಿಗೆ ಯೋಗ್ಯ ಸಹಾಯ ಮಾಡಲು ಸಾಧ್ಯವಿಲ್ಲವೇ ?

**ಮಂತ್ರಿ:** ಏನು ಸಹಾಯ ಮಾಡಬಹುದು, ಮಹಾರಾಜ ? ಪ್ರಜೆಗಳಿಗೆ ಅವಶ್ಯವಿರುವ ಇಟ್ಟಿಗೆಗಳನ್ನು ನಾವು ಎಷ್ಟು ಸುಟ್ಟುಕೊಡಲು ಸಾಧ್ಯ ? ಈ ಕೆಲಸ, ಕೇವಲ ವನಸ್ಪತಿಯಿಂದ ಬಂದ ಧನದಿಂದ ಆಗಲಾರದು. ಕಲ್ಲಿದ್ದಲು ಕೂಡ ಬೇಕು, ಅದರ ಬೂದಿಯೂ ಅವಶ್ಯ.

**ನಳ:** ಇಟ್ಟಂಗಿ ಸುಡುವ ವ್ಯವಸ್ಥೆಯನ್ನು ಇನ್ನೆಷ್ಟು ಹೆಚ್ಚು ಮಾಡಬಹುದಾಗಿದೆ ?

**ಮಂತ್ರಿ:** ಬಹಳ ಕಡಿಮೆ, ಮಹಾರಾಜ. ಅಡವಿಯಿಂದ ಕಟ್ಟಿಗೆ ತರಲು ಸೌಲಭ್ಯ ಮಾಡಿಕೊಟ್ಟಿದ್ದೇವೆ, ಪ್ರಜೆಗಳಿಗೆ. ಅದೂ ಅಲ್ಲದೆ ವನದಲ್ಲಿಯ ಬೆಂಕಿಯನ್ನು ಹಿಡಿತದಲ್ಲಿ ತರುವಲ್ಲಿ ಪ್ರಜೆಗಳ ಸಹಾಯವನ್ನೂ ಪಡೆದಿದ್ದೇವೆ. ಹಾಗಿದ್ದರೂ ತೋಡಿದ ನೂರು ಬಾವಿಗಳಲ್ಲಿ ಬಹು ಕಷ್ಟದಿಂದ ಒಂದು ಮಾತ್ರ ಪಕ್ಕಾ ಬಾವಿಯಾಗುತ್ತದೆ.

**ಅಧಿಕಾರಿ:** ಒಂದು ಪಕ್ಕಾ ಬಾವಿಯಿಂದಲೂ ಇಡೀ ವರ್ಷ ಹತ್ತು ಸುತ್ತಿನ ಭೂಮಿಗೂ ನೀರು ಸಾಕಾಗುವುದಿಲ್ಲ. ಅದೆಷ್ಟೋ ಕಡೆ ಬಾವಿಗಳಿಂದ ನೀರು ಜಗ್ಗಲು ಎತ್ತಿನ ಜೋಡಿಗಳಿಲ್ಲ. ಕೆಲ ಬಾವಿಗಳಲ್ಲಿ ನೀರು ಮೇಲೆಯೇ ಇದೆ. ಅಂಥ ಬಾವಿಯಿಂದ ಪ್ರಜೆಗಳು, ಯಾತದಿಂದ ತಾವೇ ನೀರನ್ನು ಜಗ್ಗುತ್ತಾರೆ.

**ನಳ:** ಮಂತ್ರಿಗಳೇ, ನಾವು ನದಿಗಳಿಂದ ಕಾಲುವೆ ತಂದು ಈ ಕೆಲಸವನ್ನು ಪೂರ್ಣಗೊಳಿಸಲು ಸಾಧ್ಯವಿಲ್ಲವೇ ? ಆಗಲಾದರೂ ಕೊಂಚ ಸಿದ್ಧಿ ಸಾಧಿಸಬಹುದಲ್ಲ !

**ಮಂತ್ರಿ:** ಒಂದು ಕಾಲುವೆಯ ಕೆಲಸವೂ ನಡೆದಿದೆ, ಮಹಾರಾಜ.

**ದಮಯಂತಿ:** ಕಾಲುವೆಗಳಿಂದ ಈ ಕಾರ್ಯದ ಸಿದ್ಧಿ ಆಗಬಹುದೆಂಬ ಆಶಯ ನನ್ನದಾಗಿದೆ. ನಾವು ಇನ್ನಿಷ್ಟು ಕಾಲುವೆ ತೆಗೆಸುವಲ್ಲಿ ನಮ್ಮ ಶಕ್ತಿ ವಿನಿಯೋಗಿಸಬೇಕು.

**ನಳ:** ಹೌದು, ಮಂತ್ರಿಗಳೇ ! ನಾವು ನಾಲ್ಕೈದು ಕಾಲುವೆ ತೆಗೆಸಲು ಆರಂಭ ಮಾಡಬೇಕು. ಏಕೆ, ಅದು ಸಾಧ್ಯವಿಲ್ಲವೇ ?

**ಮಂತ್ರಿ:** ಮಹಾರಾಜ, ಇರುವ ತೊಂದರೆ ಅದೇ ದ್ರವ್ಯದ್ದು. ಕಾಲುವೆ ತೆಗೆಯುವ ಪ್ರಜೆಗಳಿಗೆ ಯೋಗ್ಯ ಕೂಲಿ ಎಲ್ಲಿಂದ ಕೊಡುವುದು ?

**ನಳ:** ತಮ್ಮ ಹಿತಕ್ಕಾಗಿಯೇ ದುಡಿಯಲು ಪ್ರಜೆಗಳನ್ನು ಪ್ರೇರೇಪಿಸಲು ಸಾಧ್ಯವಾಗಲಿಕ್ಕಿಲ್ಲವೇ ?

**ಮಂತ್ರಿ:** ಪ್ರಜೆಗಳಿಗೆ ಕೃಷಿಗಾಗಿ ಹಂಚಲಾಗದ ಹೊಲಗಳಲ್ಲಿ ಈ ಕೆಲಸವನ್ನು ಸುಲಭವಾಗಿ ಮಾಡಿಸಬಹುದಾಗಿದೆ. ಇಂಥ ಹೊಲಗಳಲ್ಲಿ ಕಾಲುವೆ ತೆಗೆಯಲು ಬರುವ ಪ್ರಜೆಗಳಲ್ಲಿಯೇ, ಈ ಹೊಲವನ್ನು ಹಂಚಲಾಗುವುದು ಎಂದು ನಾವು ಪ್ರಜೆಗಳಿಗೆ ಹೇಳಬಹುದಾಗಿದೆ.

**ದಮಯಂತಿ:** ಈ ಕೆಲಸ ಅವಶ್ಯ ಹಾಗೂ ಶೀಘ್ರವಾಗಿ ಆಗಬೇಕು.

**ಮಂತ್ರಿ:** ಮಹಾರಾಜರ ಆಜ್ಞೆಯಾದರೆ ನಾವು ಇಂಥ ಒಂದು ಯೋಜನೆ ಮಾಡಬಹುದಾಗಿದೆ.

**ದಮಯಂತಿ:** ಹೌದು, ಹಾಗೇ ಮಾಡಿ ಮಂತ್ರಿಗಳೇ, ಈ ಕೆಲಸದಲ್ಲಿ ತಾತ್ಸಾರ ಸಲ್ಲದು. ಆ ಹೊಸ ಸ್ಥಳದಲ್ಲಿ ವಾಸ ಮಾಡಲು ನಾವೂ ಬೇಕಾದರೆ ಹೋಗೋಣ.

**ಮಂತ್ರಿ:** ಒಳ್ಳೆಯದು, ಮಹಾರಾಜ, ಈ ಪಟ್ಟಣ ಅಕಾಲದಲ್ಲಿ ಬಹಳ ತೊಂದರೆಗೀಡಾಗುತ್ತದೆ. ರಾಜಭವನವೂ ಕಾಲುವೆಗಳಿಂದ ಉಳುಮೆ

ಆಗುವ ಭೂಪ್ರದೇಶದಲ್ಲಿದ್ದರೇ ಒಳ್ಳೆಯದು.

**ದಮಯಂತಿ:** ಹಾಂ, ಈ ಪಟ್ಟಣದ ಮೇಲೆ ಶತ್ರುದೇವತೆಗಳ ಛಾಯೆ ಬಿದ್ದಿದೆ. ಈ ಕಾಲದಲ್ಲಿ ನಮಗೆ ಸ್ಥಾನ ಬದಲಿಸಬೇಕಾದುದು ಅವಶ್ಯವಾಗಿದೆ.

**ಮಂತ್ರಿ:** ಅದೂ ಅಲ್ಲದೆ ರಾಜವಂಶದ ಮರ್ಯಾದೆ ಕೂಡ. ಹೊಸ ಪರಿವಾರ ಹಾಗೂ ಹೊಸ ಭವನ.

(ಎಲ್ಲರೂ ಮುಗುಳ್ನಗುತ್ತಾರೆ.)

**ಸಚಿವ:** ಮಹಾರಾಜ, ಕೆಲ ಸೂಚನೆಗಳು, ಕೈಗಾರಿಕೆಗಳ ಬಗ್ಗೆ, ಅವನ್ನೂ ವಿಚಾರಿಸಬೇಕು.

**ನಳ:** ಹೌದು, ಹೌದು! ಇದರ ಬಗ್ಗೆಯೂ ಸಾಕಷ್ಟು ಧ್ಯಾನ ನೀಡಬೇಕು. ವಿದರ್ಭಕ್ಕೆ ಹೋಗುವುದಕ್ಕಿಂತ ಮೊದಲು ನಾವು ಈ ವಿಭಾಗದ ಅಧಿಕಾರವನ್ನು ವೀರ ಪುಷ್ಕರನಿಗೆ ವಹಿಸಿಕೊಡಲಾಗಿತ್ತು. ಪುಷ್ಕರ ಚತುರನಾಗಿದ್ದಾನೆ, ಆದರೆ ಅವಶ್ಯಕತೆಗಿಂತ ಕೊಂಚ ಅಧಿಕ.

**ಅಧಿಕಾರಿ:** ಕೈಗಾರಿಕೋದ್ಯಮದಲ್ಲಿ ಬಟ್ಟೆಯ ಉತ್ಪಾದನೆಯ ಕೆಲಸ ರಾಜ್ಯದಲ್ಲಿ ತುಂಬ ಅಧಿಕವಾಗಿದೆ. ಆದರೆ ಮಾರಾಟ ಕರದಲ್ಲಿ ಏನೂ ಲಾಭವಾಗಲಿಲ್ಲ.

**ನಳ:** ನೇಕಾರರಿಗೆ ಅದೆಷ್ಟೋ ಸವಲತ್ತುಗಳನ್ನು ಕೊಡಬೇಕಾಯಿತು. ಅದೂ ಅಲ್ಲದೆ ಅವರಿಗೆ ಕರ ಕಡಿಮೆ ಮಾಡಲಾಯಿತು. ಅವರು ತಮ್ಮ ಉದ್ಯಮದಲ್ಲಿ ಅಭಿವೃದ್ಧಿ ಹೊಂದಲೆಂದು-ಹೀಗೆಲ್ಲ ಪುಷ್ಕರ ಹೇಳುತ್ತಿರಬಹುದು.

**ಅಧಿಕಾರಿ:** ಮಹಾರಾಜ, ಮಾರಾಟ ಕರ ಮುಂತಾದ ಕರಗಳಲ್ಲಿ ವೃದ್ಧಿ ಆಗದೆ ಇರುವುದರ ಮುಖ್ಯ ಕಾರಣವೆಂದರೆ ಬಟ್ಟೆಯನ್ನು ಹೆಚ್ಚು ನೆಯ್ಯಲಾಗಿದ್ದರೂ ಅದಕ್ಕೆ ಮೊದಲಿದ್ದ ಬೆಲೆ ಇಲ್ಲದೆ ಹೋದುದು-ಎಂದು ಹೇಳಲಾಗಿದೆ.

**ಮಂತ್ರಿ:** ಇದರಲ್ಲಿ ಸಂದೇಹವಿಲ್ಲ, ಏಕೆಂದರೆ ಅಕಾಲದಿಂದಾಗಿ ಜನತೆಯಲ್ಲಿ ಕೊಳ್ಳುವ ಹಾಗೂ ಹೆಚ್ಚು ಬೆಲೆ ತೆತ್ತುವ ಶಕ್ತಿ ಕಡಿಮೆಯಾಗಿದೆ.

**ಅಧಿಕಾರಿ:** ವಿಶೇಷವಾಗಿ, ಈ ಗ್ರೀಷ್ಮ ಋತುವಿನಲ್ಲಿ ಬಟ್ಟೆಯ ಮಾರಾಟ ತುಂಬ ಕಡಿಮೆಯಾಗಿದೆ.

**ನಳ:** ಈ ಗ್ರೀಷ್ಮದಿಂದಲೇ ರಾಜ್ಯದ ಪತನ ಆರಂಭವಾಯಿತೆಂದು ತೋರುತ್ತದೆ.

**ದಮಯಂತಿ:** ಪ್ರಿಯ, ಹೀಗೆ ಹೇಳದಿರಿ! ತಮ್ಮ ರಾಜ್ಯದ ಪತನ ಎಂದೂ ಆಗಲಾರದು.

**ನಳ:** ಹಾಗೇ ಆಗಲಿ, ಆದರೆ ದೇವತೆಗಳ ಹಗೆ ಕೂಡ ಒಂದು ಕಠೋರ ಶಕ್ತಿಯಾಗಿದೆ.

**ದಮಯಂತಿ:** ನಾವು ದೇವತೆಗಳ ಈ ಹಗೆಯ ಮೇಲೆ ವಿಜಯ ಪಡೆಯೋಣ. ವಿದರ್ಭದಲ್ಲಿ, ಜಲದೇವನೊಂದಿಗೆ ಆಟದಲ್ಲಿ ತಾವು

ಸೋಲುತ್ತಿರುವಾಗ, ಆ ಸೋಲಿಸಿಂದ ತಮ್ಮನ್ನು ಉಳಿಸಿ ಕೊಳ್ಳಲಿಲ್ಲವೇ ?

**ನಳ:** ಇಂಥದೇ ಏನಾದರೂ ಸಾಹಸವಾದರೆ, ಈ ದೇವತೆಗಳ ಪಗೆಯಿಂದ ಪಾರಾಗುವುದು ಸಾಧ್ಯ.

**ಅಧಿಕಾರಿ:** ಖನಿಜ ಪದಾರ್ಥಗಳ ಉತ್ಪನ್ನ ಕೂಡ ಕಡಿಮೆಯಾಗಿದೆ.

**ನಳ:** ಇದಕ್ಕೆ ಕಾರಣ ?

**ಮಂತ್ರಿ:** ಈ ಕೊರತೆ ಕೂಡ, ಈ ಋತುವಿನ ಆಗಮನದೊಂದಿಗೇ ಆರಂಭವಾಗಿದೆ.

**ಅಧಿಕಾರಿ:** ಈ ವರ್ಷ ವನದಲ್ಲಿ ಮರಗಳನ್ನು ಕಡಿಯುವ ಕೆಲಸಕ್ಕೆ ಜನರನ್ನು ಹೆಚ್ಚು ಹಚ್ಚಿದ್ದರಿಂದ, ಗಣಿಗಳಲ್ಲಿ ಕೆಲಸಗಾರರು ಕಡಿಮೆಯಾಗಿರ ಬೇಕೆಂದು ತೋರುತ್ತದೆ.

**ನಳ:** ಇದು ಒಳ್ಳೆ ಕೆಲಸವಾಯಿತಲ್ಲ. ವನದಲ್ಲಿ ಕೆಲಸಕ್ಕೆ ಪ್ರಜೆಗಳನ್ನು ಹಚ್ಚಿದರೆ, ಬಟ್ಟೆ ನೆಯ್ಯುವುದಕ್ಕೆ ಹಾಗೂ ಗಣಿಗಳಲ್ಲಿ ಕೆಲಸ ಮಾಡುವುದಕ್ಕೆ ಕೆಲಸಗಾರರ ಕೊರತೆಯಾಗುತ್ತದೆ. ವಿಚಿತ್ರ ಪರಿಸ್ಥಿತಿ.

**ಮಂತ್ರಿ:** ಮಹಾರಾಜ, ರಾಜ್ಯದ ಆರ್ಥಿಕ ಉನ್ನತಿಯ ಗತಿಯನ್ನು ಹೆಚ್ಚಿಸಲೋಸುಗ ತುಂಬ ಬುದ್ಧಿಮತ್ತೆ ಪೂರ್ವಕ ಯೋಜನೆ ನಿರ್ಮಿಸುವ ಅವಶ್ಯಕತೆ ಇದೆ. ನಾವು ತುಂಬ ಎಚ್ಚರಿಕೆಯಿಂದ ಕೆಲಸ ಮಾಡುತ್ತಿದ್ದೇವೆ, ಹಾಗಿದ್ದರೂ ಏನೇನೋ ಕೊರತೆಗಳು ಉಳಿದುಬಿಡುತ್ತವೆ, ಹಾಗೂ ಹೊಸ ಸಮಸ್ಯೆಗಳು ತಲೆದೋರುತ್ತವೆ. ಈ ಶರತ್ಕಾಲದವರೆಗೆ ನಾವು, ಕಳೆದ ವರ್ಷದ ಕೊರತೆಗಳನ್ನು ದೂರ ಮಾಡಲು ಬೇಕಾಗುವ ಸಾಧನ ಸಾಮಗ್ರಿ ಸಂಗ್ರಹಿಸುವಲ್ಲಿ ಯಶಸ್ವಿಯಾಗುತ್ತೇವೆ.

**ನಳ:** ಸರಿ, ಉಪ್ಪಿನ ಉದ್ಯಮದ ಸ್ಥಿತಿ ಹೇಗಿದೆ ?

**ಅಧಿಕಾರಿ:** ಈ ವರ್ಷ ಅದರಲ್ಲೂ ಕೊರತೆ ಇದೆ, ಮಹಾರಾಜ.

**ನಳ:** (ಗಾಬರಿಯಾಗಿ) ಅದು ಏಕೆ ? ಏನು ಹಳ್ಳದ ನೀರಿನಲ್ಲಿಯ ಉಪ್ಪು, ದೇವತೆಗಳ ಕ್ರೋಧದ ಕಾರಣದಿಂದಾಗಿಯೇ ಕಡಿಮೆಯಾಯಿತೇ ?

**ಅಧಿಕಾರಿ:** ಮಹಾರಾಜ, ರಾಜಕುಮಾರ ಪುಷ್ಕರ ಅವರು ಈ ವರ್ಷ, ಕಳೆದ ವರ್ಷದಷ್ಟು ಉಪ್ಪು ಹೊರಡಲಿಲ್ಲವೆಂದು ಹೇಳುತ್ತಿದ್ದಾರೆ. ಕಳೆದ ವರ್ಷ ಹೆಚ್ಚು ಉಪ್ಪು ಲಭ್ಯವಾಗಿತ್ತು. ನಾವು ಕಳೆದ ವರ್ಷ ನೀರನ್ನು ಪಡೆದ ಸ್ಥಾನದಲ್ಲಿ ಉಪ್ಪಿನ ಅಂಶ ಅದರಲ್ಲಿ ಹೆಚ್ಚಾಗಿತ್ತು. ಈ ವರ್ಷದ ನೀರಿನಲ್ಲಿ ಉಪ್ಪಿನ ಅಂಶ ಕಡಿಮೆ ಇದೆ-ಎಂದು ರಾಜಕುಮಾರ ಪುಷ್ಕರ ಅವರ ಹೇಳಿಕೆಯಾಗಿದೆ.

**ನಳ:** ಇದು ಹೇಗೆ ಸಾಧ್ಯ ? ಹಳ್ಳದ ನೀರನ್ನು ಬೇರೆ ಬೇರೆ ಪಾತಳಿಯಲ್ಲಿ ಹಂಚಿ ಹಾಕಿಲ್ಲವಲ್ಲ, ಒಂದೆಡೆಯ ನೀರಿನಲ್ಲಿ ಉಪ್ಪು ಹೆಚ್ಚಾಗಿರಲು, ಇನ್ನೊಂದೆಡೆಯ ನೀರಿನಲ್ಲಿ ಉಪ್ಪು ಕಡಿಮೆಯಾಗಿರಲು.

(ಅಧಿಕಾರಿ ಮೌನವಾಗಿರುತ್ತಾನೆ)

**ಮಂತ್ರಿ:** ಮಹಾರಾಜ, ಇದನ್ನೇ ಹೇಳಲಾಗಿದೆ. ಇದರಲ್ಲಿ ಸತ್ಯವೂ ಇರಬಹುದುದಾಗಿದೆ.

**ನಳ:** ಯಾರ ಮಾತನ್ನು ನಂಬಲಿ, ಯಾರ ಮಾತನ್ನು ನಂಬದಿರಲಿ! ಸೋದರನಾದ ಪುಷ್ಕರನಲ್ಲಿ ಅವಿಶ್ವಾಸ ಮಾಡಲೇ? ಆತ ಹೇಳಿದ ಹಾಗೆ ಇದ್ದಿರಬಹುದು. ಈ ವರ್ಷ ಎಲ್ಲ ಕಡೆಯಿಂದ ಹಾನಿಯೇ ಹಾನಿ, ಕೊರತೆಯೇ ಕೊರತೆ.

(ದಮಯಂತಿಯ ಕಡೆ ನೋಡುತ್ತಾನೆ. ಅವಳು ಲಜ್ಜೆಗೊಳ್ಳುತ್ತಾಳೆ. ಮಂತ್ರಿ ಹಾಗೂ ಅಧಿಕಾರಿಗಳೂ ಏನೂ ಹೇಳುವುದಿಲ್ಲ.)

**ನಳ:** (ಕೆಲ ಹೊತ್ತಿನ ನಂತರ) ಸರಿ, ಮಂತ್ರಿಗಳೇ ತಾವು ಹಾಗೂ ಅಧಿಕಾರಿಗಳು ಇನ್ನು ಹೊರಡಬಹುದು. ನಾವು ಕೆಲ ಸಮಯ ವಿಶ್ರಾಂತಿ ಪಡೆಯುತ್ತೇವೆ. (ಮಂತ್ರಿ, ಅಧಿಕಾರಿ ಹೋಗುತ್ತಾರೆ.)

**ದಮಯಂತಿ:** (ಹತ್ತಿರ ಬಂದು) ಪ್ರಿಯ, ಈ ರೀತಿ ಸಿಟ್ಟಿಗೆ ಬರುವುದು ತಮಗೆ ಶೋಭಿಸುವುದಿಲ್ಲ, ಅದೂ ಅಲ್ಲದೆ ಇದರಿಂದ ಯಾವ ಲಾಭವೂ ಇಲ್ಲ.

**ನಳ:** ನಾನು ಮಂತ್ರಿಯ ಮೇಲಾಗಲಿ ಅಥವಾ ಅಧಿಕಾರಿಯ ಮೇಲಾಗಲಿ ಸಂಶಯ ವ್ಯಕ್ತಗೊಳಿಸಲಿಲ್ಲ. ಅದೂ ಅಲ್ಲದೆ ಅವರ ಬಗ್ಗೆ ನನ್ನಲ್ಲಿ ಸಂಶಯ ಹುಟ್ಟಿಯೂ ಇಲ್ಲ.

**ದಮಯಂತಿ:** ಹಾಗಾದರೆ ಪುಷ್ಕರ ರಾಜನ ಬಗ್ಗೆ ಸಂಶಯ ಉತ್ಪನ್ನವಾಗಿದೆ ಏನು?

**ನಳ:** ಹಾಂ, ಪುಷ್ಕರ ರಾಜನ ಬಗ್ಗೆ. ಪುಷ್ಕರ ನನಗೆ ದ್ರೋಹ ಮಾಡುತ್ತಿದ್ದಾನೆ. ಅವನು ನನ್ನ ಶತ್ರುಗಳಾದ ದೇವತೆಗಳೊಂದಿಗೆ ಬೆರೆತಿದ್ದಾನೆಂದು ಅನ್ನಿಸುತ್ತಲಿದೆ.

**ದಮಯಂತಿ:** ಹೀಗೆ ಸಂಶಯಪಡಲು ತಮ್ಮ ಹತ್ತಿರ ಸಾಕಷ್ಟು ಕಾರಣಗಳು ಇರಬೇಕಾಗುತ್ತದೆ. ಸೋದರನ ಬಗ್ಗೆ ಅನಾವಶ್ಯಕವಾಗಿ ಸಂಶಯಪಡುವುದು ಘೋರ ಪಾಪ.

**ನಳ:** ದೇವತೆಗಳ ಹಗೆ ನನ್ನ ಸಾಹಸವನ್ನೇ ಹಾಳು ಮಾಡಿದೆ. ನನ್ನ ಬುದ್ಧಿ ಕೂಡ ಕೆಲಸ ಮಾಡಲು ನಿರಾಕರಿಸುತ್ತಲಿದೆ ಎಂದು ತೋರುತ್ತದೆ.

**ದಮಯಂತಿ:** ಪುಷ್ಕರ ರಾಜ ಕೂಡ ಯಾವ ಕಡೆಯಿಂದಲೂ ಲಾಭವಾಗುವುದನ್ನು ತೋರಿಸುತ್ತಿಲ್ಲ. ಹಾಗಿದ್ದರೂ ಇದರಲ್ಲಿ, ಅವನ ತಪ್ಪೇನು ಇರದೆ ಇರಬಹುದು. ಒಂದು ವೇಳೆ ದೇವತೆಗಳ ಕ್ರೋಧ ರಾಜ್ಯದ ಕೃಷಿ ಹಾಗೂ ವನಸ್ಪತಿಗಳ ಮೇಲೆ ಪ್ರಭಾವ ಬೀರುವುದಾದರೆ, ಖನಿಜ ಪದಾರ್ಥಗಳ ಮೇಲೂ ಬೀರಬಹುದಾಗಿದೆ.

**ನಳ:** ಖನಿಜ ಪದಾರ್ಥಗಳ ಮೇಲೆ, ಉದ್ಯೋಗಗಳ ಮೇಲೆ, ಕೃಷಿ ಹಾಗೂ ವನಸ್ಪತಿಗಳ ಮೇಲೆ ಇದ್ದಷ್ಟು ದೇವತೆಗಳ ಅಧಿಕಾರವಿರುವುದಿಲ್ಲ.

ಖನಿಜ ಹಾಗೂ ಕೈಗಾರಿಕೆಗಳ ಮೇಲೆ ಮನುಷ್ಯನ ಅಧಿಕಾರ ಹೆಚ್ಚಾಗಿರುತ್ತದೆ.

**ದಮಯಂತಿ:** (ಕಟಾಕ್ಷ ಬೀರಿ) ಇನ್ನೊಂದು ಕ್ಷೇತ್ರದಲ್ಲೂ ಮನುಷ್ಯನ ಅಧಿಕಾರ ಹೆಚ್ಚಿಗಿದ.

**ನಳ:** ಅದು ಯಾವ ಕ್ಷೇತ್ರದಲ್ಲಿ ?

**ದಮಯಂತಿ:** ಅದು ಪ್ರೇಮ ಕ್ಷೇತ್ರ. ಆ ಕ್ಷೇತ್ರದಲ್ಲಂತೂ ಮನುಷ್ಯ ದೇವತೆಗಳ ಮೇಲೆ ವಿಜಯ ಸಂಪಾದಿಸಿದ್ದಾನೆ, ಅಲ್ಲವೇ ?

**ನಳ:** ಹಾಂ! ಪುರುಷ ಹಾಗೂ ಸ್ತ್ರೀ ಇಬ್ಬರೂ ಸೇರಿ.

**ದಮಯಂತಿ:** ಇದರಿಂದಾಗಿಯೇ ಮನುಷ್ಯನಿಗೆ, ದೇವತೆಗಳಿಗಿಂತ ವಿಶೇಷತೆ ಪ್ರಾಪ್ತವಾಗಿರುವುದು.

**ನಳ:** ಹೌದಾ ? ಆದರೆ ಅದೆಷ್ಟೋ ದೇವತೆಗಳೂ ವಿವಾಹಿತರಾಗಿದ್ದಾರೆ.

**ದಮಯಂತಿ:** ಆದರೆ ಅವರಿಗೆ ಸಂತಾನದ ವರದಾನ ಪ್ರಾಪ್ತಿಯಾಗಿಲ್ಲ. ಸಂತಾನ ಮನುಷ್ಯನ ಭಾಗ್ಯದಲ್ಲಿ ಮಾತ್ರವಿದೆ.
(ದಮಯಂತಿ ತನ್ನ ಹೊಟ್ಟೆಯ ಕಡೆ ನೋಡುತ್ತಾಳೆ; ಆಗ ನಳನ ಮನಕ್ಕೆ ಕೊಂಚ ಹೊಳೆಯುತ್ತದೆ-ಏನೋ.)

**ನಳ:** ಹಾಗಾದರೆ, ನನ್ನ ಭಾಗ್ಯದ ಈ ಬಾಗಿಲು ತೆರೆಯತೊಡಗಿದೆಯೇ ?

**ದಮಯಂತಿ:** (ಮುಗುಳ್ನಗುತ್ತ, ನಳನ ತೋಳುಗಳಲ್ಲಿ ಬಾಗುತ್ತಾಳೆ) ತಮಗೆ ಗೊತ್ತಿರಬೇಕು.

**ನಳ:** ಮೊದಲಂತೂ ನಿನಗೇ ಗೊತ್ತಾಗಿರಬೇಕು, ದಮಯಂತಿ. ಆದರೆ, ಈಗ ನನಗೂ ಗೊತ್ತಾಯಿತು.
(ನಳ ದಮಯಂತಿಯನ್ನು ಅಪ್ಪಿಕೊಂಡು ಚುಂಬಿಸುತ್ತಾನೆ.)

**ದಮಯಂತಿ:** ಇನ್ನು ಮೇಲೆ, ದೇವತೆಗಳಿಂದ ನಿಮಗೆ ಯಾವ ಭಯವೂ ಬೇಡ. ತಾವು ದೇವತೆಗಳಿಗಿಂತಲೂ, ಎಲ್ಲ ರೀತಿಯಲ್ಲೂ ಅಮರರಿದ್ದೀರಿ.

**ನಳ:** ಹಾಂ, ಸದಾಕಾಲವೂ ಮನುಷ್ಯ ಹೊಸಬನಾಗಿಯೇ ಇರುತ್ತಾನೆ. ಬಾಲ್ಯ, ಮತ್ತೆ ಯೌವ್ವನ ಹಾಗೂ ಮುಪ್ಪು. ವೃದ್ಧಾಪ್ಯದಲ್ಲಿ ಹಳೆಯ ಶರೀರ ತ್ಯಜಿಸಿ ಅವನು ತನ್ನ ಮಕ್ಕಳ ರೂಪದಲ್ಲಿ ಹೊಸ ಶರೀರ ಧರಿಸಿಕೊಳ್ಳುತ್ತಾನೆ.

**ದಮಯಂತಿ:** ದೇವತೆಗಳಿಗೆ ಈ ಸೌಭಾಗ್ಯ ಇಲ್ಲ.

**ನಳ:** ಆದರೆ ಮನುಷ್ಯನಲ್ಲಿ ಒಂದರ ಕೊರತೆ ಇದೆ.

**ದಮಯಂತಿ:** ಅದು ಯಾವುದು ?

**ನಳ:** ಮನುಷ್ಯ, ಮನುಷ್ಯನನ್ನು ಮೋಸಗೊಳಿಸುತ್ತಾನೆ. ಈಗ ನನ್ನ ಸೋದರ ಪುಷ್ಕರನಿದ್ದಾನೆ, ಅವನು ನನಗೆ ಮೋಸ ಮಾಡುತ್ತಿದ್ದಾನೆ ಎನ್ನುವ ಸಂಶಯ ನನಗಿದೆ.

**ದಮಯಂತಿ:** ನನ್ನ ವಿಚಾರದಲ್ಲಿ, ಇದನ್ನು ನಿರ್ಣಯಿಸುವುದು ತುಂಬ ಕಠಿಣವಾಗಿದೆ. ತಾವು ಅವನೊಂದಿಗೆ ಜೂಜಾಟ ಆಡಿ. ಅವನು ಅದರಲ್ಲಿ ಮೋಸ,

ವಂಚನೆ ಮಾಡಿ ತಮ್ಮಿಂದ ಆಟ ಗೆಲ್ಲಲು ಪ್ರಯತ್ನಿಸಬಹುದಾದರೆ, ಆಗ ತಮ್ಮ ಬಗ್ಗೆ ಅವನಲ್ಲಿ ದ್ರೋಹದ ಭಾವನೆ ಇದೆಂದು ಖಾತ್ರಿಯಾಗುವುದು.

ನಳ: ಪರೀಕ್ಷೆ ಮಾಡುವ ವಿಧಾನವನ್ನು ನೀನು ಸರಿಯಾದುದನ್ನೇ ತಿಳಿಸಿದೆ, ದಮಯಂತಿ. ಇದನ್ನೇ ಮಾಡಿ ನೋಡುತ್ತೇನೆ. ನಾಳೆ ಅವನನ್ನು ಇಲ್ಲಿಗೆ, ಭವನಕ್ಕೆ ಕರೆಯಿಸೋಣ ಹಾಗೂ ಆಟದಲ್ಲಿ ಶರತ್ತು ಹಚ್ಚೋಣ.

# ಅಂಕ: ಆರು

**(ರಾಜಾ ನಳನ ರಾಜ ಭವನದ ಒಂದು ಕೋಣೆ. ರಾಜಾ ನಳ ಮತ್ತು ದಮಯಂತಿ ಇದ್ದಾರೆ. ಹೊರಗೆ ಮಳೆಯಾಗುತ್ತಲಿದೆ. ಸಮಯ, ಸಾಯಂಕಾಲವಾಗಲಿದೆ.)**

**ನಳ:** ಹಾಗಾದರೆ, ನನ್ನ ಸಂಶಯ ನಿಜವಾಯಿತು. ಪುಷ್ಕರ ಅತ್ಯಂತ ಕುಟಿಲ ಆಚಾರದ ಪುರುಷನೆಂಬುದು ಸಿದ್ಧವಾಯಿತು.

**ದಮಯಂತಿ:** ಹಾಂ, ಜೂಜಾಟದಲ್ಲಿ ಎಲ್ಲವನ್ನೂ, ರಾಜ್ಯವನ್ನೂ ಗೆದ್ದುಕೊಳ್ಳಬೇಕೆಂಬ ದುರ್ಭಾವನೆ ಅವನಲ್ಲಿತ್ತು.

**ನಳ:** ನಿನ್ನ ಬಗೆಗಿನ ದುರ್ಭಾವನೆ ಅವನಲ್ಲಿಂದಿದ್ದರೂ ಎಲ್ಲವನ್ನೂ ಗೆದ್ದು ಕೊಳ್ಳುತ್ತಿದ್ದ. ನನಗೆ ಅವನು ಏನು ಕೇಳಿದ ಗೊತ್ತೇ ? ದಮಯಂತಿಯನ್ನು ಪಣಕ್ಕೆ ಹಚ್ಚು-ಎಂದೊಮ್ಮೆ ಕೇಳಿದ.

**ದಮಯಂತಿ:** ದಮಯಂತಿಯನ್ನು ಪಣಕ್ಕೆ ಹಚ್ಚಿಸಿ, ದೇವತೆಗಳೂ ನಳನಿಂದ ಆಟವನ್ನು ಗೆಲ್ಲಲಾಗಲಿಲ್ಲವೆಂಬುದು ಗೊತ್ತಿಲ್ಲವೆಂದು ತೋರುತ್ತದೆ.

**ನಳ:** ದಮಯಂತಿಯನ್ನು ಪಣಕ್ಕೆ ಹಚ್ಚುವಂತೆ ಅವನು ಕೇಳುತ್ತಿರುವಂತೆಯೇ, ಅವನು ಮೊದಲು ಗೆದ್ದುದನ್ನೆಲ್ಲ ಮರಳಿಸಬೇಕಾಯಿತು-ಹಾಗೆ ಸೋತು ಸುಣ್ಣವಾದ. ಅಷ್ಟೇ ಅಲ್ಲ ನಾಚಿಕೆಯಿಂದಾಗಿ ರಾಜ್ಯವನ್ನೇ ತ್ಯಜಿಸಿದ.

**ದಮಯಂತಿ:** ನಿಲ್ಲುತ್ತಾನೆ ಹೇಗೆ ರಾಜ್ಯದಲ್ಲಿ ? ಕರಗಳ ಲೆಕ್ಕ ಮಾಡಿದಾಗ ಅಲ್ಲಿಯೂ ಸುಳ್ಳುಗಾರನಾದ.

**ನಳ:** ಅವನು ನಮ್ಮ ಮದುವೆಯ ಕಾಲದಿಂದಲೇ ದೇವತೆಗಳೊಂದಿಗೆ ಸೇರಿಕೊಂಡಿದ್ದ.

**ದಮಯಂತಿ:** ಆ ಪಾಪಿ, ಈ ಶತ್ರುಗಳೊಂದಿಗೆ ಕೂಡಿಕೊಳ್ಳುವ ಅವಶ್ಯಕತೆ ಏನಿತ್ತು ? ನಾವು ಹೊಸದಾಗಿ ನೆಲಸಬೇಕೆಂದಿರುವ ಭೂಮಿಯಲ್ಲಿ ರಾಜಮಹಲ್ ಕಟ್ಟಿಸಿಕೊಂಡು ಅಲ್ಲಿಗೆ ಹೋಗುತ್ತಿದ್ದೆವು. ಅವನನ್ನು ಇಲ್ಲಿಯ ರಾಜ್ಯಪಾಲನನ್ನಾಗಿ ಮಾಡುತ್ತಿದ್ದೆವು. ಅಷ್ಟೇ ಏಕೆ ರಾಜ್ಯದ ಈ ಭಾಗಕ್ಕೆ ಅವನೇ ರಾಜನಾಗುತ್ತಿದ್ದ.

**ನಳ:** ಶತ್ರುಗಳದು ಇದೂ ಒಂದು ತಂತ್ರ. ಅವರು ತಮ್ಮ ಶತ್ರುತ್ವದಲ್ಲಿ, ಮನುಷ್ಯನ ಬಂಧುಗಳ ಬುದ್ಧಿ ಭ್ರಷ್ಟಗೊಳಿಸುತ್ತಾರೆ, ಹಾಗೂ ಸೋದರನನ್ನು ಸೋದರನ ವೈರಿಯನ್ನಾಗಿ ಮಾಡುತ್ತಾರೆ.

**ದಮಯಂತಿ:** ಇದರಿಂದ ಅವನಿಗೇನು ಒಳ್ಳೆಯದಾಗಬಲ್ಲುದು!

**ನಳ:** ಅವನಿಗೆ ಒಳ್ಳೆಯದಾಗಬೇಕೆಂಬ ವಿಚಾರದಿಂದಾಗಿ ಅವನ ಬುದ್ಧಿ ಭ್ರಷ್ಟಗೊಳಿಸಲಾಗುವುದಿಲ್ಲ. ಶತ್ರುಗಳ ಉದ್ದೇಶ, ಅವನ ಬುದ್ಧಿಯನ್ನೂ ಕೆಡಿಸಿ ಅವನ ಬಂಧುವಿಗೆ ಹಾಗೂ ಅವನಿಗೆ ಇಬ್ಬರಿಗೂ ಹಾನಿ ಉಂಟುಮಾಡುವುದಾಗಿದೆ.

**ದಮಯಂತಿ:** ನನ್ನ ಮಾವನ ಮಗಳೊಂದಿಗ ಅವನ ಸಂಬಂಧ ಮಾಡಿಸಬೇಕೆಂದಿದ್ದೆ. ಸುನಂದಾ ಬಹಳ ಚೆಲುವೆಯಾಗಿದ್ದಾಳೆ.

**ನಳ:** (ನಕ್ಕು) ಒಂದು ವೇಳೆ ಪುಷ್ಕರ ಓಡಿಹೋದರೆ, ಸುನಂದಾಳ ಸಂಬಂಧ ನನ್ನೊಂದಿಗೆ ಮಾಡಿಬಿಡು.

**ದಮಯಂತಿ:** (ಒಂದು ಹೊಡೆತ ಹೊಡೆದು) ತಾವು ಈಗಲೇ ಇನ್ನೊಂದು ಸಂಬಂಧದ ಆಶೆ ಮಾಡಹತ್ತಿದಿರೇನು! ನಾನು ಸ್ವಲ್ಪಾದರೂ ಹಳಬಳಾಗುವವರೆಗೆ ತಡೆಯಿರಿ. ನಾನಿನ್ನೂ ಒಂದೇ ಮಗುವಿನ ತಾಯಿಯಾಗಿರುವೆ. ಎರಡು ಮಕ್ಕಳ ನಂತರ, ತಮಗೆ, ಒಂದು ವೇಳೆ ನಾನು ಹಳಬಳೆನಿಸಿದರೆ ಹಾಗೂ ನನ್ನ ರೂಪ ಕುರೂಪವಾಗಿ ಕಾಣತೊಡಗಿದರೆ.....ಈಗಲೇ ಹೀಗಾಗ ಬಾರದು.

**ನಳ:** ಇಷ್ಟು ಸಣ್ಣ ಮಾತಿನ ಬಗ್ಗೆ ದೊಡ್ಡ ಬಾಷಣ ಬಿಗಿದೆ, ದಮಯಂತಿ.

**ದಮಯಂತಿ:** (ಕೊಂಚ ಮುನಿಸಿನಿಂದ) ತಾವು, ಪುರುಷರು ಒಮ್ಮೆಲೇ ಇಂಥ ಮಾತು ಹೇಗೆ ಅನ್ನುತ್ತೀರಿ? ತಮಗೆ ಲಜ್ಜೆ, ಭಯ, ಸಂಕೋಚ ಏನೂ ಇರುವುದಿಲ್ಲೇನು?

**ನಳ:** ಕ್ಷಮಿಸು, ದಮಯಂತಿ. ನನಗಂತೂ ಈ ಲೋಕದಲ್ಲಿ ನಿನ್ನನ್ನು ಬಿಟ್ಟರೆ ಇನ್ನಾವ ಸುಂದರಿಯೂ ಇಲ್ಲ. ಸುನಂದಾಳ ಬಗ್ಗೆ ಇಂಥ ಮಾತು ಆಡಿದ್ದಕ್ಕಾಗಿ ನಾನು ಲಜ್ಜಿತನಾಗಿದ್ದೇನೆ. ನಾನು ಯಾವಾಗಲೂ ಸುನಂದಾಳನ್ನು ನನ್ನ ತಂಗಿಯೆಂದೇ ಭಾವಿಸುವೆ.

**ದಮಯಂತಿ:** ತಾವು ನನ್ನ ಪ್ರಿಯ ನಳರಾದಾಗ ತಮ್ಮ ಭಾವ, ವಿಚಾರ, ಸಂಕಲ್ಪ ಎಲ್ಲವೂ ಶುದ್ಧವಾಗಿರುತ್ತವೆ. ತಮ್ಮಲ್ಲಿ ಪರಂಪರಾಗತ ಪುರುಷ ಆತ್ಮ ಜಾಗ್ರತವಾದಾಗ ನಾನು ತಮಗೆ ದಮಯಂತಿಯಲ್ಲ, ಕೇವಲ ಓರ್ವ ಹೆಣ್ಣಾಗಿ ತೋರುತ್ತೇನೆ ಹಾಗೂ ಅವಳ ಜೀವನ ಕರ್ಮ ಕೇವಲ ಪುರುಷನ ವಿಷಯ ವಾಸನೆ ತೃಪ್ತಿಗೊಳಿಸುವುದಾಗಿದೆ.

**ನಳ:** ದಮಯಂತಿ, ನನ್ನನ್ನು ಇನ್ನೂ ಲಜ್ಜಿತನಾಗುವಂತೆ ಮಾಡಬೇಡ. ನಾನು ಶುದ್ಧ ಹೃದಯದಿಂದ ಕ್ಷಮ ಯಾಚಿಸುತ್ತಿರುವೆ.

**ದಮಯಂತಿ:** ನನ್ನ ಕ್ಷಮೆ, ಅದು ಯಾವಾಗಲೂ ತಮ್ಮ ಸಂಪತ್ತು, ಸ್ವಾಮಿ. ನನ್ನ ಕ್ರೋಧವೂ ಪ್ರೀತಿಯಿಂದ ಬೇರೆಯಾದುದಲ್ಲ. ನನ್ನಿಂದ ಕ್ಷಮೆ ಸಂಪಾದಿಸುವುದು, ತಮಗೆ ಕಷ್ಟದ ಕೆಲಸವಲ್ಲ.

**ನಳ:** (ಈ ರಹಸ್ಯ ಮಾತಿನ ಅರಿವು ಅವನಿಗಿರದೆ, ದಮಯಂತಿಯನ್ನು ತನ್ನ ತೆಕ್ಕೆಯಲ್ಲಿ ತುಂಬಿಕೊಳ್ಳುತ್ತಾನೆ) ಹಾಂ! ನಿನ್ನನ್ನು ಸಿಟ್ಟಿಗೆಬ್ಬಿಸಿ, ಕ್ಷಮೆ

ಕೇಳುವುದು ಕೂಡ ಪ್ರೇಮ ಯಾಚಿಸಿದ ಹಾಗೆಯೇ. ನಿನ್ನ ಕ್ರೋಧವೂ ಪ್ರೇಮದ ಸ್ರೋತವಾಗಿದೆ.

**ದಮಯಂತಿ:** (ನಳನ ಮೊಣಕಾಲಿಗೆ ಹತ್ತಿ)

ಪ್ರಿಯತಮ, ಇದೋ ಸಕಲವನರ್ಪಿಸಿಹೆ
ನಿನ್ನ ಚರಣ ಸಂಗದಲಿ ಇರಿಸು ಎನ್ನನು!
ಕಲ್ಲಂಗಡಿ ಹಣ್ಣಿನ ಹೋಳಿನೊಲು
ಸ್ವಲ್ಪ-ಸ್ವಲ್ಪ ರುಚಿ ಅನುಭವಿಸು!

**ನಳ:** ನನಗಂತೂ ನಿನ್ನ ಒಂದೇ ರೀತಿಯಾದ ಸಿಹಿಯೇ ಸಾಕು. ನನಗೆ, ನಿನ್ನ ಬೇರೆ ಬೇರೆ ಹೋಳು ಮಾಡುವ ಅವಶ್ಯಕತೆ ಎನ್ನಿಸುವುದಿಲ್ಲ. ನಾನಂತೂ ಸಂಪೂರ್ಣ, ನಿನ್ನನ್ನೇ ನನ್ನ ಹೃದಯದಲ್ಲಿ, ಸಮಾವೇಶಗೊಳಿಸಿಕೊಳ್ಳಬೇಕೆಂದು ಬಯಸಿದ್ದೇನೆ.

**ದಮಯಂತಿ:** (ನಕ್ಕು) ಓ! ಮಾನವ-ಭಕ್ಷಿ ಸಿಂಹ, ಸಂಪೂರ್ಣವಾಗಿ ಒಂದೇ ಸಲಕ್ಕೆ ತಿನ್ನ ಬಯಸುವೆಯಾ?

**ನಳ:** ಹಾಂ! ಒಂದೇ ಸಲಕ್ಕೆ ಮತ್ತು ಮತ್ತೆ ಮತ್ತೆ!

**ದಮಯಂತಿ:** ಮಳೆ ತುಂಬ ಭಯಂಕರವಾಗುತ್ತಲಿದೆ. ಒಂದೇ ಸಮನೆ ನಾಲ್ಕು ರಾತ್ರಿಗಳಿಂದ ಮಳೆ ಆಗುತ್ತಲೇ ಇದೆ.

**ನಳ:** ಜಲದೇವನೂ, ನನ್ನ ಈ ಪಟ್ಟಣವನ್ನು ಸಂಪೂರ್ಣವಾಗಿ ಒಂದೇ ಸಲಕ್ಕೆ ಭಕ್ಷಿಸಬೇಕೆಂದುಕೊಂಡಿದ್ದಾನೆ.

**ದಮಯಂತಿ:** ಮೊದಲು, ಭಾದ್ರಪದದ ಮಧ್ಯದವರೆಗೂ ಒಂದು ಹನಿ ಕೂಡ ಬೀಳಲಿಲ್ಲ. ಇಡೀ ಹೊಲಗಳೆಲ್ಲ ಹಾಳಾಗಿ ಹೋದವು. ರಾಜ್ಯದಲ್ಲಿ ಬರಗಾಲ ತಾಂಡವವಾಡಿತು. ವನವೆಲ್ಲ ಸುಟ್ಟು ಬೂದಿಯಾಯಿತು. ಈಗ ಮಳೆಯೇ ಮಳೆ. ಮಳೆ ನಿಲ್ಲುವ ಯಾವ ಸೂಚನೆಯೂ ಕಾಣಿಸುತ್ತಿಲ್ಲ.

**ನಳ:** ಪವನ ಮತ್ತು ಅಗ್ನಿದೇವತೆಗಳಿಂದ ನಾನು ಆಟದಲ್ಲಿ ಸೋತಿದ್ದೆ ಮತ್ತು ನನ್ನ ಭೂಮಿ ಹಾಗೂ ವನಸ್ಪತಿ ಅವರ ಹತ್ತಿರ ಅಡವು ಇದ್ದವು, ಜಲ ದೇವನಿಂದ ನಾನೇನು ಸೋತಿರಲಿಲ್ಲ. ಈಗ ಆತ ಯಾವ ಆಧಾರದ ಮೇಲೆ, ನನಗೆ ಹಾನಿಯನ್ನುಂಟು ಮಾಡಲು ತೊಡಗಿದ್ದಾನೋ, ಕಾಣೆ.

**ದಮಯಂತಿ:** ನಾನು ಬಂದು ಆಟವನ್ನು ಕೊನೆಗೊಳಿಸದೆ ಹೋಗಿದ್ದರೆ, ತಾನೂ ಗೆಲ್ಲುತ್ತಿದ್ದನೆಂದು ಭಾವಿಸಿರಬಹುದು.

**ನಳ:** ನೀನು ಈಗಲೂ ನನ್ನೊಂದಿಗಿರುವೆಯೆಂಬುದು ಅವನಿಗೆ ಗೊತ್ತಿಲ್ಲೇನು?

**ದಮಯಂತಿ:** ಗೊತ್ತಿದೆ, ಆದರೆ ಅವನು ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ನೋಡಿಯೇ ಹಿಂದೆ ಸರಿಯುತ್ತಾನೆ.

**ನಳ:** ಪುಷ್ಕರ ಅವನೊಂದಿಗೆ ಸೇರಿರುವ ವಿಷಯ, ನನಗೆ ಹೆಚ್ಚು ಭಯುವನ್ನುಂಟು ಮಾಡಿದೆ.

**ದಮಯಂತಿ:** ಅದು ಸ್ವಾಭಾವಿಕವಾಗಿದೆ. ದೇವತೆಗಳೊಂದಿಗಿನ ವೈರತ್ವದಲ್ಲಿ ಏಕಾಕಿ ಮನುಷ್ಯ ತುಂಬ ನಿರ್ಬಲನಾಗಿದ್ದಾನೆ. ಇಂಥ ಸಮಯದಲ್ಲಿ ಪುರುಷ ಮತ್ತು ಸ್ತ್ರೀಯರಲ್ಲಿಯು ಪ್ರೇಮ ಮತ್ತು ಸಹಯೋಗ ಬಹು ಬಲದಾಯಕವಾಗಿರುತ್ತದೆ. ಅದೂ ಅಲ್ಲದೆ ಅಣ್ಣ-ತಮ್ಮ, ನೆರೆ-ಹೊರೆ, ಮತ್ತು ಮನುಷ್ಯ-ಮನುಷ್ಯರ ಸಹಯೋಗ ಕೂಡ ತುಂಬ ಆವಶ್ಯಕವಾಗಿರುತ್ತದೆ.

**ನಳ:** 'ಮನೆಯ ಒಡಕು ರಾವಣನ ವಿನಾಶ ಮಾಡಿತು' ಎಂಬ ಮಾತನ್ನು ಹಾಗೇ ಹೇಳಿಲ್ಲ. ಪುಷ್ಕರ ವಿರುದ್ಧನಾದುದರಿಂದ ನಮ್ಮ ಮನೆಯೂ ಇಬ್ಭಾಗವಾಗಿದೆ.

**ದಮಯಂತಿ:** ಆದರೆ ಪುಷ್ಕರ ನಮ್ಮ ವಿರುದ್ಧವೇಕಾದ? ನಾವು ಆತನಿಗೆ ಯಾವ ಆತಂಕವನ್ನೂ ಉಂಟು ಮಾಡಿಲ್ಲ, ತೊಂದರೆಯನ್ನೂ ಕೊಟ್ಟಿಲ್ಲ.

**ನಳ:** ನಾನು ರಾಜನಾಗಿರುವೆ, ಇದು ಕಡಿಮೆ ತೊಂದರೆ ಏನು? ಮತ್ತು....

**ದಮಯಂತಿ:** ಮತ್ತು..... ?

**ನಳ:** ಮತ್ತು, ನೀನು ರೂಪವತಿಯಾಗಿರುವೆ. ರಾಜ್ಯ ಹಾಗೂ ಸೌಂದರ್ಯ ಯಾವಾಗಲೂ ಮನುಷ್ಯ-ಮನುಷ್ಯರಲ್ಲಿ ಒಡಕು ಹುಟ್ಟಿಸುತ್ತ ಬಂದಿವೆ ಹಾಗೂ ಹುಟ್ಟಿಸುತ್ತವೆ.

**ದಮಯಂತಿ:** ಒಡಕು ಏಕೆ ಹುಟ್ಟಿಸುತ್ತವೆ? ನನಗಂತೂ ಈ ಮಾತು ಅರ್ಥವೇ ಆಗುತ್ತಿಲ್ಲ.

**ನಳ:** ಏಕೆಂದರೆ, ಎಲ್ಲ ಮನುಷ್ಯರು ಇದನ್ನು ಕೂಡಿ ಮಾಡಲಾರರು.

**ದಮಯಂತಿ:** ರಾಜ್ಯದ ಬಗೆಗೆ ನಾನು ಹೇಳಲಾರೆ, ರಾಜಾ ಹಾಗೂ ಅವನ ದ್ವೇಷಿ ಅಥವಾ ವಿರೋಧಿಗಳಿಗೆ ಇರುವಂಥ ಅನುಭವ ನನಗಿಲ್ಲ. ಸೌಂದರ್ಯ ಮಾತ್ರ ಆಯಾ ಸ್ತ್ರೀ ಪುರುಷರ ಭಾಗ್ಯ ವಿಶೇಷದಿಂದ ಪ್ರಾಪ್ತಿಯಾಗುತ್ತದೆ.

**ನಳ:** ಈ ಭಾಗ್ಯ ಸ್ವಲ್ಪ ಅಥವಾ ಬಹಳ-ಹೀಗೆ ವ್ಯತ್ಯಾಸವಿರುತ್ತದೆ.

**ದಮಯಂತಿ:** ಆದರೆ ರಾಜ್ಯ, ಅಧಿಕಾರದ ಹಾಗಲ್ಲ. ಬಡವರ ಮನೆಯ ಹೆಣ್ಣುಮಗಳು ಕೂಡ ರೂಪವತಿಯಾಗಿರಲು ಸಾಧ್ಯವಿದೆ. ಅದರಂತೆಯೇ ಶ್ರೀಮಂತ ಮನೆತನದ ಹೆಣ್ಣುಮಗಳು ಕುರೂಪಿಯಾಗಿರಲೂ ಸಾಧ್ಯವಿದೆ.

**ನಳ:** ಇದಕ್ಕಾಗಿಯೇ ಶ್ರೀಮಂತರಲ್ಲಿ ರೂಪ ಮತ್ತು ಕುರೂಪತೆಯ ಸಲುವಾಗಿ ಜಗಳವಾಗುವ ಸಂಭವವಿದೆ.

**ದಮಯಂತಿ:** ಆದರೆ ಪುಷ್ಕರನಿಗೆ ರೂಪಹೀನತೆಯ ರೋಷ ಇರಬಾರದಾಗಿತ್ತು. ಅವನು ಕೂಡ ಯಾವಳಾದರೂ ರೂಪವತಿಯೊಂದಿಗೇನೇ ವಿವಾಹ ಮಾಡಿಕೊಳ್ಳಬಹುದು.

**ನಳ:** ಆದರೆ ನಿನ್ನಂಥ ರೂಪವತಿ ಈ ಲೋಕದಲ್ಲಿಯೇ ಇನ್ನೊಬ್ಬರಿಲ್ಲವೆಂದು ಅವನು ತಿಳಿದಿದ್ದಾನೆ.

**ದಮಯಂತಿ:** ಇದಂತೂ ಬಹು ದೊಡ್ಡ ಭ್ರಮೆ.

**ನಳ:** ಈ ಭ್ರಮೆ ಕೂಡ, ಮನುಷ್ಯನ ಕರ್ಮವಾಗಿದೆ.

**ದಮಯಂತಿ:** ಈ ಪ್ರಶ್ನೆಗಳಿಗೆ ಉತ್ತರ ಈ ವರೆಗೂ ನನಗೆ ಸಿಕ್ಕಿಲ್ಲ, ಇದರ ಬಗ್ಗೆ ಚರ್ಚಿಸುವುದು ವ್ಯರ್ಥವಾಗಿದೆ.

**ನಳ:** ಪುಷ್ಕರ ಶತ್ರುಗಳ ಜೊತೆ ಸೇರಿರುವುದರಿಂದ ಉಂಟಾಗುವ ಪರಿಣಾಮಗಳ ಬಗ್ಗೆ ವ್ಯರ್ಥವೆಂದು ಹೇಳಿ ಬಿಟ್ಟು ಬಿಡಲಾಗುವುದಿಲ್ಲ.

**ದಮಯಂತಿ:** ಆ ಪರಿಣಾಮಗಳನ್ನು ಎದುರಿಸಬೇಕು.

**ನಳ:** ಇದರ ಸಂಬಂಧವಾಗಿಯೇ ವಿಚಾರ ಮಾಡಲೆಂದು ನಿನ್ನನ್ನು ಕೇಳಲಾಯಿತು. (ಬಾಗಿಲ ಮೇಲೆ ಜೋರಾಗಿ ಖಟ್-ಖಟ್ ಸಪ್ಪಳವಾಗುತ್ತದೆ.)

**ದಮಯಂತಿ:** ಈ ರೀತಿಯಾಗಿ ದ್ವಾರಪಾಲಕ ಬಾಗಿಲ ಏಕೆ ಬಡಿಯುತ್ತಿದ್ದಾನೆ?

**ನಳ:** ಯಾವುದಾದರೂ ಕೆಟ್ಟ ಸುದ್ದಿ ಇರಬೇಕು. (ಜೋರಾಗಿ) ಹಾಂ, ಬರಲಿ, ದ್ವಾರಪಾಲಕ (ದಮಯಂತಿಗೆ) ಯಾವನಾದರೂ ರಕ್ಷಕ ಬಂದಿರಬೇಕು, ಏನಾದರೂ ಸೂಚನೆ ತಂದಿರಬೇಕು.

**ರಕ್ಷಕ:** (ಹತ್ತಿರ ಬಂದು) ಮಹಾರಾಜ, ಬಹಳ ಕೆಟ್ಟ ಸುದ್ದಿ. ನಗರದ ಹೆಚ್ಚಿನ ಭಾಗವೆಲ್ಲ ನೀರಲ್ಲಿ ಕೊಚ್ಚಿ ಹೋಗಿದೆ. ಕೋಟೆ ಹಾಗೂ ಕುಟೀರಗಳು ಮಳೆಗೆ ಆಹುತಿಯಾಗಿವೆ. ಹೊರಗಿನಿಂದ ನೀರು ನಗರದಲ್ಲಿ ನುಗ್ಗುತ್ತಲೇ ಇದೆ. ಬಹಳಷ್ಟು ಜನ, ಮುಳುಗಿ ಹೋದ ಮನೆಗಳ ಮಣ್ಣಿನ ಕೆಳಗೆ ಹೂತು ಹೋಗದ ಜನ, ಸಣ್ಣ-ಪುಟ್ಟ ಪಾತ್ರೆ-ಪಗಡುಗಳನ್ನು ತೆಗೆದುಕೊಂಡು ಮುಳುಗಿ ಹೋದ ಅಥವಾ ಮುಳುಗುತ್ತಿರುವ, ಕರಗುತ್ತಿರುವ ಮನೆಗಳಿಂದ ಹೊರ ಹೊರಟು ಪೇಟೆಯಲ್ಲಿ ಬರುತ್ತಿದ್ದಾರೆ ಮತ್ತು ಅರಮನೆಯ ಮುಂದೆಯೂ ಬಹು ದೊಡ್ಡ ಜನಸಮೂಹ ಒಂದುಗೂಡುತ್ತಲಿದೆ. (ರಾಜಾ ನಳ ತುಂಬ ಚಿಂತಿತನಾಗಿ ಸುಮ್ಮನಿದ್ದಾನೆ.)

**ದಮಯಂತಿ:** ಅವರು ರಾಜಭವನದ ಮುಂದೆ ಕೂಡಿ ಏನು ಮಾಡುತ್ತಾರೆ? ಸೇನೆ ಹಾಗೂ ರಕ್ಷಕ ದಳಗಳೊಂದಿಗೆ ಸೇರಿ, ನಗರವನ್ನು ಉಳಿಸುವಲ್ಲಿ ಸಹಾಯ ಏಕೆ ಮಾಡುತ್ತಿಲ್ಲ?

**ರಕ್ಷಕ:** ಬಹಳಷ್ಟು ಜನ ಹಾಗೆ ಮಾಡುತ್ತಿದ್ದಾರೆ, ಮಹಾರಾಜ! ಆದರೆ ಎಲ್ಲರಲ್ಲೂ ಇಂಥ ಸಾಹಸ, ಕ್ರಿಯಾಶೀಲತೆ ಹಾಗೂ ಸಹನಶೀಲತೆ ಇರುವುದಿಲ್ಲ.

**ದಮಯಂತಿ:** ಆದರೆ ಪರಿಶ್ರಮ[illegible]ದೆ ಈ ಸಮಯದಲ್ಲಿ ಬೇರೆ ಏನೂ ಉಪಯೋಗವಾಗಲಾರದು.

**ರಕ್ಷಕ:** ಈ ಸಮಯದಲ್ಲಿ ಪರಿಶ್ರಮ, ಸಾಹಸ ಕೂಡ ಏನೂ

ಉಪಯೋಗವಿಲ್ಲವೆಂದು ಅದೆಷ್ಟೋ ಜನ ಭಾವಿಸಿದ್ದಾರೆ.

**ದಮಯಂತಿ:** ಇಂಥ ಜನ ಇನ್ನೇನು ಮಾಡಬಲ್ಲರು? (ರಕ್ಷಕ ಸುಮ್ಮನಿರುತ್ತಾನೆ.)

**ನಳ:** ಏನು ಮಾಡಬಲ್ಲರು? ಅವರು ರಾಜ್ಯದ ವಿರುದ್ಧ ಘೋಷಣೆ ಮಾಡುತ್ತಾರೆ. ಈ ಕಷ್ಟದಿಂದ ಉಳಿಸುವುದು ರಾಜನ ಕರ್ತವ್ಯವಾಗಿದೆ ಎಂದು ಅವರು ಅನ್ನುತ್ತಿರಬಹುದು.

**ರಕ್ಷಕ:** ಹಾಂ, ಮಹಾರಾಜ. ಅವರಲ್ಲಿ ಬಹಳಷ್ಟು ಜನ ಹೀಗೆ ಕೂಗುತ್ತಿದ್ದಾರೆ.

**ದಮಯಂತಿ:** ಇದಂತೂ ಬಹಳ ಕೆಟ್ಟದ್ದು.

**ನಳ:** ಮಳೆಯಲ್ಲಿ ತೇಲಿ ಹೋಗುವ ಮನೆಗಳ ಕೆಳಗೆ ಸಿಕ್ಕು ಸಾಯುವುದಕ್ಕಿಂತ ಅಥವಾ ಉಪವಾಸ ವನವಾಸದಿಂದಾಗಿ ಜೀವ ಸಣ್ಣಾಗುವುದಕ್ಕಿಂತ ಕೆಟ್ಟದ್ದೇನಲ್ಲ, ಇದು.

**ದಮಯಂತಿ:** ಏನು, ಹಾಗಾದರೆ, ಜನರ ಈ ಸಂಕಷ್ಟಗಳಿಗೆ ನಿಜವಾಗಿಯೂ ನಾವು ಹೊಣೆಗಾರರೇನು?

**ನಳ:** ನಿಃಸಂದೇಹವಾಗಿಯೂ, ಪ್ರಿಯೆ! ಆದರೆ ನಮ್ಮ ಹತ್ತಿರ ಇದಕ್ಕೆ ಯಾವ ಉತ್ತರವೂ ಇಲ್ಲ.

**ದಮಯಂತಿ:** ಉತ್ತರವಿರಬೇಕಾಗಿತ್ತು.

**ನಳ:** ಇದನ್ನೇ ಆ ಜನ ಹೇಳುತ್ತಿರುವುದು. ಅಂತರವಿಷ್ಟೇ, ಅವರು ಕ್ರೋಧದಿಂದ ಅನ್ನುತ್ತಿದ್ದಾರೆ, ನೀನು ಶಾಂತಿ, ಸಮಾಧಾನದಿಂದ ಹೇಳುತ್ತಿರುವೆ.

**ದಮಯಂತಿ:** ಹಾಗಾದರೆ?

**ನಳ:** ದೇವತೆ, ರಾಜನೊಂದಿಗೆ ಅಸಂತುಷ್ಟನಾಗಿ ಅಥವಾ ಇನ್ನಾವುದೇ ಬೇರೆ ಧುರೀಣನ ಕಾರ್ಯದಿಂದ ಅಸಂತುಷ್ಟನಾಗಿ ಕ್ರೋಧಿತನಾಗುತ್ತಾನೆ. ಆದರೆ ಕಷ್ಟವನ್ನು ಭೋಗಿಸಬೇಕಾದವರು ಪ್ರಜೆಗಳೇ.

**ದಮಯಂತಿ:** ಪ್ರಜೆಗಳು ಸ್ವತಃ ದೇವತೆಯನ್ನು ಅಸಂತುಷ್ಟಗೊಳಿಸಬಹುದಾಗಿದೆ.

**ನಳ:** ಸಾಧ್ಯವಿದೆ, ಆದರೆ ಬಹಳ ಕಡಿಮೆ. ಪ್ರಜೆ ನಿರಪರಾಧಿಯಾಗಿರುತ್ತಾನೆ. ಬಹಳ ಸಲ ಅಪರಾಧ ರಾಜನ ಅಥವಾ ಮುಂದಾಳುವಿನದಾಗಿರುತ್ತದೆ. (ದಮಯಂತಿ ಸುಮ್ಮನಾಗುತ್ತಾಳೆ.)

**ರಕ್ಷಕ:** ರಕ್ಷಕರಿಗೆ, ಏನು ಆಜ್ಞೆ, ಮಹಾರಾಜ. ಅಧ್ಯಕ್ಷರು ನಿವೇದನೆ ಮಾಡಿಕೊಳ್ಳಲು ಹೇಳಿದ್ದಾರೆ.

**ನಳ:** ನಾವು ಸ್ವತಃ ಪ್ರಜೆಗಳ ಸಮ್ಮುಖದಲ್ಲಿ ಬರಲಿದ್ದೇವೆ.

**ರಕ್ಷಕ:** ಹಾಗಾದರೆ ನಾನು ಅಧ್ಯಕ್ಷನನ್ನು ಕಳಿಸುತ್ತೇನೆ, ಮಹಾರಾಜ. ಅವರ ವಿನಂತಿ ಇದೂ ಆಗಿತ್ತು.

**ದಮಯಂತಿ:** ಹಾಂ, ಅಧ್ಯಕ್ಷನನ್ನು ಕಳಿಸು, ಮಂತ್ರಿಗಳನ್ನೂ ಬರಹೇಳು.

**ರಕ್ಷಕ:** ಮಂತ್ರಿಗಳು ತಮ್ಮ ತಮ್ಮ ಭವನದಲ್ಲಿ ಬಂದಿಯಾಗಿದ್ದಾರೆ, ಮಹಾರಾಜ ಈ ಮಳೆ ಯಾರನ್ನೂ ಹೊರಗೆ ಬಿಡುತ್ತಿಲ್ಲ.

**ದಮಯಂತಿ:** ಆಶ್ಚರ್ಯವೆನ್ನುವ ರೀತಿಯಲ್ಲಿ ಮಳೆ ಬೀಳುತ್ತಲಿದೆ. ದೀನರನ್ನು

ಮನೆಗಳಿಂದ ಹೊರಗೆ ಹಾಕುತ್ತಲಿದೆ; ಮತ್ತು ಶ್ರೀಮಂತರನ್ನು ಮನೆಗಳಿಂದ ಹೊರಗೆ ಬರಗೊಡುತ್ತಿಲ್ಲ.

**ರಕ್ಷಕ:** ಕೆಲಮಟ್ಟಿಗೆ ಹೀಗೆಯೇ ಇದೆ, ಮಹಾರಾಜ!

**ನಳ:** ಸರಿ, ಹೋಗು, ಅಧ್ಯಕ್ಷರನ್ನು ಕಳಿಸು.

(ರಕ್ಷಕ ಹೊರಟು ಹೋಗುತ್ತಾನೆ, ರಾಜಭವನ ಬೀಳುವ ಸಪ್ಪಳ ಕೇಳಿ ಬರುತ್ತದೆ.)

**ದಮಯಂತಿ:** (ಎದ್ದು, ನಳನನ್ನಪ್ಪಿಕೊಂಡು) ಮಹಾರಾಜ, ಇನ್ನು ಬೇರೆ ಉಪಾಯವಿಲ್ಲ. ಭವನದಿಂದ ಹೊರಗೆ ಹೋಗೋಣ. ಇದು ಕೂಡ ಯಾವಾಗ ಬೀಳಬಹುದೆಂಬುದು ಗೊತ್ತಿಲ್ಲ.

**ನಳ:** ಹಾಂ, ಅಧ್ಯಕ್ಷನಾಗಲಿ ಅಥವಾ ಇನ್ನಾರೇ ಆಗಲಿ, ನಮ್ಮ ಹತ್ತಿರ ಬರುವುದು, ಈ ಸ್ಥಿತಿಯಲ್ಲಿ ಸಾಧ್ಯವಿಲ್ಲ.

(ರಾಜಭವನ ಬೀಳುವ ಇನ್ನಿಷ್ಟು ಸಪ್ಪಳ ಕೇಳಿಬರುತ್ತದೆ. ಗುಡುಗು ಮಿಂಚಿನ ಸಪ್ಪಳವಾಗುತ್ತದೆ.)

**ದಮಯಂತಿ:** ನೆಲಮಾಳಿಗೆಯ ದಾರಿಗಳೆಲ್ಲ ಈಗ ಮುಚ್ಚಿಹೋಗಿರಬೇಕು.

(ಸಿಡಿಲಿನ ನಿರಂತರ ಸಪ್ಪಳ)

**ನಳ:** (ಎದ್ದು) ಏಳು ಪ್ರಿಯೆ. ಭವನದಿಂದ ಹೊರಗೆ ಹೋಗೋಣ. ಹೊರಗೆ ಅಂಗಳದಲ್ಲಿ, ಆಕಾಶದ ಕೆಳಗೆ ನಿಲ್ಲುವುದರಿಂದಲಾದರೂ ನಾವು ಉಳಿಯಬಹುದೇನೋ!

**ದಮಯಂತಿ:** (ಏಳುತ್ತ) ಹಾಂ, ಕೊನೆಯ ವೇಳೆಯಲ್ಲಿ ಮನುಷ್ಯನಿಗೆ, ಏಕಾಕಿಯಾಗಿ ಬರಲಿರುವ ತೊಂದರೆಗಳನ್ನು ಎದುರಿಸಬೇಕಾಗುತ್ತದೆ.

**ನಳ:** ಮನುಷ್ಯ ಏಕಾಕಿಯಾಗಿ ಅಲ್ಲ, ಸ್ತ್ರೀ-ಪುರುಷ ಕೂಡಿ ಎದುರಿಸಬೇಕಾಗುತ್ತದೆ.

(ಸಿಡಿಲಿನ ಖಡ್‌ಖಡಲ್ ಸಪ್ಪಳ. ಇಬ್ಬರೂ ಭವನದಿಂದ ಹೊರ ಹೊರಡುತ್ತಾರೆ.)

**ದಮಯಂತಿ:** ಸ್ತ್ರೀ-ಪುರುಷ ಕೂಡಿಯೇ ತಾನೇ ಮನುಷ್ಯನಾಗುವುದು.

(ನಳ ಮತ್ತು ದಮಯಂತಿ ಹೊರಗೆ ಬಂದಕೂಡಲೇ ರಾಜಭವನ ಬೀಳಲು ಆರಂಭಿಸುತ್ತದೆ. ಕೆಲ ಸಮಯದಲ್ಲಿಯೇ ಅಲ್ಲಿ, ಒಂದು ಭವನವಿತ್ತೆಂಬುದರ ಗುರುತೂ ಕೂಡ ಉಳಿಯದಂತಾಗುತ್ತದೆ. ಕೇವಲ ಮಣ್ಣಿನ ರಾಶಿ ಗೋಚರಿಸುತ್ತದೆ. ಸುತ್ತಲೂ ಕತ್ತಲು ಆವರಿಸುತ್ತದೆ, ಬಿರುಗಾಳಿ ಜೋರಾಗಿ ಬೀಸತೊಡಗುತ್ತದೆ. ಮಳೆಯೊಂದಿಗೆ ದೊಡ್ಡ ದೊಡ್ಡ ಆಣೆಕಲ್ಲಿನ ಸುರಿಮಳೆಯಾಗುತ್ತದೆ. ಸಿಡಿಲಿನ ಖಡ್‌ಖಡಲ್ ಸಪ್ಪಳದೊಂದಿಗೆ, ಗುಡುಗು ಗರ್ಜಿಸುತ್ತದೆ.)

# ಅಂಕ: ಏಳು

(ಪ್ರಾತಃಕಾಲ, ಅದೇ ರಾಜಭವನದ ಸ್ಥಾನ. ಬಿರುಗಾಳಿ, ಮಹಾಪೂರ ನಿಂತಿದೆ. ರಾಜಭವನ ಮುರಿದು ಬಿದ್ದ ಒಂದು ಮಣ್ಣಿನ ಗುಡ್ಡೆಯಾಗಿದೆ. ಕೇವಲ ಅವಶೇಷವೇ ಅವಶೇಷ, ನೀರು ಮತ್ತು ಸುಟ್ಟ ಮರಗಳು ಹಾಗೂ ಮುರಿದು ಬಿದ್ದಿರುವ ಚಪ್ಪರಗಳು, ಸೂರುಗಳು. ನಗರದಲ್ಲಿ ವಾಸ ಹಾಳಾದ ಮನೆಯವರೇಯಾಗಲಿ, ಯಾರೂ ಇಲ್ಲ. ಕೇವಲ ಓರ್ವ ಪುರುಷ, ಓರ್ವ ಸ್ತ್ರೀ ಹಾಗೂ ಕೆಲ ತಿಂಗಳ ಕೂಸು-ಮಾತ್ರ ಕಾಣಿಸುತ್ತಿದ್ದಾರೆ. ಈತ ರಾಜಾ ನಳ, ಆಕೆ ರಾಣಿ ದಮಯಂತಿ ಹಾಗೂ ಅವರ ಪುತ್ರ. ಇವರ ಮೈಮೇಲೂ ಬಹಳ ಕಡಿಮೆ ವಸ್ತ್ರಗಳಿವೆ.)

**ನಳ:** ಜಲ, ಅಗ್ನಿ, ಪವನ ಮೂವರೂ ದೇವತೆಗಳು ಕೂಡಿ, ನನ್ನ ನಗರದಲ್ಲಿ ಏನೆಲ್ಲ ಉಪದ್ರವ ಮಾಡಿದರು.

**ದಮಯಂತಿ:** ಈ ಮೊದಲು ಪ್ರವಾಸಿಕರ ಕಣ್ಮನಗಳನ್ನು ಸೆಳೆಯುತ್ತಿದ್ದ ಅರಮನೆ, ದೇವಾಲಯುಗಳು, ಸುಂದರವಾದ ಸೌಧಗಳು ಈಗ ಕೇವಲ ಇಟ್ಟಿಗೆ, ಕಲ್ಲು, ಮಣ್ಣುಗಳ ಗುಂಪುಗಳಾಗಿವೆ.

**ನಳ:** ಓಣಿಗಳು, ಪೇಟೆಗಳು, ದಾರಿಗಳು ಈ ಮೊದಲು ಅಲ್ಲಿ ಇಟ್ಟಿಗೆ ಹಾಗೂ ಕಲ್ಲು ಕುಟ್ಟಿ ಕುಟ್ಟಿ ಹಾಕಿ ಕನ್ನಡಿಯು ಹಾಗೆ ಸ್ವಚ್ಛ ಮತ್ತು ಸಮತಲ ಮಾಡಲಾಗಿತ್ತು, ಈಗ ಅದು ಕಾಣಿಸುತ್ತಿಲ್ಲ ಕೂಡ.

**ದಮಯಂತಿ:** ಸ್ವಚ್ಛ ನೀರಿನ ಕಾಲುವೆ ಹಾಗೂ ಅಶುದ್ಧ ನೀರಿನ ಕಾಲುವೆಗಳೆಲ್ಲ ಕೂಡಿ ಒಂದಾಗಿ ಹೋಗಿವೆ. ರಾಶಿ ರಾಶಿಯಾಗಿ ಬಿದ್ದಿರುವ ಕಲ್ಲು ಮಣ್ಣು ಇಟ್ಟಿಗೆಗಳಿಂದಾಗಿ ಅವುಗಳ ಪ್ರವಾಹ ಕೂಡ ಕಟ್ಟಾಗಿ ಹೋಗಿದೆ. ಎಲ್ಲ ಕಡೆ ದುರ್ಗಂಧ ಹರಡುತ್ತಲಿದೆ.

**ನಳ:** ದೇವತೆಗಳು ಮಂದಿರ ಮತ್ತು ಕಲಾಭವನ ಹಾಗೂ ಲೋಕ-ಸದನ ಎಲ್ಲವನ್ನೂ ನೆಲಸಮಗೊಳಿಸಿದ್ದಾರೆ.

**ದಮಯಂತಿ:** ಸಾಮಾನ್ಯ ಪ್ರಜೆಗಳ ಮನೆ-ಮಾರು ಹಾಳಾದುದರ ಬಗ್ಗೆ ನನಗೆ ಅಪಾರ ದುಃಖವಾಗಿದೆ. ಬರಲಿರುವ ತೊಂದರೆಯ ಹೆದರಿಕೆಯಿಂದ ಅವರೆಲ್ಲರೂ ನಗರವನ್ನು ತ್ಯಜಿಸಿದ್ದಾರೆ, ಪಾಪ.

**ನಳ:** ಅದೆಲ್ಲ ಇರಲಿ, ಚಾಂಡಾಲರ, ಅಸ್ಪೃಶ್ಯರ ಗುಡಿಸಲುಗಳು ಕೂಡ ದೇವತೆಗಳ ಕ್ರೋಧದಿಂದ ಪಾರಾಗಲಿಲ್ಲ.

**ದಮಯಂತಿ:** ಊರಲ್ಲಿಯಾದರೂ ಯಾವ ಕುಶಲ-ಮಂಗಲವಿದೆ. ಅಲ್ಲಿಯೂ ಜನ ಹಾಳಾಗಿ ಹೋಗಿರಬಹುದು.

**ನಳ:** ನಗರಗಳಿಗಿಂತಲೂ ಹಳ್ಳಿಗಳ ಸ್ಥಿತಿ ಇನ್ನೂ ಚಿಂತಾಜನಕವಾಗಿರಬಹುದು.

**ದಮಯಂತಿ:** ಪ್ರಾಣ ಹಾನಿಯೂ ಕೂಡ ಬಹಳವಾಗಿದೆ. ಈ ದುರ್ಗಂಧ ಬಹುಶಃ ಮಣ್ಣಿನಲ್ಲಿ ಹೂತ ಹೆಣಗಳದ್ದಾಗಿರಬಹುದು.

**ನಳ:** ಓ! ಮುಗ್ಧೆ, ಇನ್ನಾತರದ್ದು? ನಿನಗೆ ದುಃಖವಾದೀತೆಂದು ನಾನಾಗಲೇ ನಿನಗೆ ಹೇಳಲಿಲ್ಲ.

**ದಮಯಂತಿ:** ಬಿದ್ದಿರುವ ಮನೆಗಳ ಕೆಳಗೆ ಬಹಳ ಜನ ಸತ್ತಿದ್ದಾರೇನು, ಹಾಗಾದರೆ!

**ನಳ:** ಹಾಂ! ಬಹಳ, ಬಹಳ ಜನ.

**ದಮಯಂತಿ:** ಏನು, ಎಲ್ಲರೂ?

**ನಳ:** ಬಹುಶಃ ಎಲ್ಲರೂ ಸತ್ತಿರಬೇಕು. ಕೆಲವರು ಮಾತ್ರ ಪಾರಾಗಿ ಉಳಿದಿರಬೇಕು.

**ದಮಯಂತಿ:** (ಅಳುತ್ತ) ಹಾಗಾದರೆ ನಾವೇಕೆ ಉಳಿದಿದ್ದೇವೆ? ಈಗ ನಾವು, ಜನರಿಲ್ಲದೆ ಏನು ಮಾಡಬಲ್ಲೆವು?

**ನಳ:** ಇದುವೇ ನಮ್ಮ ಮೇಲೆ ದೇವತೆಗಳ ವಿಶೇಷ ಕೃಪೆಯಾಗಿದೆ. ಅವರ ಕ್ರೋಧದ ಬಲದ ಅನುಭವ ನಮಗಾಗಲೆಂದು ನಮ್ಮನ್ನು ಬದುಕಿಸಿದ್ದಾರೆ.

**ದಮಯಂತಿ:** (ಅಳುತ್ತ) ದೇವತೆಗಳು ನಮ್ಮ ಮೇಲೆ ಇಷ್ಟೇಕೆ ಕೋಪಿಸಿಕೊಂಡಿದ್ದಾರೆ? ನಾವೇನು ಅವರದನ್ನು ಹಾಳು ಮಾಡಿದ್ದೇವೆ?

**ನಳ:** (ಅವಳನ್ನು ತನ್ನ ತೆಕ್ಕೆಯಲ್ಲಿ ತಕ್ಕೊಂಡು) ಪ್ರಿಯೆ, ನಿನಗೆ ಗೊತ್ತಿಲ್ಲೇನು ದೇವತೆಗಳು ನಮ್ಮ ಮೇಲೆ ಏಕೆ ಕುಪಿತರಾಗಿದ್ದಾರೆಂಬುದು? ನೀನು ಅವರೆಲ್ಲರ ಪ್ರೇಮವನ್ನು ತಿರಸ್ಕರಿಸಿಬಿಟ್ಟಿದ್ದೆ.

**ದಮಯಂತಿ:** (ಅದೇ ರೀತಿಯಲ್ಲಿ) ಅವರು ಎಲ್ಲರೂ ನನ್ನನ್ನು ಪ್ರೇಮಿಸುತ್ತಿದ್ದರು, ಅವರೆಲ್ಲರೂ ನನ್ನನ್ನು ವಿವಾಹವಾಗಬೇಕೆಂದು ಬಯಸುತ್ತಿದ್ದರು, ನಾನು ಯಾರನ್ನು ವರಿಸಲಿ, ಯಾರನ್ನು ತಿರಸ್ಕರಿಸಲಿ?

**ನಳ:** ಅವರು ಹೇಳಿದ್ದರಲ್ಲ, ನೀನು ನಮ್ಮೊಳಗೆ ಯಾರನ್ನೇ ಆರಿಸಿಕೊಂಡರೂ ಬೇರೆಯವರಿಗೆ ಖೇದವೆನಿಸುವುದಿಲ್ಲ-ಎಂದು.

**ದಮಯಂತಿ:** (ಮುಗ್ಧತೆಯಿಂದ) ತಾವು ಈ ದೇವತೆಗಳ ಮಾತಿನಲ್ಲಿ ಭರವಸೆ ಇಡುತ್ತೀರಾ? ನಾನು ಯಾರೊಬ್ಬರನ್ನು ಮದುವೆಯಾಗಿದ್ದರೂ ಇನ್ನುಳಿದವರು ಕ್ರೋಧಿತರಾಗಿ ಇದೇ ರೀತಿ ಮಾಡುತ್ತಿದ್ದರು.

**ನಳ:** ಆದರೆ ಅವರು ನನ್ನ ಮೇಲೆ ಕ್ರೋಧಿತರಾಗುತ್ತಿದ್ದಿಲ್ಲ, ನನ್ನ ರಾಜ್ಯವನ್ನು ಹಾಳು ಮಾಡುತ್ತಿದ್ದಿಲ್ಲ.

**ದಮಯಂತಿ:** ಪ್ರಿಯತಮ, ನನ್ನ ಪ್ರೇಮ ಪಡೆದು ಹಾಗೂ ತಮ್ಮನ್ನು ನಾನು ನನ್ನ

ಪ್ರಿಯ ವರನೆಂದು ಆರಿಸಿಕೊಂಡದ್ದಕ್ಕಾಗಿ ತಮಗೆ ಪಶ್ಚಾತ್ತಾಪ ವಾಗಿದೆಯೇ ?

ನಳ: ಇಲ್ಲ, ಪ್ರಿಯೆ, ಎಳ್ಳಷ್ಟೂ ಇಲ್ಲ. ನಾನು, ಹೀಗೇ ನಿನ್ನ ಮನಸ್ಸನ್ನು ಪರೀಕ್ಷಿಸುತ್ತಿದ್ದೆ.

ದಮಯಂತಿ: ನಾನು, ನಿಮ್ಮನ್ನಲ್ಲದೆ ಇನ್ನಾರನ್ನು ಆರಿಸಲು ಸಾಧ್ಯವಿತ್ತು ? ದೇವತೆಗಳಲ್ಲ, ಒಂದು ವೇಳೆ ಸಾಕ್ಷಾತ್ ಪರಮಾತ್ಮನೇ ಕುಪಿತನಾಗುತ್ತಿದ್ದರೂ, ನನಗೆ ತಮ್ಮನ್ನೇ ಆರಿಸಬೇಕಾಗಿತ್ತು.

ನಳ: ದಮಯಂತಿ, ನೀನು ನನ್ನನ್ನೇಕೆ ಆರಿಸಿದೆ ? ನಾನು ನಿನಗೆ ದೇವತೆಗಳಿಗಿಂತಲೂ ಚೆನ್ನು ಎನಿಸಿದೆನೇನು ?

ದಮಯಂತಿ: ಹಾಂ, ಪ್ರಿಯ, ತಾವು ದೇವತೆಗಳಿಗಿಂತಲೂ ಹೆಚ್ಚು ನನಗೆ ಚೆನ್ನು ಎನ್ನಿಸಿದಿರಿ.

ನಳ: ಯಾವ ಗುಣಗಳಿಂದಾಗಿ, ಪ್ರಿಯೆ ?

ದಮಯಂತಿ: (ಯೋಚಿಸಿ) ತಾವು ಮನುಷ್ಯರೆಂಬುದು, ನಾನು ದೇವತೆಯನ್ನು ಆರಿಸಿಕೊಂಡು ಏನು ಮಾಡುತ್ತಿದ್ದೆ ? ನನ್ನ ಜೀವನ ಯಾವ ರೀತಿಯದಾಗುತ್ತಿತ್ತೋ ಏನೋ ? ನಾನು ಮನುಷ್ಯನ ಮಗಳು, ದೇವತೆಗಳೊಂದಿಗೆ ನನ್ನದು ಎಂಥ ಸಂಬಂಧ, ಪ್ರಿಯ ?
(ಪ್ರೇಮದ ಮೋದದಲ್ಲಿ ನಳನನ್ನು ಅಪ್ಪಿಕೊಳ್ಳುತ್ತಾಳೆ.)

ನಳ: ಪ್ರಿಯೆ, ನಿನ್ನ ಈ ಮಾತುಗಳನ್ನು ಕೇಳಿ, ನಾನು ದೇವತೆಗಳಿಗಿಂತ ಬಲಿಷ್ಠನಾಗಿದ್ದೇನೆ ಎಂಬ ಅನುಭವವಾಗುತ್ತಲಿದೆ ನನಗೆ. ನನಗೆ ಈಗ, ನನ್ನ ಕಾರಣದಿಂದಾಗಿ ಆಗಿರುವ ಈ ಸಮಸ್ತ ವಿನಾಶದ ಬಗ್ಗೆ ವಿಷಾದವೆನಿಸುವುದಿಲ್ಲ. ಆದರೆ, ಜನತೆಗೆ ಆದ ತೊಂದರೆಗಾಗಿ ವಿಷಾದಿಸುತ್ತೇನೆ.

ದಮಯಂತಿ: ಜನತೆಯ ದುಃಖ ದೂರ ಮಾಡಲು ನಾವು ಶಕ್ತಿ ಸಂಪಾದಿಸಬೇಕು, ತತ್ಪರರಾಗಬೇಕು, ಜನತೆಯ ಪುನರ್ವಾಸದ ವ್ಯವಸ್ಥೆ ಮಾಡಬೇಕು.

ನಳ: ಹಾಂ ! ಪ್ರಿಯೆ, ನಾವೀಗ ಒಕ್ಕಲಿಗರಾಗಿ ಈ ಭೂಮಿಯನ್ನು ಉಳಬೇಕಾಗಿದೆ. ಇದರಲ್ಲಿ ಬೀಜ ಬಿತ್ತಿ ಇದನ್ನು ಸಂಪದ್ಭರಿತ ಗೊಳಿಸಬೇಕಾಗಿದೆ.

ದಮಯಂತಿ: ಹಾಗಾದರೆ ಒಕ್ಕಲಿಗರಾಗೋಣವೇ ನಾವು ?

ನಳ: ಆದರೆ ಈ ಕೆಲಸ ಕಷ್ಟಕರವಾದುದು. ನನಗೆ ನಿನ್ನ ಬಗ್ಗೆ ಕನಿಕರ ವೆನಿಸುತ್ತದೆ. ನೀನು, ಅರಮನೆಯಲ್ಲಿ ಬೆಳೆದವಳು, ಹೂವಿನ ಹಾಗೆ ಮೃದು, ಹೀಗಿರುವಾಗ ಇಂಥ ಕಷ್ಟದ ಕೆಲಸ ನಿಭಾಯಿಸಬಲ್ಲೆಯಾ ?

ದಮಯಂತಿ: ಪ್ರಿಯತಮ, ಸ್ತ್ರೀ ಕೋಮಲ ಹಾಗೂ ಮೃದುವಾಗಿದ್ದರೆ ಏನು, ಅವಳು ಕಷ್ಟಗಳನ್ನು ಮೊದಲಿನಿಂದಲೂ ಅನುಭವಿಸುತ್ತ ಬಂದಿದ್ದಾಳೆ. ನಾನು ಈ ರಾಜ್ಯದ ಪುನರ್ನಿರ್ಮಾಣಕ್ಕಾಗಿ ಎಲ್ಲ ಕಷ್ಟ ಸಹಿಸಲೂ ಸಿದ್ಧಳಿದ್ದೇನೆ.

**ನಳ:** ಹಾಗಾದರೆ ನೀನೇ ಹೇಳು, ಈ ಕೆಲಸವನ್ನು ಹೇಗೆ ಆರಂಭಿಸೋಣ.

**ದಮಯಂತಿ:** ನಾನು ಗುದ್ದಲಿಯಿಂದ ಅಗಿದು ಭೂಮಿ ಸಿದ್ಧಗೊಳಿಸುವೆ. ಈ ಮಣ್ಣಿನಲ್ಲಿ ಮಣ್ಣಾಗುವೆ.

**ನಳ:** ಮತ್ತೆ ನಾನು, ಓಂದೆ ಉಳಿಯುತ್ತಿನೇನು ?

**ದಮಯಂತಿ:** ಇಲ್ಲ, ತಾವು ಈ ಮಣ್ಣಿನ ರಾಶಿಯಲ್ಲಿಂದ ಎಲ್ಲಿಯಾದರೂ ಗೋದಿ ಅಥವಾ ಅನ್ಯ ಧಾನ್ಯದ ಬೀಜಗಳನ್ನು ಹುಡುಕಿಕೊಂಡು ಬನ್ನಿ. ನಾನು ಭೂಮಿ ಹದಗೊಳಿಸಿಡುತ್ತೇನೆ. ತಾವು ಬಂದು, ಹೊಸದಾಗಿ ಕುಂಟೆ ಹೊಡೆದು ಗೋದಿ ಬೀಜ ಬಿತ್ತಿರಿ. ದೇವರ ಕೃಪೆಯಿಂದ ಅಪಾರ ಬೆಳೆಬರಬಹುದು.

**ನಳ:** ಪ್ರಿಯೆ, ನಮ್ಮ ಈ ಕಠಿಣ ಪರಿಶ್ರಮದಲ್ಲಿ, ಈ ಹೂವಿನಂಥ ಕೋಮಲ ಮಗುವಿನ ಬಗ್ಗೆ ಕಾಳಜಿ ವಹಿಸುವವರು ಯಾರು ? ಎಲ್ಲಿಯಾದರೂ ಇದು ಅತ್ತಿತ್ತ ಹೋಗಿಬಿಡಬಾರದು.

**ದಮಯಂತಿ:** ಇಲ್ಲ, ಪ್ರಿಯತಮ, ಈ ಮಗುವಿಗಾಗಿಯೇ ಇದೆಲ್ಲ ನಡೆಯುತ್ತಿರು ವುದು. ಇವನಿಗಾಗಿಯೇ ಈ ಪುನರ್ವಾಸವಾಗಬೇಕಾಗಿದೆ.

**ನಳ:** ಇದು ಏನೋ ಸರಿಯಾದುದು, ಆದರೆ.....

**ದಮಯಂತಿ:** ಪ್ರಿಯತಮ, ಸಂಶಯಗೊಳ್ಳದಿರಿ. ಈ ಬಾಲಕ ಹೂವ್ವಿನ ಹಾಗೆ ಕೋಮಲನಾಗಿರುವಂತೆ, ವಜ್ರದ ಹಾಗೆ ಕಠೋರನೂ ಆಗಿದ್ದಾನೆ.

**ನಳ:** ಸರಿ, ಮನುಷ್ಯನಿಂದ, ಸ್ತ್ರೀ, ಬಾಲಕ, ಪುರುಷನಿಂದ ಎಲ್ಲವೂ ಸಾಧ್ಯವಾಗುತ್ತದೆ.

**ದಮಯಂತಿ:** ಹಾಂ, ಒಂದು ವೇಳೆ ಅವರೊಳಗೆ ಪ್ರೇಮವಿದ್ದರೆ ಮಾತ್ರ.
(ಒಮ್ಮೆಲೇ ನಳನ ಶರೀರದೊಂದಿಗ ಅಂಟಿಕೊಳ್ಳುತ್ತಾಳೆ, ಆಲಿಂಗನ ದಿಂದ ಮುಕ್ತರಾದಾಗ ಎದುರಿಗೆ ಕಾಮನಾ ಕಾಣಿಸಿಕೊಳ್ಳುತ್ತಾಳೆ.)

**ನಳ:** ಕಾಮನಾ, ನೀನು ಇಲ್ಲಿ ?

**ಕಾಮನಾ:** ನನ್ನ ಸ್ವಾಮಿ ಇದ್ದಲ್ಲಿ, ಮಹಾರಾಜ ! ಅದೋ ಆಶಾ ಹಾಗೂ ಕಲ್ಪನಾ ಅವರೂ ಬರುತ್ತಿದ್ದಾರೆ.
(ಒಂದು ಕ್ಷಣದ ನಂತರ ಆಶಾ ಹಾಗೂ ಕಲ್ಪನಾ ಬರುತ್ತಾರೆ.)

**ದಮಯಂತಿ:** ಕಾಮನಾ, ಆಶಾ, ಕಲ್ಪನಾ, ನೀವೆಲ್ಲ ಜೀವಂತವಾಗಿದ್ದೀರಾ ? ನನಗೆ ನಂಬುಗೆ ಹುಟ್ಟಿಸಿ.
(ಮೂವರೂ ಆಕೆಯ ಹತ್ತಿರ ಬಂದು ಕೈ ಚುಂಬಿಸುತ್ತಾರೆ.)

**ನಳ:** ನೀವು ಜೀವಂತವಷ್ಟೇ ಅಲ್ಲ, ಮೊದಲಿನ ಹಾಗೆಯೇ ತಾರುಣ್ಯ ಹಾಗೂ ಸೌಂದರ್ಯದಿಂದೊಡಗೂಡಿದ್ದೀರಿ.

**ಕಲ್ಪನಾ:** ಮಹಾರಾಜ, ತಾವು ಯುವಕರಾಗಿದ್ದೀರಿ, ನಾವೂ ತಾರುಣ್ಯವತಿಯರಾಗಿಯೇ ಇರುತ್ತೇವೆ, ಮತ್ತು ತಮ್ಮ ಎಲ್ಲ ಕೆಲಸದಲ್ಲೂ ತಮ್ಮ ಸೇವೆಗೆ ಸನ್ನದ್ಧರಾಗಿರುತ್ತೇವೆ.

**ದಮಯಂತಿ:** ನಾವು ತುಂಬ ಭಾಗ್ಯಶಾಲಿಗಳು, ಘೋರವಾದ ಸಂಕಷ್ಟಗಳಲ್ಲೂ ಸಖಿಯರು ನಮ್ಮ ಜೊತೆ ಬಿಡಲಿಲ್ಲ, ಆದೂ ಅಲ್ಲದೆ ಘೋರ ವಿಪತ್ತಿನಲ್ಲೂ ಅವರು ತಾರುಣ್ಯ ಹಾಗೂ ಸೌಂದರ್ಯದಿಂದೊಡಗೂಡಿದ್ದಾರೆ.

- ಪರದೆ -

Laser typeset at Laser Line Graphics, Bangalore and printed at Beauty Prints, Delhi.